# ದ್ರಾವಿಡ ಬ್ರಾಹ್ಮಣ




<u>ರಚಿತ :</u> ತ್ರಿಮತ ಐಕ್ಯೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



www.thraithashakam.org





# ದ್ರಾವಿಡ ಬ್ರಾಹ್ಮಣ


ರಚಿತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (72) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದಕರು

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38

ಪ್ರಥಮ ಮುದ್ರಣ : ಜುಲೈ–2016

ಪ್ರತಿಗಳು : 1000

**ಬೆಲೆ. 110/–**

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಚರಣೆಗಳು

54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.
57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಇಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.



# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ –
    ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ–
    ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು–
    ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು–
    ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು–
    ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ
    ಮಹೇಂದ್ರಜಾಲ,
    ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ
    (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–
    ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು–
    ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.



# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಶ್ರೀನಿವಾಸ**–09705864675, **ಲಕ್ಷ್ಮಿನಾರಾಯಣಾಚಾರಿ**–09440556968.

**ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**

ಶ್ರೀಕೃಷ್ಣಾ ಮೆಡಿಕಲ್ಸ್, ಪಟೇಲ್‌ನಗರ್, 3ನೇ ರಸ್ತೆ, ಹೊಸಪೇಟೆ, ಬಳ್ಳಾರಿ (ಜಿಲ್ಲೆ). K.A

Cell:9611133635, 9731816452, 09440645005

**ಬಸವರಾಜ ಅಂಗಡಿ**

(ಸಾ) (ಪೊ) ಪೋತ್ನಾಳ, (ತಾ) ಮಾನವಿ, ರಾಯಚೂರು (ಜಿ)

Cell : 9632418716

**ಜಿ. ರಾಧಾಕೃಷ್ಣಾ ರೆಡ್ಡಿ**

ಪ್ರಬೋಧಾ ನಿಲಯ. ರಿಂಗ್ ರೋಡ್, ಮರಲೂರು, ತುಮಕೂರು (ಜಿ).

ಪಿನ್–572150, Cell : 9448177812

**ಸೂರ್ಯ ಪ್ರಕಾಶ**

ಟೈಪ್ 'ಸಿ' (ಸಾ) (ಪೊ) ಶಕ್ತಿನಗರ (ತಾ), ರಾಯಚೂರು (ಜಿ)

Cell : 9611183107, 9164886981

**ಶಿವರಾಜ**

(ಸಾ)(ಕಿ) ಕುಕನೂರು (ಪೊ) ಚಿಕ್ಕಸೂಗುರು (ತಾ), ರಾಯಚೂರು (ಜಿ)

Cell : 98443 69516

**ಲೀಲಾವತಿ**

ಮಾರುತಿ ಟೆನ್ಟ್ ರೋಡ್, ಚಾಮರಾಜ ಮೊಹಲ್ಲ, ಮೈಸೂರ್–547097

Cell : 9986369118

**R.S. ವೀರಾಚಾರಿ**

ಕತ್ತರಗುಪ್ಪೆ, ವಾರ್ಡ್.ನೆಂ. –38, ಬೆಂಗಳೂರು–560085

Cell : 9036982829

**T.V. ರಮಣ**

ಕತ್ತರಗುಪ್ಪೆ, ವಾರ್ಡ್.ನೆಂ. –38, ಬೆಂಗಳೂರು–560068

Cell : 08970772028, 07411459912, 07406039453

**G. ಮನೋಹರ್**

ಮಲ್ಲಸಂದ್ರ, ಟಿ. ದಾಸರಹಳ್ಳಿ ಬೆಂಗಳೂರು–560057

Cell : 7411459912, 9448452963.

**B. ವಾತ್ಸಲ್ಯ**

ರೈಲ್ವೇ ಸ್ಟೇಷನ್ ಹತ್ತಿರ, ಪಿ.ಬಿ.ರೋಡ್, ದಾವಣಗೆರೆ–577002

Cell : 9901534677, 8880666529

**M. ನಾರಾಯಣರೆಡ್ಡಿ**

(Bsc census department retired supervisor)

ರಾಮಗುಂಡನಲ್ಲಿ ಪೋಸ್ಟ್, ವೈಟ್ ಫೀಲ್ಡ್ ರೋಡ್, ಬೆಂಗಳೂರು–560066

Cell : 9482516023

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

**ತಪ್ಪದೆ ಓದಿರಿ!** **ಓದಿಸಿರಿ!!**

## ಪ್ರಥಮ ದೈವ ಗ್ರಂಥ

# ತ್ರೈತ ಸಿದ್ಧಾಂತ ಭಗವದ್ಗೀತೆ

**(578 ಶ್ಲೋಕಗಳ ವಚನ ಗ್ರಂಥ)**

ಇದು ಆಧ್ಯಾತ್ಮಿಕ ವಿದ್ಯೆಯಲ್ಲಿ ವಿಪ್ಲವಾತ್ಮಕ ತಿರುವು ತಿರುಗಿದ ಭಗವದ್ಗೀತೆ. 55 ಶ್ಲೋಕಗಳಿಗೆ ಪೂರ್ತಿ ಭಾವ ಬದಲಾವಣೆಯೊಂದಿಗೆ ತಯಾರಾಗಿದೆ. ಮೂರು ಆತ್ಮಗಳನ್ನು ಕುರಿತು ಶಾಸ್ತ್ರಾಧಾರದಿಂದ ವಿವರಿಸಿ ಬೋಧಿಸಿದ ಮೊಟ್ಟ ಮೊದಲ ಭಗವದ್ಗೀತೆ. ಮೊದಲು ಎಷ್ಟೋ ಜನರು ಬರೆದ ಭಗವದ್ಗೀತೆಗಳಿಗೆ ನೂರಕ್ಕೆ 90ರಷ್ಟು ವಿಭಿನ್ನ ಭಾವಗಳಿಂದ ಕೂಡಿಕೊಂಡಿದೆ. ಎಷ್ಟೋ ಪ್ರತ್ಯೇಕ ಅರ್ಥಗಳೊಂದಿಗೆ ದೇವರು ಹೇಳಿದ ನಿಜ ಭಾವಗಳನ್ನು ಹೇತುಬದ್ಧವಾಗಿ ವಿವರಿಸಿರುವುದು ಮತ್ತು ಹೇತುವಾದಿಗಳು ಸಹ ಖಂಡಿಸಲಾರದ ಭಗವದ್ಗೀತೆ ಇದು ಒಂದೇ. ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲ ಎನ್ನುವುದು, ಹತ್ಯೆಯನ್ನು ವಿವರಿಸಿ ಆತ್ಮಹತ್ಯೆಯಾಗಿ ಹಾಗೆಯೇ ಆತ್ಮಹತ್ಯೆಯನ್ನು ಹತ್ಯೆಯಾಗಿ ಹೇಳುವುದು, ಇಂತಹವು ಬಹಳ ಜನರಿಗೆ ಸಹಿಸಿಕೊಳ್ಳಲಾರದಂತಹ ವಿಪ್ಲವಾತ್ಮಕ ಹಾಗೂ ಸಂಚಲನ ವಿಷಯಗಳೆಷ್ಟೋ ಈ ಗ್ರಂಥದಲ್ಲಿ ಇವೆ. ಶ್ರೀಕೃಷ್ಣನ ಯಥಾರ್ಥ ಭಾವವನ್ನು ತಿಳಿಸಿ, ವಾಸ್ತವ ಜ್ಞಾನ ಪಥದಲ್ಲಿ ನಡೆಸಿ, ಮೋಕ್ಷಗಮ್ಯವನ್ನು ಸೇರಿಸುವುದು ಈ ಗ್ರಂಥ ರಾಜ.

**ರಚಿತ : ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಬ್ರಾಹ್ಮಣ



ಮನುಷ್ಯನ ನಿವಾಸ ಭೂಮಂಡಲ. ಕೆಲವು ಪ್ರಾಂತಗಳನ್ನು ಅಥವಾ ಕೆಲವು ಗ್ರಾಮಗಳನ್ನು ಸೇರಿಸಿ ಮಂಡಲ ಎನ್ನುವುದು ಎಲ್ಲರಿಗೂ ತಿಳಿದ ವಿಷಯವೆ. ಹಾಗೇ ಕೆಲವು ದೇಶಗಳನ್ನು ಸೇರಿಸಿ ಭೂಮಂಡಲ ಎಂದು ಎನ್ನುತ್ತಿದ್ದೇವೆ. ಭೂಮಂಡಲದಲ್ಲಿ ಎಷ್ಟೋ ದೇಶಗಳು ಇವೆ. ಅಂತಹ ದೇಶಗಳಲ್ಲಿ ಭಾರತದೇಶವೂ ಸಹ ಒಂದು. ನಾವೆಲ್ಲರೂ ಭಾರತದೇಶದಲ್ಲೇ ನಿವಾಸಿಸುತ್ತಿದ್ದೇವೆ. ಭಾರತದೇಶದಲ್ಲಿ ಪ್ರಾಂತಗಳಾಗಿ ಸುಮಾರು 28 ರಾಷ್ಟ್ರಗಳು ಇವೆ. ಒಂದೊಂದು ರಾಷ್ಟ್ರವನ್ನು ಒಂದೊಂದು ಪ್ರಾಂತವಾಗಿ ಲೆಕ್ಕಿಸಿಕೊಳ್ಳುತ್ತಿದ್ದೇವೆ. ಭಾರತದೇಶವನ್ನು ಉತ್ತರ, ದಕ್ಷಿಣ ಪ್ರಾಂತಗಳಾಗಿ ವಿಭಜಿಸಿದರೆ, ಉತ್ತರ ದೇಶದಲ್ಲಿರುವ ರಾಷ್ಟ್ರಗಳಲ್ಲಿ ನಿವಾಸಿಸುವವರನ್ನು ಆರ್ಯರಾಗಿ, ದಕ್ಷಿಣ ಭಾರತದೇಶದಲ್ಲಿರುವ ರಾಷ್ಟ್ರಗಳಲ್ಲಿ ನಿವಾಸಿಸುವವರನ್ನು ದ್ರಾವಿಡರಾಗಿ ಹೇಳುತ್ತಿದ್ದೇವೆ. ಒಂದೇ ದೇಶದಲ್ಲಿನವರನ್ನು ಎರಡು ಹೆಸರುಗಳಿಂದ ಕರೆಯುವುದೇನೆಂದು ಯಾರಿಗಾದರೂ ಪ್ರಶ್ನೆ ಬರಬಹುದು. ಅದಕ್ಕೆ ನಮ್ಮ ಉತ್ತರ ಹೀಗೆ ಇದೆ. ವಾಸ್ತವಕ್ಕೆ ಆರ್ಯರು ಭಾರತದೇಶದವರಲ್ಲ. ಪೂರ್ವದಲ್ಲಿ ಭಾರತದೇಶವೆಲ್ಲಾ ನಿವಾಸಿಸುವ ಜನರನ್ನು ದ್ರಾವಿಡರು ಎನ್ನುತ್ತಿದ್ದರು. ಪೂರ್ವ ಕಾಲದಲ್ಲಿ ಉತ್ತರದ ಕಾಶ್ಮೀರದಿಂದ ಪ್ರಾರಂಭಗೊಂಡು ದಕ್ಷಿಣ ಶ್ರೀಲಂಕದ ವರೆಗು ಪೂರ್ವ ಬಂಗ್ಲಾದೇಶದಿಂದ ಪ್ರಾರಂಭಗೊಂಡು ಪಶ್ಚಿಮ ದಿಕ್ಕಿಗಿರುವ ಪಾಕಿಸ್ತಾನ್, ಆಫ್ಘಾನಿಸ್ಥಾನ್ ವರೆಗು ಭಾರತದೇಶ ವಿಸ್ತರಿಸಿತ್ತು. ವಿಶಾಲವಾದ ಭಾರತದೇಶದಲ್ಲಿ ಕೃತಯುಗದ ಕೊನೆಯಲ್ಲಿ ಸುಮಾರು ಮೂರು ಕೋಟಿ ಜನ ಭಾರತೀಯರು ಇರುತ್ತಿದ್ದರು. ಕೃತಯುಗದ ಕೊನೆಯವರೆಗು ಈ ದೇಶ ಇಂದೂದೇಶವಾಗಿಯೆ ಕರೆಯಲಾಗುತ್ತಿತ್ತು. ಭಾರತದೇಶವೆನ್ನುವ ಹೆಸರು ಕೃತಯುಗದಲ್ಲಿ ಇಲ್ಲವೇ ಇಲ್ಲ. ಕೃತಯುಗದಲ್ಲಿ ಮಧ್ಯೆ ಏಷ್ಯಾ ಖಂಡದಲ್ಲಿನ ಭೂಭಾಗದಲ್ಲಿ ಆರ್ಯರು ನಿವಾಸಿಸುತ್ತಿದ್ದರು. ಕೃತಯುಗದ ನಂತರ ತ್ರೇತಾಯುಗದಲ್ಲಿ ಮಧ್ಯೆ ಏಷ್ಯಾ ಖಂಡದಲ್ಲಿ ಸಂಭವಿಸಿದ ಬರಗಾಲದಿಂದ ತಿನ್ನುವ ತಿಂಡಿಇಲ್ಲದೆ, ಬದುಕುವು ದಕ್ಕೋಸ್ಕರ ಅಲ್ಲಿನ ಪ್ರಜೆಗಳು ಇತರ ಪ್ರಾಂತಗಳಿಗೆ ವಲಸೆ ಹೋಗುವುದು ನಡೆದಿದೆ.

ಮಧ್ಯೆ ಏಷ್ಯಾಗೆ ಸಂಬಂಧಿಸಿದವರಾದ್ದರಿಂದ ಅಂದಿನ ಕಾಲದಲ್ಲಿ ಅವರನ್ನು ಆರ್ಯರು ಎನ್ನುವುದು ನಡೆದಿದೆ. ಕೃತಯುಗವೆಲ್ಲಾ ಮಧ್ಯ ಏಷ್ಯಾದಲ್ಲಿ ಇದ್ದ ಆರ್ಯರು ತ್ರೇತಾಯುಗದಲ್ಲಿ ಗುಂಪು ಗುಂಪುಗಳಾಗಿ ತಯಾರಾಗಿ ಕಾಶ್ಮೀರ, ಸಿಂಧೂನದಿ ಸರಹದ್ದಿಗೆ ಸೇರಿಕೊಂಡು, ಅಲ್ಲಿಂದ ಆಫ್ಘಾನಿಸ್ತಾನ್, ಪಂಜಾಬ್ ವರೆಗು ಬರುವುದು ನಡೆದಿದೆ. ನಂತರ ಕಾಲ ಕಳೆಯುತ್ತಿದ್ದಂತೆ ಗುಂಪು ಗುಂಪುಗಳಾಗಿ ಉತ್ತರಪ್ರದೇಶ್, ಮಧ್ಯಪ್ರದೇಶ್ ಮೊದಲಾದ ಭೂಭಾಗವೆಲ್ಲಾ ಆಕ್ರಮಿಸಿಕೊಳ್ಳುವುದು ನಡೆದಿದೆ. ಅಲ್ಲಿಯವರೆಗು ಭಾರತ ದೇಶವೆಲ್ಲಾ ವ್ಯಾಪಿಸಿರುವ ದ್ರಾವಿಡರು ಉತ್ತರ ದೇಶವೆಲ್ಲವನ್ನೂ ಬಿಟ್ಟು ದಕ್ಷಿಣ ದೇಶಕ್ಕೆ ಸೇರಿಕೊಳ್ಳುವುದು ನಡೆದಿದೆ. ಭಾರತದೇಶಕ್ಕೆ ವಾಯುವ್ಯ ದಿಕ್ಕಿಗಿರುವ ಪರ್ವತ ಪ್ರಾಂತಗಳಿಂದ ಕೆಲವರೂ, ಸಿಂಧೂನದಿ ಮಾರ್ಗವಾಗಿ ಹಡಗುಗಳಲ್ಲಿ ಕೆಲವರೂ ಮಾರ್ಗ ಮಾಡಿಕೊಂಡು ಬಂದಿರುವ ಆರ್ಯರು ಯುದ್ಧಪ್ರಿಯರು ಆಗಿರುವುದರಿಂದ ಅವರನ್ನು ದ್ರಾವಿಡರು ತಡೆಗಟ್ಟದೆ ಹೋಗಿದ್ದಾರೆ. ತಾವು ಸ್ವತಂತ್ರವಾಗಿ ಇರಬೇಕೆಂದುಕೊಂಡ ಆರ್ಯರು ಉತ್ತರದೇಶದಿಂದ ದ್ರಾವಿಡರನ್ನು ಹೆದರಿಸಿ ಓಡಿಸಿದ್ದಾರೆ. ದ್ರಾವಿಡರು ಶಾಂತಿ ಪ್ರಿಯರು, ಹೋರಾಟಗಳಲ್ಲಿ ಆಸಕ್ತಿ ಇಲ್ಲದವರಾದ್ದರಿಂದ, ಉತ್ತರದೇಶವನ್ನು ಬಿಟ್ಟು ಕ್ರಮೇಣ ದಕ್ಷಿಣದೇಶಕ್ಕೇ ಪರಿಮಿತವಾಗಿ ಹೋಗಿದ್ದಾರೆ. ಮಧ್ಯಪ್ರದೇಶ್ ಕೊನೆಯಲ್ಲಿ ವಿಂಧ್ಯ ಪರ್ವತಗಳು ಭಯಂಕರ ಅರಣ್ಯ ಇರುವುದರಿಂದ ವಿಂಧ್ಯ ಪರ್ವತಗಳವರೆಗೆ ಆರ್ಯರು ಇದ್ದು ಹೋಗಿದ್ದಾರೆ. ಅಂದಿನಿಂದ ಉತ್ತರ ಭಾರತದೇಶವೆಲ್ಲವೂ ಆರ್ಯರ ದೇಶವೆಂದು, ದಕ್ಷಿಣ ಭಾರತದೇಶವೆಲ್ಲವು ದ್ರಾವಿಡರ ದೇಶವೆಂದು ಕರೆಯುವುದು ನಡೆದಿದೆ.

ಭಾರತದೇಶವೆನ್ನುವ ಹೆಸರಿಲ್ಲದ ಕೃತಯುಗದಲ್ಲಿ ಇಂದೂದೇಶವೆಂದು ಕರೆಯಲಾಗುತ್ತಿದೆಯೆಂದು ಹೇಳಿಕೊಂಡಿದ್ದೇವೆ. ಶ್ರೀಲಂಕ, ರಾಮೇಶ್ವರ ಮೊದಲ ಗೊಂಡು ಹಿಮಾಲಯಗಳವರೆಗು ಇಂದೂದೇಶವೆಂದು ಕರೆಯುವುದಕ್ಕೆ, ಆ ದಿನ ದೇಶದಲ್ಲಿನ ಪ್ರಜೆಗಳೆಲ್ಲರೂ ದೈವಜ್ಞಾನ ಹೊಂದಿರುವುದೇ ಕಾರಣ.

ದೈವಜ್ಞಾನ ಇರುವುದರಿಂದ ಇದು **"ಜ್ಞಾನಿಗಳ ದೇಶ"** ಎನ್ನುವ ಅರ್ಥ ಬರುವಹಾಗೆ ಪ್ರತ್ಯೇಕಿಸಿ ಇಂದೂದೇಶವೆಂದು ಹೆಸರು ಇಡುವುದು ನಡೆದಿದೆ. ಒಟ್ಟಿನಲ್ಲಿ ಪ್ರಪಂಚವೆಲ್ಲಾ ಜ್ಞಾನಿಗಳಿರುವ ದೇಶ, ಜ್ಞಾನಶಕ್ತಿ ಇರುವ ದೇಶ, ನಾವು ನಿವಾಸಿಸುವ ದೇಶ ಒಂದೇ ಆದ್ದರಿಂದ ನಮ್ಮ ದೇಶಕ್ಕೆ ಇಂದೂ ದೇಶವೆಂದು ಹೆಸರು ಬರುವುದು ನಡೆದಿದೆ. ಆದಿನ ಇಂದೂ ದೇಶವಾಗಿ ಇರುವ ದೇಶವೇ ಈ ದಿನ ಭಾರತದೇಶವಾಗಿ ಹೆಸರು ಬದಲಾಯಿಸಿಕೊಂಡಿದೆ. ಹಾಗೆ ಭಾರತದೇಶವೆಂದು ಹೆಸರಿದ್ದರೂ ಪೂರ್ವದ ವಾಸನೆಯಿಂದ ಹಿಂದೂದೇಶ ವೆಂದು ಸಹ ಈ ದಿನ ಕರೆಯಲಾಗುತ್ತಿದೆ. ಹಿಂದೂ ದೇಶವೆಂದು, ಭಾರತದೇಶ ವೆಂದೂ ಎರಡು ಹೆಸರುಗಳಿರುವ ದೇಶವಾದರೂ, ವಿದೇಶೀಯರ ದೃಷ್ಠಿಯಲ್ಲಿ ಇದಕ್ಕೆ ಮತ್ತೊಂದು ಹೆಸರು ಇದೆ. ಆ ಹೆಸರೇ ಇಂಡಿಯಾ. ಪ್ರಪಂಚದಲ್ಲಿ ಮೂರು ಹೆಸರುಗಳಿಂದ ಕರೆಯಲಾಗುತ್ತಿರುವ ದೇಶ ನಮ್ಮ ದೇಶವೇಯೆಂದು ಯಾರೂ ಮರೆಯಬಾರದು.

ಮಧ್ಯೆ ಏಷ್ಯಾದಿಂದ ಬಂದಿರುವ ಆರ್ಯರು ಮೊದಲಿಗೆ ಭಾರತದೇಶದ ವರಲ್ಲ. ಅವರ ಭಾಷೆ ಸಹ ಹಿಂದೀ ಭಾಷೆ ಅಲ್ಲ. ಅವರು ನಮ್ಮ ದೇಶಕ್ಕೆ ಬರುವುದಕ್ಕಿಂತ ಮೊದಲೇ ಲಿಪಿ ಇಲ್ಲದ ಭಾಷೆ ತಿಳಿದವರಾಗಿದ್ದರು. ಮೊದಲು ಲಿಪಿ ಇಲ್ಲದ ಸಂಸ್ಕೃತ ಭಾಷೆಯನ್ನು ಆರ್ಯರು ಭಾರತ (ಇಂದೂ) ದೇಶದೊಳಕ್ಕೆ ಆದಿನ ಅವರೊಂದಿಗೆ ಸಹ ತೆಗೆದುಕೊಂಡು ಬಂದಿದ್ದಾರೆ. ಆ ಸಮಯಕ್ಕೆ ದೇಶವೆಲ್ಲಾ ಇಂದೂಗಳಾಗಿರುವ (ಜ್ಞಾನಿಗಳಾಗಿರುವ) ಇಂದೂದೇಶದವರು, ದೇವರ ಜ್ಞಾನದೊಂದಿಗೆ ಹೆಚ್ಚಿನ ಹತ್ತಿರ ಸಂಬಂಧವಿರುವ ತೆಲುಗುಭಾಷೆಯನ್ನು ತಿಳಿದವರಾಗಿದ್ದರು. ಅಂತಹ ಸಮಯದಲ್ಲಿ ಇಂದೂ ದೇಶದಲ್ಲಿ ಪ್ರವೇಶಿಸಿದ ಆರ್ಯರು, ತಮ್ಮ ಭಾಷೆಮೇಲೆ ಪಟ್ಟು ಬಿಡದಂತೆ ಇರುವುದಕ್ಕೆ, ಒಂದು ಕಡೆ ಸಂಸ್ಕೃತ ಭಾಷೆಯನ್ನು ಬಳಸುತ್ತಾ, ಮತ್ತೊಂದು ಕಡೆ ಸಂಸ್ಕೃತದಲ್ಲಿ ಕೆಲವು ತೆಲುಗು ಪದಗಳನ್ನು, ಮತ್ತೆ ಕೆಲವು ಇತರ ಹೊಸ ಪದಗಳನ್ನು ಸೇರಿಸಿಕೊಂಡು ಒಂದು ಪ್ರತ್ಯೇಕವಾದ ಭಾಷೆಯನ್ನು ತಯಾರುಮಾಡಿ, ಅಲ್ಲಿಯವರೆಗು

ಇಂದೂಗಳು ಬಳಸುತ್ತಿರುವ ತೆಲುಗನ್ನು ತಮ್ಮವರು ಬಳಸದಂತೆ ಕಟ್ಟುನಿಟ್ಟು ಮಾಡಿಕೊಂಡಿದ್ದಾರೆ. ಆ ವಿಧವಾಗಿ ಆರ್ಯರು ತಯಾರು ಮಾಡಿದ ಭಾಷೆಯೇ ಈದಿನ ಭಾರತ ದೇಶದಲ್ಲಿ ಅತ್ಯಧಿಕವಾಗಿರುವ ಹಿಂದೀ ಭಾಷೆ. ಮೊದಲು ತೆಲುಗನ್ನು ಆಧಾರಮಾಡಿಕೊಂಡು ಹಿಂದಿ ಭಾಷೆಯನ್ನು ತಯಾರು ಮಾಡುವುದರಿಂದ, ತೆಲುಗು ಪದಗಳು ಹಿಂದೀ ಭಾಷೆಯಲ್ಲಿ ಹೆಚ್ಚಾಗಿ ಇಂದಿಗೂ ಕಾಣಿಸುತ್ತಿವೆ. ಈ ವಿಧವಾಗಿ ತ್ರೇತಾಯುಗದಲ್ಲೇ ಲಿಪಿ ಇರುವ ತೆಲುಗು, ಹಿಂದೀ ಭಾಷೆಗಳು ಎರಡು, ಒಂದು ಲಿಪಿ ಇಲ್ಲದ ಸಂಸ್ಕೃತ ಭಾಷೆ ತಯಾರಾಗಿವೆ. ತೆಲುಗು ಭಾಷೆ ತ್ರೇತಾಯುಗದಲ್ಲೇ ಕ್ರಮೇಣ ಇಳಿಕೆ ಆಗುತ್ತಾ ಬಂದು ಕೇವಲ ದಕ್ಷಿಣಾದಿಯಲ್ಲಿ ಇರುವ ಕರ್ನಾಟಕ, ಆಂಧ್ರ, ತಮಿಳನಾಡು, ಕೇರಳ ರಾಷ್ಟ್ರಗಳ ವರೆಗೇ ಪರಿಮಿತವಾಗಿ ಹೋಗಿದೆ. ಹಾಗೇ ಸಂಸ್ಕೃತಕ್ಕೆ ವಾರಣಾಸಿ ಕೇಂದ್ರವಾಗಿರುವಾಗ, ಹಿಂದೀಭಾಷೆ ಉತ್ತರ ದೇಶವೆಲ್ಲಾ ವ್ಯಾಪಿಸಿಹೋಗಿದೆ. ಆರ್ಯರು ತಯಾರು ಮಾಡಿದ ಹಿಂದೀಭಾಷೆಗೆ ಲಿಪಿಯನ್ನು ಅವರೇ ತಯಾರು ಮಾಡಿದ್ದಾರೆ ಆದ್ದರಿಂದ, ಹಿಂದೀ ಲಿಪಿಯಿಂದಲೇ ಸಂಸ್ಕೃತ ಭಾಷೆಯನ್ನು ಬರೆದುಕೊಳ್ಳುತ್ತಿದ್ದರು.

ಹಿಂದೀ ಭಾಷೆ ತಯಾರು ಆಗದವರೆಗು ಸಂಸ್ಕೃತವನ್ನು ಮಾತನಾಡು ವುದು ವಿನಃ ಬರೆಯುವುದಕ್ಕೆ ಆಗುತ್ತಿರಲಿಲ್ಲ. ಆರ್ಯರು ಇಂದೂ ದೇಶದೊಳಕ್ಕೆ ಬರುವುದಕ್ಕಿಂತ ಮೊದಲೇ ಋಗ್ವೇದವನ್ನು ಮೊದಲು ಸ್ವಲ್ಪ ಮಾತುಗಳ ರೂಪದಲ್ಲಿ ಹೇಳಿಕೊಳ್ಳುತ್ತಿದ್ದರು. ಆ ವಿಧವಾಗಿ ವೇದ ಅವರಿಗೆ ಅತ್ಯಂತ ಪ್ರೀತಿಪಾತ್ರ ವಾಗಿರುವುದೇ ಅಲ್ಲದೆ ಪೂಜ್ಯಭಾವವಾಗಿರುವುದೆಂದು ಹೇಳಬಹುದು. ಸ್ವಲ್ಪಮಟ್ಟಿಗೆ ಸಂಸ್ಕೃತ ಭಾಷೆಯಲ್ಲಿ ಮಾತುಗಳ ರೂಪದಲ್ಲಿ ಹೇಳಿಕೊಳ್ಳುವ ಋಗ್ವೇದ ಇಂದೂ ದೇಶದೊಳಕ್ಕೆ ಬಂದ ನಂತರ, ಹಿಂದೀಲಿಪಿಯನ್ನು ತಯಾರು ಮಾಡಿಕೊಂಡ ನಂತರ ಋಗ್ವೇದವನ್ನು ಸಂಪೂರ್ಣವಾಗಿ ತಯಾರು ಮಾಡುವುದು ನಡೆದಿದೆ. ತಾವು (ಆರ್ಯರು) ಇಂದೂ ದೇಶದಲ್ಲಿ ಯಾವ ಯಾವ ಪ್ರಾಂತಗಳನ್ನು ಮೊದಲು ಆಕ್ರಮಿಸಿಕೊಂಡಿರುವುದು, ಆ ಪ್ರಾಂತ ವೊಂದರ ವಿಶೇಷಗಳನ್ನು

ಋಗ್ವೇದದಲ್ಲಿ ಬರೆದುಕೊಂಡಿದ್ದಾರೆ. ನಂತರ ಇಂದೂದೇಶದಲ್ಲಿ ಎಲ್ಲೆಲ್ಲಿಗೆ ಹೋಗಿರುವುದು ಉಳಿದ ವೇದಗಳಲ್ಲಿ ಇರುವಹಾಗೆ ನಮ್ಮ ದೇಶ ಮೊದಲ ಪ್ರಧಾನಿಯಾದ ಜವಹರ್‌ಲಾಲ್ ನೆಹ್ರೂ ಅವರು ತನ್ನ ಮಗಳಾದ ಇಂದಿರಾಗಾಂಧೀಗೆ ಬರೆದ ಒಂದು ಲೇಖನದಲ್ಲಿ ವಿವರಿಸಿ ಬರೆಯುವುದು ನಡೆದಿದೆ. ಆರ್ಯರು ರಚನಾ ಸಾಮರ್ಥ್ಯ ಇರುವವರು. ಪ್ರಪಂಚ ವಿಷಯಗಳಲ್ಲಿ ಮೇಧಾವಿಗಳು. ಆದ್ದರಿಂದ ಅವರು ಮೊದಲು ವೇದ ಭಾಗಗಳನ್ನು ಚಿಕ್ಕ ಚಿಕ್ಕ ವ್ಯಾಸಗಳಾಗಿ ಬರೆದುಕೊಂಡಿದ್ದಾರೆ. ವೇದಗಳು ಆರ್ಯರ ಮಾತೃಭಾಷೆ ಆದ ಸಂಸ್ಕೃತದಲ್ಲೇ ಹಿಂದೀ ಲಿಪಿಯಿಂದ ಬರೆದುಕೊಂಡಿದ್ದಾರೆ. ಸಂಸ್ಕೃತ ಪುನಃ ನುಡಿಯುವುದಕ್ಕೆ ಅನುವಾಗಿ ಇರುವ ಭಾಷೆ. ಉಚ್ಛಾರಣೆಗೆ ತೆಲುಗಿನಲ್ಲಿ ಪದ್ಯ ಹೇಗಿರುತ್ತದೋ ಸಂಸ್ಕೃತದಲ್ಲಿ ಶ್ಲೋಕ ಸಹ ಹಾಗೇ ಇರುತ್ತದೆ. ತೆಲುಗಿನಲ್ಲಿನ ಪದ್ಯವನ್ನು ಮೊದಲು ಒಂದು ಪದವನ್ನು ಹೇಳಿದರೆ ಉಳಿದ ಪದ್ಯವೆಲ್ಲವೂ ಅದಷ್ಟಕ್ಕದೇ ಬಾಯಿಗೆ ಬರುವಹಾಗೆ ಪದಗಳ ಹೊಂದಾಣಿಕೆ ಇರುತ್ತದೆ. ತೆಲುಗು ಭಾಷೆಯಲ್ಲಿ ಪದ್ಯಗಳ ಹೊಂದಾಣಿಕೆಯಲ್ಲಿ ಅಂತಹ ಮಾಧುರ್ಯವಿರುವುದರಿಂದ, ಹೊಂದಿಸಲಾಗಿರುವ ಕಲ್ಲಿನ ಕುಪ್ಪೆಯಲ್ಲಿನ ಒಂದು ಕಲ್ಲನ್ನು ಕೀಳಿದಷ್ಟು ಮಾತ್ರಕ್ಕೆ ಉಳಿದ ಕಲ್ಲುಗಳೆಲ್ಲವೂ ಅವಷ್ಟಕ್ಕವೇ ಗಲಗಲಾ ಬಂದು ಬಿದ್ದಂತೆ, ಪದಗಳಿಂದ ಹೊಂದಿಸಲಾಗಿರುವ ಪದ್ಯದಲ್ಲಿನ ಒಂದು ಪದವನ್ನು ಹೇಳಿದರೆ, ಉಳಿದ ಪದಗಳೆಲ್ಲವೂ ಧಾರಾವಾಹಿಕವಾಗಿ ಸಾಲಾಗಿ ಬರುವುದನ್ನು ನೋಡಿದ ಆರ್ಯರು ತೆಲುಗು ಭಾಷೆಯನ್ನು ನೋಡಿ ಆಶ್ಚರ್ಯಪಟ್ಟರೂ, ಅದು ತಮ್ಮ ಭಾಷೆ ಅಲ್ಲ ಅನ್ನುವ ಭಾವದಿಂದ ಅಸೂಯಪಟ್ಟು, ತೆಲುಗು ಭಾಷೆಯಲ್ಲಿನ ಪದ್ಯವನ್ನು ಹೋಲುವಹಾಗೆ ಸಂಸ್ಕೃತದಲ್ಲಿ ಯಾವುದೋ ಒಂದು ತಯಾರು ಮಾಡಬೇಕೆಂದು ಬಹಳ ಕಾಲ ಪ್ರಯತ್ನಿಸಿ, ಕೊನೆಗೆ ತೆಲುಗಿನಲ್ಲಿರುವ ವ್ಯಾಕರಣವನ್ನು ಹೋಲಿದ ಚಂಧಸ್ಸನ್ನು ಸಂಸ್ಕೃತದಲ್ಲಿ ತಯಾರು ಮಾಡಿಕೊಂಡಿದ್ದಾರೆ. ಸಂಸ್ಕೃತದಲ್ಲಿ ತಯಾರು ಮಾಡಿಕೊಂಡ ಚಂಧಸ್ಸನ್ನು ಅನುಸರಿಸಿ ಛಂದೋಬದ್ಧವಾಗಿ ಶ್ಲೋಕವನ್ನು ತಯಾರು ಮಾಡುವುದು ಕಲಿತುಕೊಂಡಿದ್ದಾರೆ.

ಆ ವಿಧವಾಗಿ ತಯಾರಾದ ಶ್ಲೋಕಗಳು ಪದ್ಯವೊಂದರ ಉಚ್ಛಾರಣೆ ಯಂತಿದ್ದು, ಒಂದು ಪದವನ್ನು ನುಡಿದ ಕೂಡಲೇ ಉಳಿದ ಪದಗಳನ್ನು ಸಹ ಹಿಂದಿಂದೆಯೆ ಬಾಯಿಗೆ ಬರುವಹಾಗೆ ಇರುವುದರಿಂದ, ತೆಲುಗಿನಲ್ಲಿ ಎಷ್ಟೋ ಕಾವ್ಯಗಳನ್ನು ಕವಿಗಳು ಪದ್ಯಗಳಲ್ಲಿ ಬರೆದಹಾಗೆ ಆರ್ಯರು ತಮ್ಮ ಚರಿತ್ರೆಯನ್ನು, ವೇದಗಳನ್ನು, ಉಪನಿಷತ್ತುಗಳನ್ನು, ಭಗವದ್ಗೀತೆಯನ್ನು ಮೊದಲಾದವುಗಳನ್ನೆಲ್ಲಾ ಶ್ಲೋಕಗಳ ರೂಪದಲ್ಲಿ ಬರೆದಿದ್ದಾರೆ. ಕೃತಯುಗದ ನಂತರ ತ್ರೇತಾಯುಗದಲ್ಲಿ ಸಂಸ್ಕೃತವನ್ನು ಅಭಿವೃದ್ಧಿ ಮಾಡಿಕೊಂಡ ಆರ್ಯರು ಹಿಂದೀಭಾಷೆ ಲಿಪಿಯನ್ನು ಉಪಯೋಗಿಸಿ ಮೊದಲು ತ್ರೇತಾಯುಗದಲ್ಲೇ ರಾಮಾಯಣವನ್ನು ಸಂಸ್ಕೃತ ಶ್ಲೋಕಗಳಲ್ಲಿ ಬರೆದಿದ್ದಾರೆ. ಹಾಗೆ ಪ್ರಾರಂಭವಾದ ಅವರ ರಚನೆಗಳು ಮಹಾ ಭಾರತದ ವರೆಗೂ ಸಾಗಿದವು. ಹಾಗೇ ಕಲಿಯುಗದ ವರೆಗು ಬರೆಯಲಾಗಿರುವ ಎಷ್ಟೋ ಸಂಸ್ಕೃತ ಗ್ರಂಥಗಳನ್ನು, ನಮ್ಮ ತೆಲುಗು ಕವಿಗಳು ಸಂಸ್ಕೃತದಿಂದ ತೆಲುಗಿನೊಳಗೆ ಬರೆದು ನಮಗೆ ಕೊಟ್ಟಿದ್ದಾರೆ. ಸಂಸ್ಕೃತದಲ್ಲಿ ಬರೆಯಲಾಗಿರುವ ಭಾರತವನ್ನು ನಮ್ಮ ತೆಲುಗು ಕವಿಗಳಾದ ನನ್ನಯ, ತಿಕ್ಕನ, ಎರ್ರಾಪ್ರಗಡ ಎನ್ನುವವರು ಮೂವರು ಸೇರಿ ತೆಲುಗಿನಲ್ಲಿ ಪದ್ಯಗಳ ರೂಪದಲ್ಲಿ ಬರೆದು ಕೊಟ್ಟಿದ್ದಾರೆ. ಹಾಗೆ ಪದ್ಯ ರೂಪದಲ್ಲಿ ವರ್ಣಿಸಿದ ವಿಧಾನ ಎಷ್ಟೋ ವಿಶೇಷವಾಗಿರುವಂತೆ ಪದ್ಯಗಳ ವಿವರ ತಿಳಿದವರಿಗೆ ತಿಳಿಯುತ್ತದೆ. ಆರ್ಯರು ಪದ್ಯದಲ್ಲಿನ ಉಚ್ಛಾರಣೆ ಅಂದವನ್ನು ಹೆಚ್ಚಿಸುವಹಾಗೆ ಶ್ಲೋಕಗಳನ್ನು ತಯಾರು ಮಾಡಬೇಕೆಂಬ ಉದ್ದೇಶದಿಂದ ಮಾಡಿದರೂ! ಅವರು ಬರೆದ ಕಾವ್ಯಗಳು, ಇತಿಹಾಸಗಳು ಎಲ್ಲವೂ ತೆಲುಗು ಪದ್ಯಗಳಲ್ಲೇ ಶ್ಲೋಕಗಳಿಗಿಂತ ಅಂದವಾಗಿ ಕಾಣಿಸುತ್ತಿವೆ. ಈಗಿನ ಮನುಷ್ಯರಿಗೆ ಚರಿತ್ರೆಯಲ್ಲಿ ನಡೆದ ಸಮಾಚಾರ ಬಹಳ ಮಟ್ಟಿಗೆ ತಿಳಿಯದಂತೆ ಹೋಗುವುದರಿಂದ, ಆರ್ಯರು ಗತದಲ್ಲಿ ಮಾಡಿದ ಅಸೂಯೆ ಕೆಲಸಗಳೆಲ್ಲವೂ ಈದಿನ ದ್ರಾವಿಡರಿಗೆ ಸ್ವಲ್ಪವೂ ತಿಳಿಯದಂತೆ ಹೋಗಿವೆ. ಅಷ್ಟೇ ಅಲ್ಲದೆ ನಾವು ದ್ರಾವಿಡ ಜಾತಿಯವರೆನ್ನುವ ವಿಷಯವೂ ಸಹ ದಕ್ಷಿಣ ದೇಶದವರು ಮರೆತುಹೋಗಿದ್ದಾರೆ. ಆದರೂ ಆರ್ಯರ ಸಂತತಿಯಾದ ಉತ್ತರ ದೇಶದವರು ಇಂದಿಗೂ ಸಹ ಯಾರಿಗೂ ತಿಳಿಯದಂತೆ, ದ್ರಾವಿಡರ ಮೇಲೆ

ವಿಪಕ್ಷ ತೋರಿಸುತ್ತಲೇ ಇದ್ದಾರೆ. ಇಲ್ಲಿಯವರೆಗು ಆರ್ಯರ ದ್ರಾವಿಡರ ಭಾಷೆ ವಿಷಯವನ್ನು ಕುರಿತು ತಿಳಿದುಕೊಂಡಿದ್ದೇವೆ. ಈಗ ದ್ರಾವಿಡರಿಗೆ ದ್ರಾವಿಡರೆನ್ನುವ ಹೆಸರು ಹೇಗೆ ಬಂದಿದೆಯೋ ತಿಳಿದುಕೊಳ್ಳೋಣ.

ಸೃಷ್ಟ್ಯಾದಿಯಲ್ಲಿ ದೇವರು ತನ್ನ ಜ್ಞಾನವನ್ನು ಮನುಷ್ಯರಿಗೆ ತಿಳಿಸುವ ಸಲುವಾಗಿ, ಪಂಚಭೂತಗಳಲ್ಲಿ ದೊಡ್ಡದಾದ ಆಕಾಶ ಎನ್ನುವ ಭೂತದಿಂದ ತನ್ನ ಜ್ಞಾನವನ್ನು ಶಬ್ದರೂಪದಲ್ಲಿ ಸೂರ್ಯನು ಕೇಳುವ ಹಾಗೆ ಹೇಳಿಸಿದ್ದಾನೆ. ಸೂರ್ಯನು ಉರಿಯುವ ದೊಡ್ಡ ಗೋಳವಾಗಿ ಇದ್ದರೂ, ಅದು ಸೂರ್ಯನ ಸ್ಥೂಲ ಶರೀರ ಮಾತ್ರವೇ. ಸೂರ್ಯನು ಆಕಾಶವಾಣಿಯಿಂದ ಬಂದಿರುವ ಶಬ್ಧವನ್ನು ತನ್ನ ಸೂಕ್ಷ್ಮ ಶರೀರದಲ್ಲಿನ ಬುದ್ಧಿ ಯಿಂದ ಗ್ರಹಿಸಿಕೊಂಡು, ತಾನು ಕೇಳಿದ ಜ್ಞಾನವೆಲ್ಲವನ್ನೂ ಭೂಮಿಮೇಲಿರುವ ಮನುವು ಎನ್ನುವ ಒಬ್ಬ ವ್ಯಕ್ತಿಗೆ ಹೇಳಿದ್ದಾನೆ. ಮೊದಲು ಒಂದು ಭೂತ ಹೇಳಿದ ವಿಷಯವನ್ನು ಗ್ರಹ ಗ್ರಹಿಸಿ, ಅದೇ ವಿಷಯವನ್ನೇ ಮನುವು ಎನ್ನುವ ಮನುಷ್ಯನಿಗೆ ಹೇಳುವುದು ನಡೆದಿದೆ. ಭೂಮಂಡಲದಲ್ಲಿ ಅನೇಕ ದೇಶಗಳಿದ್ದರೂ ಅನೇಕ ಜನ ಮನುಷ್ಯರಿದ್ದರೂ, ಇಂದೂದೇಶವಾದ (ಭಾರತದೇಶವಾದ) ಈ ದೇಶದಲ್ಲಿರುವ ಮನುಷ್ಯನಿಗೇ ಸೂರ್ಯನು ಹೇಳುವುದಕ್ಕೆ ಕಾರಣವೇನಾದರೂ ಇದೆಯಾ? ಎಂದು ನನಗೇ ಪ್ರಶ್ನೆ ಬಂದಿದೆ. ಆಗ ನೀವಾದರೆ ನನ್ನನ್ನು ಕೇಳಬಹುದಾಗಲೀ, ನನಗೇ ಪ್ರಶ್ನೆ ಬಂದಾಗ ನಾನು ಸಹ ಉತ್ತರಕ್ಕೋಸ್ಕರ ಯಾರನ್ನೋ ಒಬ್ಬರನ್ನು ಕೇಳಬೇಕಾಗಿದೆ ಅಲ್ಲವೆ! ನನಗೆ ಬಂದಿರುವ ಪ್ರಶ್ನೆಯನ್ನು ಕುರಿತು ಇತರರನ್ನು ಯಾರನ್ನೂ ಕೇಳುವುದಿಲ್ಲವೆಂದು ಬಹಳ ಜನರಿಗೆ ತಿಳಿದಿದೆ. ನಾನು ಕೇಳುವುದು ನನ್ನ ಪಕ್ಕದವನನ್ನೇ (ನನ್ನ ಹತ್ತಿರದಲ್ಲಿರುವವನನ್ನೇ). ನನ್ನ ಪಕ್ಕದಲ್ಲಿರುವವನು ನನಗೆ ಗೊತ್ತು ಆದ್ದರಿಂದ,  ಆತನನ್ನು ಕೇಳಿದರೆ, ನನ್ನ ಹಿತನು ಸ್ನೇಹಿತನು ಆದ ಆತನು ಈ ವಿಧವಾಗಿ ಹೇಳುತ್ತಿದ್ದಾನೆ.

ಖಗೋಳದಲ್ಲಿ ಮೊದಲು ದೈವಜ್ಞಾನವನ್ನು ತಿಳಿದವನು ಸೂರ್ಯನು ಒಬ್ಬನೇ. ಸೂರ್ಯನು ಎಲ್ಲ ದಿಕ್ಕುಗಳಲ್ಲಿ ತನ್ನ ಕಿರಣಗಳನ್ನು ಪ್ರಜ್ವಲಿಸುವವನು,

ತನ್ನ ಸೂಕ್ಷ್ಮ ಶರೀರದೊಂದಿಗೆ ಎಲ್ಲಿಗಾದರೂ ಹೋಗಬಲ್ಲನು. ಆದ್ದರಿಂದ ಮೊಟ್ಟಮೊದಲು ದೈವಜ್ಞಾನಕ್ಕೆ ಅರ್ಹನಾಗಿದ್ದಾನೆ. ಸೂರ್ಯನು ತನ್ನ ಸೂಕ್ಷ್ಮ ಶರೀರದಿಂದ ಭೂಮಿಮೇಲೆ ಮನುವಿಗೆ ಜ್ಞಾನ ಹೇಳುವುದರಲ್ಲಿ ಇಲ್ಲಿಯವರೆಗು ಪ್ರಪಂಚದಲ್ಲಿ ತಿಳಿಯದ ಕಾರಣ ಇದೆ. ಮನುವು ಎಂಬ ವ್ಯಕ್ತಿ ನಿವಾಸಿಸುವ ದೇಶವೇ ಅದಕ್ಕೆ ಮುಖ್ಯ ಕಾರಣವೆಂದು ಹೇಳಬಲ್ಲೆವು. ಅದರ ನಂತರ ಆ ದಿನಗಳಲ್ಲಿ ತಾನು ಜೀವಿಸುವುದಕ್ಕೆ ಭೂಮಿಮೇಲೆಗೆ ಬಂದಿಲ್ಲವೆಂದು, ತಾನು ತಿಳಿಯಬೇಕಾಗಿರುವುದು ಏನೋ ಇದೆಯೆಂದು, ಜೀವನದಲ್ಲಿ ಎಷ್ಟೋ ಅಸಂತೃಪ್ತಿಯಾಗಿರುವವನು ಮನುವು. ಆದ್ದರಿಂದ ಆತನಿಗೆ ತಿಳಿದುಕೊಳ್ಳಬೇಕೆಂಬ ಶ್ರದ್ಧೆ ಇರುವುದರಿಂದ ಆತನಿಗೇ ಜ್ಞಾನವನ್ನು ಹೇಳುವುದು ನಡೆದಿದೆ. ಆತನ ಶ್ರದ್ಧೆಗಿಂತ ಮೊದಲು ಆತನು ನಿವಾಸಿಸುವ ದೇಶ ಮುಖ್ಯಕಾರಣವೆಂದು ಹೇಳಿದ್ದೇವಲ್ಲವೆ! ಅದು ಹೇಗೆ ಮುಖ್ಯವೆಂದರೆ!

ಒಂದು ಬಾರಿ ಭೂಮಂಡಲದಲ್ಲಿನ 194 ದೇಶಗಳೆಲ್ಲವನ್ನೂ ಭೂಗೋಳ ವೊಂದರ ಚಿತ್ರಪಟದಲ್ಲಿ ಗಮನಿಸಿದರೆ 194 ದೇಶಗಳಲ್ಲಿ ಯಾವ ದೇಶಕ್ಕೂ ಇಲ್ಲದ ಆಕಾರ ಪೂರ್ವವಿರುವ ಇಂದೂ ದೇಶಕ್ಕೆ ಇತ್ತು. ಒಬ್ಬ ಮನುಷ್ಯ ತನ್ನ ಬಲ ಭುಜದಮೇಲೆ ಒಂದು ಸಣ್ಣ ಮೂಟೆಯನ್ನು ಹೊತ್ತುಕೊಂಡು ಹೋಗುವಾಗ ಹೇಗೆ ಇರುತ್ತದೋ, ಅದಕ್ಕೆ ಹತ್ತಿರ ಹೋಲಿಕೆಗಳಿರುವ ಆಕಾರ ಇಂದೂದೇಶಕ್ಕೆ ಇರುವಹಾಗೆ, ಆ ಚಿತ್ರಪಟವನ್ನು ಗಮನಿಸುವವರೆಲ್ಲರೂ ಗ್ರಹಿಸಬಹುದು. ದೊಡ್ಡದಾದ ಏಷ್ಯಾ ಖಂಡದಲ್ಲಿ ಇಂದೂದೇಶ ಪ್ರತ್ಯೇಕವಾದ ಒಂದು ಉಪ ಖಂಡದ ಹಾಗೆ ಇದ್ದೂ, ಒಂದು ಪ್ರತ್ಯೇಕವಾದ ಆಕಾರವನ್ನು ಹೊಂದಿದೆ. ಹಾಗೆ ಇರುವಂತೆ ದೇವರೇ ಸೃಷ್ಟಿಸಿದ್ದಾನೆ. ಹಾಗೆ ಮನುಷ್ಯ ಆಕಾರದಂತೆ ಪ್ರತ್ಯೇಕವಾಗಿ ಇರುವ ಚಿತ್ರವನ್ನು ನಂತರ ಪುಟ ಚಿತ್ರದಲ್ಲಿ ನೋಡೋಣ.

ಪಟದಲ್ಲಿ ಸುಮಾರು ಮನುಷ್ಯ ಆಕಾರವನ್ನು ಹೋಲಿದ ಇಂದೂದೇಶ ಕಾಣಿಸುತ್ತಿದೆ. ಶ್ರೀಲಂಕ ಕಾಲಿನಕೆಳಗೆ ಆಧಾರವಾದ ಭೂಮಿಯಂತೆ ಕಾಣಿಸುತ್ತಿರುವಾಗ ಪಶ್ಚಿಮ ಪರ್ವತಗಳು, ಪೂರ್ವ ಪರ್ವತಗಳು ಎರಡು




ಕಾಲುಗಳಂತೆ ಇರುವಾಗ, ವಿಂಧ್ಯ ಪರ್ವತಗಳು ಸೊಂಟದಂತೆ ಇವೆ. ಇಲ್ಲಿ ಪಾಕಿಸ್ಥಾನ್ ಬಲಕೈಯಾಗಿ, ಅಸ್ಸಾಮ್, ನಾಗಾಲಾಂಡ್‌ಗಳು ಎಡಕೈಯಾಗಿ ಇರುವಾಗ, ಪೂರ್ವದಲ್ಲಿ ಧೃತರಾಷ್ಟ್ರನ ಹೆಂಡತಿ ಗಾಂಧಾರಿ ಹುಟ್ಟಿದ ದೇಶ ಗಾಂಧಾರದೇಶವಾದ ಇಂದಿನ ಅಫ್ಘಾನಿಸ್ಥಾನ್ ಮೂಟೆಯಂತೆ ಇರುವಾಗ, ಜಮ್ಮೂಕಾಶ್ಮೀರ ತಲೆಯಂತೆ ಇರುವಹಾಗೆ ಗ್ರಹಿಸಬಹುದು. ಈ ದಿನ ಇತರ ದೇಶವಾದ ಇಂದಿನ ಪಾಕಿಸ್ಥಾನ್, ಆಫ್ಘಾನಿಸ್ಥಾನ್, ಹಾಗೇ ಮತ್ತೊಂದು ಕಡೆ ಇರುವ ನೇಪಾಲ್, ಭೂಟಾನ್, ಬಂಗ್ಲಾದೇಶ್, ಶ್ರೀಲಂಕ ಮೊದಲಾದ ದೇಶಗಳು

ಎಲ್ಲವೂ ಅಂದಿನ ಭಾರತದೇಶ ದಲ್ಲಿನ ಅಂತರ್ಭಾಗಗಳೇ ಎಂದು ತಿಳಿಯಬೇಕು. ಈ ವಿಧವಾಗಿ ಪ್ರಪಂಚದಲ್ಲಿ ಯಾವ ದೇಶದಲ್ಲಿಲ್ಲದ ಪ್ರತ್ಯೇಕತೆ ಇಂದೂದೇಶ ವೊಂದರ ಆಕಾರದಲ್ಲಿ ಇರುವುದರಿಂದ, ಒಟ್ಟು ಪ್ರಪಂಚದಲ್ಲಿ ಈ ದಿನ ಭಾರತದೇಶವಾಗಿರುವ ನಮ್ಮ ದೇಶ ದೈವಜ್ಞಾನಕ್ಕೆ ಅರ್ಹತೆ ಪಡೆದಿದೆ. ಕರ್ಮವೆಂಬ ಭಾರವನ್ನು ಹೋರುತ್ತಾ, ನಿತ್ಯವೂ ಕರ್ಮವನ್ನು ಅನುಭವಿಸುವ ಮನುಷ್ಯಜಾತಿಗೇ ನಾನು ಹೇಳುತ್ತಿರುವ ಜ್ಞಾನ ಎನ್ನುವಹಾಗೆ, ಮಾನವಾಕಾರದಲ್ಲಿರುವ ಭಾರತದೇಶದಲ್ಲಿಯೇ ಮೊದಲ ಜ್ಞಾನವನ್ನು ಸೂರ್ಯನು ಹೇಳಿ, ಇಂದೂ ದೇಶಕ್ಕೆ ಸೂರ್ಯನು ಆದಿ ಗುರುವಾಗಿದ್ದಾನೆ.

ಶ್ರೀಲಂಕಗೆ ಅತಿ ಸಮೀಪದಲ್ಲಿರುವ ರಾಮೇಶ್ವರಕ್ಕೆ ಹತ್ತಿರವಾಗಿ ನಿವಾಸಿಸುವ ಮನುವು ಎಂಬ ವ್ಯಕ್ತಿಗೆ ಸೂರ್ಯನು ಮೊದಲು ಜ್ಞಾನ ಹೇಳುವುದಾಗಿದೆ. ಆ ವಿಧವಾಗಿ ಆದಿಯಲ್ಲಿ ಪ್ರಥಮವಾಗಿ ಭೂಮಿಮೇಲೆಗೆ ಜ್ಞಾನ ಬಂದು ಸೇರಿದೆ. ಹಾಗೆ ಬಂದಿರುವ ಜ್ಞಾನ ಸ್ವತಹವಾಗಿ ದೇವರೇ ಒಂದು ಭೂತದಿಂದ ಹೇಳಿಸಿರುವುದರಿಂದ, ಅದೇ ಜ್ಞಾನವನ್ನೇ ಸೂರ್ಯನು ಕೇಳಿ ಹೇಳಿರುವುದರಿಂದ ನಮ್ಮ ದೇಶದೊಳಗೆ ಎಲ್ಲ ದೇಶಗಳಿಗಿಂತ ಮೊದಲು ದೈವಜ್ಞಾನ ಪ್ರವೇಶಿಸಿದೆ. ದಕ್ಷಿಣ ಭಾರತದೇಶದಲ್ಲಿ ಪ್ರವೇಶಿಸಿದ ಜ್ಞಾನ ಕೃತಯುಗದಲ್ಲಿ ಭಾರತದೇಶವೆಲ್ಲಾ ವ್ಯಾಪಿಸಿ ಪ್ರತಿ ಮನುಷ್ಯ ಜ್ಞಾನಸಂಪನ್ನ ನಾಗಿರುತ್ತಿದ್ದನು. ಪ್ರತಿ ಮನುಷ್ಯ ಜ್ಞಾನ ಸಂಪತ್ತು ಹೊಂದಿರುವುದರಿಂದ ಕೃತಯುಗದ ಪ್ರಾರಂಭದಲ್ಲೇ ನಮ್ಮ ದೇಶ (ಭಾರತದೇಶ) ಜ್ಞಾನಿಗಳ ದೇಶವೆಂದು ಅರ್ಥಬರುವಹಾಗೆ ಇಂದೂದೇಶವೆಂದು ಕರೆಯಲಾಗುತ್ತಿತ್ತು. ಇಂದೂ ಅಂದರೆ ಚಂದ್ರನು ಎಂದು ಅರ್ಥ. ಚಂದ್ರನು ಜ್ಞಾನಕ್ಕೆ ಗುರುತಾಗಿ ಇರುವುದರಿಂದ ಚಂದ್ರನ ಹೆಸರನ್ನು ಹೊಂದಿರುವಹಾಗೆ ಇಂದೂದೇಶವೆಂದು ಆದಿನ ಹೆಸರು ಇಡುವುದು ನಡೆದಿದೆ. ಆದಿನ ಮನುಷ್ಯರ ನಿವಾಸವಾದ ಪಟ್ಟಣಗಳೆಲ್ಲವೂ ಅರ್ಧ ಚಂದ್ರಾಕಾರದಿಂದಲೇ ನಿರ್ಮಿಸಿಕೊಂಡಿದ್ದಾರೆ. ಗಂಗಾನದಿ ಮೊದಲಾದ ಕೆಲವು ನದಿಗಳು ಎಷ್ಟೋ ಕಡೆ ಅರ್ಧಚಂದ್ರಾಕೃತಿ ಆಕಾರವನ್ನು ಹೊಂದಿದಂತೆ

ಡೊಂಕು ತಿರುಗಿವೆ. ಅಲಹಾಬಾದ್‌ನಲ್ಲಿ ಗಂಗಾನದಿ ಅದ್ಭುತವಾಗಿ ಅರ್ಧ ಚಂದ್ರಾಕೃತಿಯಲ್ಲಿ ತಿರುಗಿದೆ. ಕಾಶೀ ಮೊದಲಾದ ನಗರಗಳು ಅರ್ಧ ಚಂದ್ರಾಕಾರದಲ್ಲಿ ನಿರ್ಮಿಸಲ್ಪಟ್ಟಿವೆ. ಅಷ್ಟೇ ಅಲ್ಲದೆ ಭಾರತ ದೇಶವೆಲ್ಲಾ ಜ್ಞಾನಮಯವಾಗಿ ಇರುವುದರಿಂದ ಅರ್ಧಚಂದ್ರಾಕಾರದ ಹೆಸರು ನೆನಪಿರುವಹಾಗೆ ಇಂದೂ ದೇಶವೆಂದು ಮುಖ್ಯವಾದವರು ಹೇಳಿರುವಾಗ, ಎಲ್ಲರೂ ಅವರ ಮಾತನ್ನು ಗೌರವಿಸಿ ಈ ದೇಶವನ್ನು ಇಂದೂ ದೇಶವೆಂದು, ಇಂದೂಗಳ ದೇಶವೆಂದು ಅನ್ನುತ್ತಿದ್ದರು. ಈ ವಿಧವಾಗಿ ಪ್ರಪಂಚದಲ್ಲಿ ಯಾವ ದೇಶಕ್ಕೂ ಇಲ್ಲದ ಹೆಸರು ನಮ್ಮ ದೇಶಕ್ಕೆ ಬರುವುದು ಈ ದೇಶದಲ್ಲಿ ಹುಟ್ಟಿದ ನಮ್ಮೆಲ್ಲರಿಗೂ ಗರ್ವಕಾರಣವೇ.

ಈಗಿನ ಕಾಲದಲ್ಲಿ ಭಾರತದೇಶಕ್ಕೆ ಪೂರ್ತಿ ದಕ್ಷಿಣದಲ್ಲಿರುವ ಶ್ರೀಲಂಕ ತ್ರೇತಾಯುಗದಲ್ಲಿ (ತ್ರೈತಾಯುಗದಲ್ಲಿ) ಇಂದೂದೇಶವಾದ ಭಾರತ ದೇಶ ದೊಂದಿಗೆ ಸೇರಿಕೊಂಡಿತ್ತು. ಸಮುದ್ರದ ಅಂಚಿನಲ್ಲಿ ಇರುವುದಿಂದ ಪ್ರಕೃತಿ ಉಪದ್ರವಗಳಾದ ತುಫಾನ್‌ಗಳು ಮತ್ತು ಸುನಾಮೀಗಳ ಕಾರಣದಿಂದ ಸ್ವಲ್ಪ ದೂರ ಬಿಟ್ಟುಹೋಗಿ ಪ್ರತ್ಯೇಕವಾದ ಭೂಮಿಯಾಗಿ, ಇತರದೇಶವಾಗಿ ಕಾಣಿಸುತ್ತಿದೆ. ತ್ರೈತಾಯುಗದಲ್ಲಿ ಸಹ ಭಾರತದೇಶದೊಂದಿಗೆ ಬೆರೆತಿರುವುದರಿಂದ ಲಂಕ ಪ್ರಾಂತವು ಸಹ ದ್ರಾವಿಡ ರಾಜ್ಯದೊಳಗೆ ಸೇರಿರುವುದೇಯೆಂದು ಹೇಳಬಹುದು. ಒಂದು ಅಂದಾಜಿನ ಪ್ರಕಾರ ದ್ವಾಪರಯುಗ ಮಧ್ಯಕಾಲದಲ್ಲಿ ಲಂಕ ಭಾರತದೇಶದಿಂದ ಬೇರೆಯಾಗಿ ಪ್ರತ್ಯೇಕ ದೇಶವಾಗಿದೆ. ಭೌಗೋಳಿಕವಾಗಿ ಮನುಷ್ಯ ಆಕೃತಿಯನ್ನು ಹೊಂದಿರುವ ಭಾರತದೇಶವನ್ನು ಕೃತಯುಗದಲ್ಲೇ ಇಂದೂದೇಶವೆನ್ನುತ್ತಿದ್ದರೆಂದು ಹೇಳಿಕೊಂಡಿದ್ದೇವೆ. ತ್ರೇತಾಯುಗದಲ್ಲಿ ಆರ್ಯರು ಇಂದೂದೇಶವನ್ನು ಆಕ್ರಮಿಸಿಕೊಳ್ಳುತ್ತಾ ಬಂದು, ಉತ್ತರ ಭಾರತದೇಶದಲ್ಲಿನ ಇಂದೂಗಳೆಲ್ಲರನ್ನೂ ದಕ್ಷಿಣ ದೇಶಕ್ಕೆ ಓಡಿಸುವುದು ನಡೆದಿದೆ. ಆ ದಿನಗಳಲ್ಲಿ ಮಧ್ಯೆ ಏಷ್ಯಾದಲ್ಲಿ ಬರಗಾಲದಿಂದ ತಿಂಡಿ ಇಲ್ಲದೆ ಬದುಕು ದುರ್ಭರವಾಗಿ ಗುಂಪು ಗುಂಪುಗಳಾಗಿ ಆರ್ಯರು ಭಾರತದೇಶದಲ್ಲಿ ಪ್ರವೇಶಿಸಿ, ಗಂಗಾನದಿ

ದಡಕ್ಕೆ ಉಳಿದ ನದಿಪ್ರವಾಹಕ ಪ್ರಾಂತಗಳಲ್ಲಿ ವ್ಯವಸಾಯ ಮೊದಲಾದ ಕಾರ್ಯಗಳನ್ನು ಮಾಡುತ್ತಾ ಬದುಕು ಸಾಗಿಸಿದ್ದಾರೆ. ಅಲ್ಲಿಯವರೆಗು ಆ ಪ್ರಾಂತಗಳಲ್ಲಿ ಅಲ್ಲಲ್ಲಿರುವ ದ್ರಾವಿಡರು ಆರ್ಯರು ಘರ್ಷಣೆ ಮಾಡುತ್ತಿದ್ದರು. ಬದುಕಲಾರದೆ ಸಾವೋ ಬದುಕೋ ಅನ್ನುವ ತೀರ್ಮಾನದಿಂದ ಬಂದಿರುವ ಆರ್ಯರು ದ್ರಾವಿಡರನ್ನು ಅವರಿರುವ ಪ್ರಾಂತಗಳಿಂದ ಓಡಿಸುವುದು ನಡೆದಿದೆ. ಆ ವಿಧವಾಗಿ ವಿಂಧ್ಯಪರ್ವತಗಳ ವರೆಗು ಭಾರತ ಭೂಭಾಗವನ್ನು ಆಕ್ರಮಿಸಿ ಕೊಂಡು ದ್ರಾವಿಡರಿಗೆ ಉತ್ತರದೇಶದಲ್ಲಿ ನಿಲ್ಲಲು ನೆರಳು ಇಲ್ಲದಂತೆ ಮಾಡಿದ್ದಾರೆ.

ಈ ವಿಧವಾಗಿ ತ್ರೇತಾಯುಗದಲ್ಲೇ ಆರ್ಯರಿಗೂ ದ್ರಾವಿಡರಿಗೂ ಘರ್ಷಣೆ ಪ್ರಾರಂಭವಾಗಿದೆ. ಆರ್ಯರು ತಾವು ಸ್ವತಂತ್ರವಾಗಿ ಜೀವಿಸಬೇಕೆನ್ನುವ ಸ್ವಭಾವ ಇರುವವರು. ಇತರರ ದೊಡ್ಡಸ್ತಿಕೆಯಲ್ಲಿ ಬದುಕುವುದಕ್ಕೆ ಅವರಿಗೆ ಇಷ್ಟ ಇರುವುದಿಲ್ಲ. ಆದ್ದರಿಂದ ಸ್ವತಂತ್ರವಾಗಿ ಬದುಕುವುದಕ್ಕೆ ತಾವು ಮೊದಲು ತಯಾರುಮಾಡಿದ ವೇದಗಳನ್ನು ಉಪಯೋಗಿಸಿಕೊಂಡಿದ್ದಾರೆ. ಹಿಂದೀಲಿಪಿ ಯನ್ನು ತಯಾರುಮಾಡುವವರೆಗೂ ಕಂಠಾಪಾಟವಾಗಿ ಹೇಳಿಕೊಳ್ಳುವ ವೇದಗಳನ್ನು ಅಲ್ಲಲ್ಲಿ ಬರೆದು ಇಟ್ಟುಕೊಳ್ಳುವುದು ನಡೆದಿದೆ. ಮೇಧಾಶಕ್ತಿ ಇರುವ ಆರ್ಯರು ಆರುಕೋಟಿ ಜನ ಭಾರತದೇಶಕ್ಕೆ ಬರುವುದು ನಡೆದಿದೆ. ಅದಕ್ಕೂ ಮೊದಲು ಭಾರತದೇಶವೆಲ್ಲಾ ಮೂರು ಕೋಟಿ ಜನ ದ್ರಾವಿಡರು ಮಾತ್ರವೇ ಇರುತ್ತಿದ್ದರು. ಅದರಲ್ಲೂ ಉತ್ತರ ದೇಶದಲ್ಲಿ ಅಲ್ಲಲ್ಲಿ ಎಲ್ಲಾ ಸೇರಿ ಸುಮಾರು ಕೋಟಿ ಐವತ್ತು ಲಕ್ಷಗಳ ಮಂದಿ ಮಾತ್ರ ಇರುತ್ತಿದ್ದರು. ಆರ್ಯರು ಗುಂಪು ಗುಂಪುಗಳಾಗಿ ಆರು ಕೋಟಿ ಜನ ಉತ್ತರ ಭಾರತದೇಶಕ್ಕೆ ಬರುವುದರಿಂದ, ಅವರ ದಾಳಿಗೆ ತಾಳಲಾರದೆ ದ್ರಾವಿಡರು ನಿಧಾನವಾಗಿ ದಕ್ಷಿಣ ದೇಶ ಸೇರಿಕೊಳ್ಳುವುದು ನಡೆದಿದೆ. ಪಕ್ಕದ ದೇಶದಿಂದ ಬಂದಿರುವ ಆರ್ಯರು ದ್ರಾವಿಡರ ಮೇಲೆ ಅಧಿಕಾರವನ್ನು ಚೆಲಾಯಿಸುವ ಸ್ವಭಾವ ಇರುವವರಾಗಿ, ದ್ರಾವಿಡರನ್ನು ಅಸೂಯೆ ಯಿಂದ ನೋಡಲು ಆರಂಭಿಸಿದ್ದಾರೆ. ಎಲ್ಲಾದರೂ ದ್ರಾವಿಡರು ಕಾಣಿಸಿದರೆ ಅವರನ್ನು ಹೇಳನವಾಗಿ ಮಾತನಾಡುವುದೇ ಸ್ವಭಾವವಾಗಿ

ಇಟ್ಟುಕೊಂಡಿದ್ದಾರೆ. ದ್ರಾವಿಡರನ್ನು ಹೇಳನ ಮಾಡುವುದು ಆರ್ಯರ ಮುಖ್ಯ ಉದ್ದೇಶವಾಗಿತ್ತು. ಈ ದಿನಕ್ಕೂ ಅವರ ಸ್ವಭಾವ ಬದಲಾಗಲಿಲ್ಲ ಆದರೆ, ದ್ರಾವಿಡರು ಮಾತ್ರ ಎಂತಹ ದುರುದ್ದೇಶವನ್ನು ಆರ್ಯರ ಬಗ್ಗೆ ಇಟ್ಟುಕೊಂಡಿಲ್ಲ. ಈ ದಿನ ದಕ್ಷಿಣ ದೇಶದಲ್ಲಿರುವ ದ್ರಾವಿಡರು ತಮ್ಮ ಚರಿತ್ರೆಯನ್ನು ಪೂರ್ತಿಯಾಗಿ ಮರೆತುಹೋಗಿ ಪೂರ್ವದಲ್ಲಿ ಏನು ನಡೆದಿದೆಯೋ ಸಹ ತಿಳಿಯದ ಸ್ಥಿತಿಯಲ್ಲಿ ಇದ್ದಾರೆ. ಆದರೇ ಆರ್ಯರು ಮಾತ್ರ ಅವರ ಚರಿತ್ರೆಯನ್ನು ಬಹಳ ಜನ ಮುಖ್ಯವಾದವರು ನೆನಪಲ್ಲಿಟ್ಟುಕೊಂಡಿದ್ದಾರೆ. ದ್ರಾವಿಡರ ಬಗ್ಗೆ ವಿಪಕ್ಷವನ್ನೂ, ಅಸೂಯೆಯನ್ನೂ ಇಂದಿಗೂ ಬಿಟ್ಟಿಲ್ಲ. ಎಷ್ಟೋ ತಿಳುವಳಿಕೆ ಇರುವ ಮನುಷ್ಯ, ಹದಿನಾಲ್ಕು ಭಾಷೆಗಳಲ್ಲಿ ಪಾಂಡಿತ್ಯವನ್ನು ತಿಳಿದವನು, ಭಾರತ ಪ್ರಧಾನಿಯಾಗಿ ಕೆಲವು ವರ್ಷಗಳು ಒಡಕುದುಡುಕುಗಳು ಇಲ್ಲದಂತೆ ಸಮರ್ಥವಂತವಾಗಿ ಭಾರತ ದೇಶವನ್ನು ಪಾಲಿಸಿದ ಪಿ.ವಿ ನರಸಿಂಹಾರಾವು ದೆಹಲಿಯಲ್ಲಿ ಸತ್ತುಹೋದರೆ, ಆತನು ಆಂಧ್ರಪ್ರದೇಶ್‌ಗೆ ಸೇರಿದವನಾಗಿರುವುದರಿಂದ, ದ್ರಾವಿಡ ಜಾತಿಯವನೆಂದು ತಿಳಿದ ಆರ್ಯರು ಆತನ ಅಂತ್ಯಕ್ರಿಯೆಗಳು ದೆಹಲಿಯಲ್ಲಿ ನಡೆಸುವುದಕ್ಕೂ ಸಹ ಒಪ್ಪಿಕೊಂಡಿಲ್ಲ. ಈ ವಿಧವಾಗಿ ಅನೇಕ ಸಂದರ್ಭಗಳಲ್ಲಿ ಇಂದಿಗೂ ಪ್ರವರ್ತಿಸುತ್ತಲೇ ಇದ್ದಾರೆ. ಅಷ್ಟೇ ಅಲ್ಲದೆ ಸ್ವಲ್ಪ ಪ್ರಪಂಚ ಮೇಧಾವಿಗಳಾದ ಆರ್ಯರು ದ್ವಾಪರ ಯುಗದಲ್ಲಿನಿಂದ ದಕ್ಷಿಣ ದೇಶದಲ್ಲಿ ಸಹ ಪ್ರವೇಶಿಸಿದ ಆರ್ಯರು ಅಲ್ಲಲ್ಲಿ ಬುದ್ಧಿವಂತಿಕೆಯಿಂದ ಪ್ರವರ್ತಿಸುತ್ತಾ, ದ್ರಾವಿಡರ ಮಧ್ಯೆ ಜಗಳಗಳು ಇಟ್ಟು ತಮಾಷೆ ನೋಡಿದ ಸಂದರ್ಭಗಳು ಸಹ ಇವೆ.

ಇಂದಿನ ವಿಷಯಗಳನ್ನು ಬದಿಗಿಟ್ಟು ಪೂರ್ವದಲ್ಲಿ ನಡೆದ ಪರಿಣಾಮಗಳನ್ನು ವಿವರಿಸಿ ಹೇಳಿಕೊಂಡರೆ, ಈ ದಿನ ದ್ರಾವಿಡರಿಗೆ ತಿಳಿಯದ ಎಷ್ಟೋ ವಿಷಯಗಳು ಹೊರಬೀಳಬಲ್ಲವು. ನನ್ನ ಹುಟ್ಟುವಿಕೆ ದ್ರಾವಿಡರಲ್ಲೇ ಇದೆ, ಆದ್ದರಿಂದ ದ್ರಾವಿಡರಿಗೆ ನಡೆದ, ನಡೆಯುತ್ತಿರುವ ಅನ್ಯಾಯಗಳನ್ನು ಕುರಿತು ಹೇಳುವುದು ನನ್ನ ಕರ್ತವ್ಯ. ಆದ್ದರಿಂದ ಮೊದಲು "ದ್ರಾವಿಡ"ರು ಎನ್ನುವ ಹೆಸರು ಆ ದಿನದ ಕೃತಯುಗದ ಮನುಷ್ಯರಿಗೆ ಹೇಗೆ ಬಂದಿದೆಯೋ ತಿಳಿದುಕೊಳ್ಳೋಣ.

ಏಷ್ಯಾ ದಿಂದ ಬಂದಿರುವವರು "ಆರ್ಯರು" ಅನ್ನುವ ಹೆಸರಿಂದ ಕರೆಯುವು ದಕ್ಕಿಂತ ಮೊದಲು ಅವರನ್ನು ಅವರು ಏಷೀಯರು ಎಂದು ಹೇಳಿಕೊಳ್ಳುತ್ತಿದ್ದರು. ಏಷೀಯರೆಂದರೇ ಏಷ್ಯಾ ಖಂಡದಲ್ಲಿ ನಿವಾಸಿಸುವವರೆಂದು ಅರ್ಥ. ಅಂತಹವರು ಇಂದೂದೇಶದಲ್ಲಿ ಪ್ರವೇಶಿಸಿದ ಸ್ವಲ್ಪ ಕಾಲಕ್ಕೆ ದ್ರಾವಿಡರ ಹತ್ತಿರವಿರುವ ಜ್ಞಾನವನ್ನು ನೋಡಿ, ಅವರು ತಮಗಿಂತ ದೊಡ್ಡವರು ಅಲ್ಲ, ಅವರು ಎಂದಿಗೂ ನಮಗಿಂತ ಕಡಿಮೆಯವರೇ ಅನ್ನುವ ಭಾವ ಬರುವಹಾಗೆ ಏಷೀಯರನ್ನುವ ಹೆಸರನ್ನು ಸ್ವಲ್ಪ ಬದಲಾವಣೆ ಮಾಡಿ 'ಆರ್ಯರು' ಎಂದು ಹೇಳಿಕೊಂಡಿದ್ದಾರೆ. ಆರ್ಯರು ಎಂದರೆ! ಗುರುಗಳು ಅನ್ನುವ ಅರ್ಥ ಬರುತ್ತದೆ ಆದ್ದರಿಂದ, ತಾವು ಗುರುಗಳಾದರೇ ಉಳಿದವರೆಲ್ಲರೂ ತಮ್ಮ ಕೆಳಗೆ ಶಿಷ್ಯರಾಗೇ ಇರುತ್ತಾರೆ ಅನ್ನುವ ಉದ್ದೇಶ್ಯದಿಂದ ತಮ್ಮನ್ನು ಆರ್ಯರಾಗಿ ಭಾರತ ದೇಶಕ್ಕೆ ಬಂದ ನಂತರ ಹೇಳಿಕೊಳ್ಳುವುದು ನಡೆದಿದೆ. ಆ ವಿಧವಾಗಿ ಹೆಸರು ಇಟ್ಟುಕೊಳ್ಳುವುದರಲ್ಲಿ ಸಹ ಆರ್ಯರ ಕುತಂತ್ರ ಹೊರಬೀಳುತ್ತಿದೆ. ನಾವು ದ್ರಾವಿಡರಿಗಿಂತ ದೊಡ್ಡವರೆನ್ನುವ ಭಾವವೇ ಅದರಲ್ಲಿ ಬಹಿರ್ಗತವಾಗುತ್ತಿದೆ.

ಆ ದಿನದ ದ್ರಾವಿಡರು ಆರ್ಯರು ಮಾಡುವ ತಂತ್ರ ಕುತಂತ್ರಗಳನ್ನು ಗ್ರಹಿಸಲಾರದೆ, ಅವರ ದೃಷ್ಠಿ ಎಲ್ಲವೂ ಆತ್ಮ ಜ್ಞಾನದ ಮೇಲೆ ಲಗ್ನ ಮಾಡಿದ್ದರು. ಪ್ರಪಂಚ ಜ್ಞಾನದ ಮೇಲೆ ಹೆಚ್ಚಿನ ದೃಷ್ಠಿ ಇಲ್ಲದ ದ್ರಾವಿಡರು ಆರ್ಯರು ತಮ್ಮ ಮೇಲೆ ಅಸೂಯೆ ಹೊಂದಿದ್ದಾರೆಂದಾಗಲಿ, ತಮ್ಮನ್ನು ಹೇಳನವಾಗಿ ನೋಡುತ್ತಿದ್ದಾ ರೆಂದಾಗಲೀ, ಅಂದುಕೊಳ್ಳದೆ ತಮ್ಮ ಕೆಲಸವನ್ನು ತಾವು ಮಾಡಿಕೊಳ್ಳುತ್ತಾ ಹೋಗುತ್ತಿದ್ದರು. ಭೂಮಿ ಮೇಲೆ ಪ್ರಪ್ರಥಮವಾಗಿ ಜ್ಞಾನ ತಿಳಿದಿರುವುದು ದಕ್ಷಿಣ ದೇಶದಲ್ಲಿ ಆಗಿರುವುದರಿಂದ, ದೇವರು ಹಂಚಿದ ಜ್ಞಾನ ದಕ್ಷಿಣ ಪ್ರಾಂತದವರಿಗೆ ಚೆನ್ನಾಗಿ ಅಂಟಿಕೊಂಡು ಎಲ್ಲರೂ ಜ್ಞಾನಿಗಳಾಗೇ ಇರುತ್ತಿದ್ದರು. ಮೊದಲು ದೈವ ಜ್ಞಾನವನ್ನು ತಿಳಿದವರಿಗೆ "ದ್ರಾವಿಡ"ರು ಎಂದು ಹೆಸರು ಬರುವುದು ನಡೆದಿದೆ. ಅದಕ್ಕೂ ಮೊದಲು ನಮ್ಮ ದೇಶಕ್ಕೆ ಇಂದೂದೇಶ ವೆಂದಾಗಲೀ, ದೇಶ ಪ್ರಜೆಗಳನ್ನು ದ್ರಾವಿಡರು ಎಂದಾಗಲೀ ಕರೆಯುವವರು

ಇಲ್ಲ. ಸೃಷ್ಠಿ ನಡೆದ ಸ್ವಲ್ಪ ಕಾಲಕ್ಕೇ ಇದೆಲ್ಲಾ ನಡೆದಿದೆ. ಆಗ ದೇಶಕ್ಕೆ ಒಂದು ಹೆಸರಿರಬೇಕೆಂದಾಗಲೀ, ತಮಗೆ ಒಂದು ಹೆಸರಿರಬೇಕೆಂದಾಗಲೀ ಧ್ಯಾಸವಿಲ್ಲದ ಜೀವನವನ್ನು ನಡೆಸುತ್ತಿದ್ದರು. ಖಾಲಿ ಪೇಪರ್‌ನಂತಿರುವ ಅಂದಿನ ಪ್ರಜೆಗಳಿಗೆ ಸೂರ್ಯನು ಮನುವುನಿಂದ ಜ್ಞಾನವನ್ನು ತಿಳಿಯುವಹಾಗೆ ಮಾಡಿದ್ದಾನೆ. ದೈವಜ್ಞಾನ ತಿಳಿದ ನಂತರ ಅವರಲ್ಲಿ ಮುಖ್ಯರಾದವರು ಕೆಲವರು ಆತ್ಮ ಪ್ರೇರಣೆಯಿಂದ ತಮ್ಮ ದೇಶಕ್ಕೆ ಹೆಸರು ಇಟ್ಟುಕೊಳ್ಳಬೇಕೆಂದು ಅಂದುಕೊಂಡಿದ್ದಾರೆ. ಆಗ ಅವರು ಇಂದೂ ದೇಶವೆಂದು ಹೆಸರು ಇಟ್ಟುಕೊಳ್ಳುವುದು ನಡೆದಿದೆ. ಮನುಷ್ಯನೊಳಗೆ ಹೊಸ ಆಲೋಚನೆಗಳನ್ನು, ಹೊಸ ವಿಧಾನಗಳನ್ನು, ಹೊಸ ಸಿದ್ಧಾಂತಗಳನ್ನು ತಿಳಿಸುವವನು ಆತ್ಮೇ ಆಗಿರುವುದರಿಂದ ಹೊಸದಾಗಿ ಬಂದಿರುವ "ಇಂದೂ" ದೇಶವೆನ್ನುವ ಹೆಸರು ಆತ್ಮ ತಿಳಿಸಿರುವುದೇಯೆಂದು ತಿಳಿಯಬೇಕು. "ಮತ್ತಃ ಸ್ಮೃತಿರ್ ಜ್ಞಾನ ಮಪೋಹನಂಚ" ಎನ್ನುವ ಭಗವದ್ಗೀತಾ ವಾಕ್ಯದ ಪ್ರಕಾರ ನನ್ನಿಂದಲೇ ಜ್ಞಾನ, ಜ್ಞಾಪಕ, ಊಹೆ ಬರುತ್ತದೆಂದು ಇರುವಹಾಗೆ ದೇಶಕ್ಕೆ ಹೆಸರು ಜ್ಞಾನರೀತ್ಯಾ ಇಂದೂ ದೇಶವೆಂದು ಬರುವುದು ನಡೆದಿದೆ.

ಇಂದೂ ಎಂದರೆ ಜ್ಞಾನಿ ಎಂದು ಮೊದಲೇ ಹೇಳಿಕೊಂಡಿದ್ದೇವೆ. ದೈವ ಜ್ಞಾನಕ್ಕಾಗಲಿ, ಪ್ರಪಂಚ ಜ್ಞಾನಕ್ಕಾಗಲಿ ಚಂದ್ರನು ಅಧಿಪತಿಯೆಂದು ಜ್ಯೋತಿಷ್ಯ ಶಾಸ್ತ್ರದಲ್ಲಿ ಸಹ ತಿಳಿಯುತ್ತಿದೆ. ಇಂದೂ ಎಂದರೆ ಜ್ಞಾನಿ ಎಂದು ಅರ್ಥ. ಇಂದೂಗಳು ಎಂದರೆ ಜ್ಞಾನಿಗಳು ಎಂದು ಅರ್ಥ, ಆದರೇ ಜ್ಞಾನಿಗಳು ಎನ್ನುವ ಮಾತು ಪ್ರಪಂಚ ಜ್ಞಾನಿಗಳಾ? ಪರಮಾತ್ಮ ಜ್ಞಾನಿಗಳಾ? ಎನ್ನುವ ಪ್ರಶ್ನೆಯನ್ನು ಉದ್ಭವಿಸುವಂತೆ ಮಾಡಬಲ್ಲದು. ಆದ್ದರಿಂದ ಅಂತಹ ಪ್ರಶ್ನೆಗೆ ಸಮಾಧಾನವಾಗಿ ತಾವು ಪರಮಾತ್ಮ ಜ್ಞಾನಿಗಳೇ, ಪ್ರಪಂಚ ಜ್ಞಾನಿಗಳು ಅಲ್ಲ ಎನ್ನುವಹಾಗೆ ಪ್ರಜೆಗಳಿಗೆ ಪ್ರತ್ಯೇಕವಾದ ಹೆಸರನ್ನು ಇಡುವುದು ನಡೆದಿದೆ. ಇಂದೂ ದೇಶದಲ್ಲಿ ನಿವಾಸಿಸುವವರೆಲ್ಲರೂ ಇಂದೂಗಳೇ ಆದರೂ, ನಾವು ಇಂತಹ ಇಂದೂಗಳೇ ಎನ್ನುವಹಾಗೆ ದೇಶ ಪ್ರಜೆಗಳೆಲ್ಲರಿಗು ತಮ್ಮ ಜ್ಞಾನಕ್ಕೆ ಸರಿತೂಗುವ ಹೆಸರನ್ನು ಇಡುವುದು ನಡೆದಿದೆ. ಆ ದಿನ ಇರುವ ಪ್ರಜೆಗಳು ಎಂತಹ ಜ್ಞಾನಿಗಳೋ

ಅಂತಹ ಜ್ಞಾನವನ್ನು ತಿಳಿಸುವ ಸಲುವಾಗಿ "ದ್ರಾವಿಡ" ಎನ್ನುವ ಮೂರಕ್ಷರಗಳ ಹೆಸರನ್ನು ಆಯ್ಕೆ ಮಾಡಿಕೊಂಡು ದೇಶ ಪ್ರಜೆಗಳೆಲ್ಲರನ್ನೂ ದ್ರಾವಿಡರು ಎಂದು ಎನ್ನುವುದು ನಡೆದಿದೆ. ಆದಿನ ಸೂರ್ಯನಿಂದ ತಿಳಿದ ಜ್ಞಾನ ಯಾವುದಾದರೆ ಇದೆಯೋ, ಅದಕ್ಕೆ ಸರಿಹೋಗುವ ಹೆಸರನ್ನು ಅರ್ಥಸಹಿತವಾಗಿ "ದ್ರಾವಿಡ" ಎನ್ನುವ ಮೂರಕ್ಷರಗಳನ್ನು ಜೋಡಿಸಿದ ಹೆಸರನ್ನು ಇಡಲಾಗಿದೆ. ಅರ್ಥ ಸಹಿತ ಅಂದರೆ ಅರ್ಥದೊಂದಿಗೆ ಕೂಡಿಕೊಂಡಿದೆಯೆಂದು ಅರ್ಥ ಅಲ್ಲವೆ! ಆದರೆ ದ್ರಾವಿಡ ಎನ್ನುವ ಪದ ಯಾವ ಅರ್ಥದಿಂದ ಕೂಡಿಕೊಂಡಿದೆಯೋ ಎಂದು ಯಾರಾದರೂ ಕೇಳಿದರೇ, ಆ ವಿವರ ತಿಳಿಯುವಹಾಗೆ ಆದಿನ ಜ್ಞಾನಿಗಳಾದ ಹಿರಿಯರು ಈ ವಿಧವಾಗಿ ತಿಳಿಸಿ ಹೇಳಿದ್ದಾರೆ.

"ತಾವು ತಿಳಿದುಕೊಂಡ ಜ್ಞಾನ ಅತ್ಯುನ್ನತವಾದ ಪರಮಾತ್ಮ ಜ್ಞಾನ ಇದರಲ್ಲಿ ಪ್ರಕೃತಿ ಜ್ಞಾನಕ್ಕೆ ಸಂಬಂಧವಿಲ್ಲದಂತೆ ಕೇವಲ ಪರಮಾತ್ಮ ಜ್ಞಾನ ಮಾತ್ರವೇ ಇದೆ. ಪರಮಾತ್ಮ ಸೃಷ್ಠಿ ಪೂರ್ವ ಒಬ್ಬನೇ ಆದರೂ ಸೃಷ್ಠಿ ನಂತರ ಮೂರು ಆತ್ಮಗಳಾಗಿ ವಿಭಜಿಸಲ್ಪಟ್ಟು ವಿಶ್ವವನ್ನು ಸೃಷ್ಠಿಸಿದ್ದಾನೆ. ತಾನು ಮೂರು ಆತ್ಮಗಳಾಗಿ ವಿಭಜಿಸಲಾಗಿರುವವುಗಳಲ್ಲಿ ಒಂದು ಜೀವಾತ್ಮವಾಗಿರುವಾಗ, ಎರಡನೆಯದು ಆತ್ಮವಾಗಿರುವಾಗ, ಮೂರನೆಯದು ಹೆಸರಿಲ್ಲದ್ದಾಗಿ ಆತ್ಮಗಿಂತಲೂ ಬೇರೆಯಾಗಿ ಇರುವುದಾಗಿ ಅದೇ ಅರ್ಥದಿಂದ ಪರಮಾತ್ಮ ಎಂದು ಕರೆಯಲಾಗುತ್ತಿದೆ. ಸೂರ್ಯನು ಹೇಳಿರುವುದೆಲ್ಲಾ ಮೂರು ಆತ್ಮಗಳ ಜ್ಞಾನವೇ ಆಗಿರುವುದರಿಂದ ಮೂರು ಆತ್ಮಗಳಿಗೆ ಗುರುತಾಗಿ ಮೂರು ಅಕ್ಷರಗಳನ್ನು ಆಯ್ಕೆ ಮಾಡಿಕೊಂಡು, ಆ ಮೂರು ಅಕ್ಷರಗಳ ಹೆಸರನ್ನೇ ಅಂದಿನ ಪ್ರಜೆಗಳಿಗೆ ಇಡುವುದು ನಡೆದಿದೆ. ಪರಮಾತ್ಮನಿಂದ ಮೊದಲು ಆತ್ಮ ಬಿಡುಗಡೆಯಾಗಿ, ನಂತರ ಜೀವಾತ್ಮ ಎನ್ನುವುದು ಪರಮಾತ್ಮನಿಂದ ವಿಭಜಿಸಲ್ಪಟ್ಟು ಬರುವುದು ನಡೆದಿದೆ. ದೇವರು ಎನ್ನುವ ಪರಮಾತ್ಮನಿಂದ ಆತ್ಮ, ಜೀವಾತ್ಮಗಳು ಬಂದಿವೆ ಆದ್ದರಿಂದ ಮೊದಲು ಪರಮಾತ್ಮನಿಗೆ ಗುರುತಾಗಿ 'ದ್ರಾ' ಎಂಬ ಅಕ್ಷರವನ್ನೂ ಎರಡನೆ ಆತ್ಮಕ್ಕೆ ಗುರುತಾಗಿ 'ವಿ' ಎನ್ನುವ ಅಕ್ಷರವನ್ನೂ, ಮೂರನೆ ಆತ್ಮವಾದ

ಜೀವಾತ್ಮನಿಗೆ ಗುರುತಾಗಿ 'ಡ' ಎನ್ನುವ ಅಕ್ಷರವನ್ನು ಗುರುತಿಸಿ ಮೂರು ಅಕ್ಷರಗಳನ್ನು ಸೇರಿಸಿ "ದ್ರಾವಿಡ" ಅನ್ನುವ ಪದ ಬರುವ ಹಾಗೆ ಮಾಡಿದ್ದಾರೆ. ಮೂರು ಆತ್ಮಗಳ ಸೇರುವಿಕೆಯಿಂದ ಇರುವ ಮನುಷ್ಯ ಅನ್ನುವಹಾಗೆ "ದ್ರಾವಿಡ" ಅನ್ನುವ ಪದವನ್ನಿರಿಸಿ ಎಲ್ಲರನ್ನೂ ಸೇರಿಸಿ ದ್ರಾವಿಡರು ಅಂದಿದ್ದಾರೆ. ದ್ರಾವಿಡರು ಅನ್ನುವ ಪದದಲ್ಲಿ ಒಂದು ವಿಶೇಷವಿದೆ ಅದು ಏನೆಂದರೆ!

ಪರಮಾತ್ಮ, ಆತ್ಮ, ಜೀವಾತ್ಮ ಅನ್ನುವ ಮೂರು ಆತ್ಮಗಳಲ್ಲಿ ಪರಮಾತ್ಮನಿಗು ಜೀವಾತ್ಮನಿಗು ಎಂತಹ ಸಂಬಂಧ ಇರುವುದಿಲ್ಲ. ಜೀವಾತ್ಮನಿಗೆ ಪರಮಾತ್ಮ ಯಾರೋ ತಿಳಿಯದು. ಜೀವಾತ್ಮನಿಗೆ ಅಂತ್ಯಸಿಗದವನು ಪರಮಾತ್ಮ. ಆದರೇ ಇಬ್ಬರಿಗೂ ಮಧ್ಯದಲ್ಲಿರುವ ಆತ್ಮ ಮಾತ್ರ ಇತ್ತ ಪರಮಾತ್ಮನೊಂದಿಗೂ, ಅತ್ತ ಜೀವಾತ್ಮನೊಂದಿಗೂ ಯಾವಾಗಲೂ ಸಂಬಂಧ ಇಟ್ಟುಕೊಂಡು ಇರುತ್ತದೆ. ಪರಮಾತ್ಮನ (ದೇವರ) ಆಜ್ಞೆ ಪ್ರಕಾರ ನಡೆದುಕೊಳ್ಳುತ್ತಾ, ಜೀವಾತ್ಮನನ್ನು ಕರ್ಮಪ್ರಕಾರ ನಡೆಸುವುದು ಮಧ್ಯದಲ್ಲಿರುವ ಆತ್ಮವೆ. ಇನ್ನೂ ವಿವರವಾಗಿ ಹೇಳಿದರೆ ಪರಮಾತ್ಮ ರೂಪ, ನಾಮ, ಕ್ರಿಯೆಗಳು ಇಲ್ಲದವನು ಪರಮಾತ್ಮ ನೊಂದಿಗೆ ಯಾವ ಮಾತ್ರ ಸಂಬಂಧವಿಲ್ಲದ ಜೀವಾತ್ಮ ಸಹ ಕ್ರಿಯೆ ಇಲ್ಲದವನೇ ಆದರೂ ರೂಪ, ಹೆಸರಿರುವವನೇ, ಪರಮಾತ್ಮನ ಹಾಗೆ ಕೆಲಸಗಳು ಮಾಡದವ ನಾದರೂ ಕಷ್ಟಸುಖಗಳನ್ನು ಮಾತ್ರ ಅನುಭವಿಸುವುದು ನಡೆಯುತ್ತಿದೆ. ಅನುಭವಿಸುವುದೇ ಕೆಲಸ ಅಂದುಕೊಂಡರೆ ರೂಪ, ನಾಮ, ಕ್ರಿಯೆಗಳಿ ರುವವನಾಗುತ್ತಾನೆ. ಪ್ರತ್ಯೇಕಿಸಿ ಯಾವ ಕೆಲಸವನ್ನೂ ಮಾಡದವನಾದ್ದರಿಂದ, ಒಂದು ವಿಧವಾಗಿ ದೇವರ ಹಾಗೆ ಕೆಲಸ ಇಲ್ಲದವನೆಂದೇ ಹೇಳಬಹುದು. ಇನ್ನು ಮದ್ಯದಲ್ಲಿರುವ ಆತ್ಮ ಮಾತ್ರ ಒಂದು ಕ್ಷಣವೂ ಸಹ ಸುಮ್ಮನಿರದೇ, ಜೀವಾತ್ಮನ ಕರ್ಮ ಪ್ರಕಾರವಿರುವ ಕೆಲಸಗಳೆಲ್ಲವನ್ನೂ ತಾನು ಮಾಡುತ್ತಿರುತ್ತದೆ. ಶರೀರದೊಳಗೆ ನಡೆಯುವ ಪ್ರತಿ ಕೆಲಸವಾಗಲಿ, ಶರೀರದಿಂದ ನಡೆಯುವ ಹೊರಗಿನ ಯಾವ ಕಾರ್ಯವಾಗಲೀ ಅವುಗಳನ್ನು ಆತ್ಮ ಸ್ವತಹವಾಗಿ ಮಾಡುತ್ತಿದೆ. ಜೀವಿಯು ಮಾಡದೇ ಪ್ರತಿಕ್ಷಣ ನಡೆಯುವ ಕೆಲಸವನ್ನು ಆತ್ಮ ಮಾಡುತ್ತಿದೆಯೆನ್ನುವ

ವಿಷಯ ಯಾರಿಗೂ ತಿಳಿಯದೆಂದೇ ಹೇಳಬಹುದು. ಒಬ್ಬ ಕರ್ಮಯೋಗಿಗಳಿಗೆ ಹೊರತು ಆತ್ಮ ಕೆಲಸ ಮಾಡುವುದೆನ್ನುವ ವಿಧಾನ ಯಾರಿಗೂ ತಿಳಿಯದು. ಎಲ್ಲರೂ ನಡೆಯುವ ಕೆಲಸಗಳೆಲ್ಲವನ್ನೂ ಜೀವಿಯೇ ಮಾಡುತ್ತಿದ್ದಾನೆಂದು ಅಂದುಕೊಳ್ಳುತ್ತಿದ್ದಾರೆ. ಶರೀರದಲ್ಲಿನ ಜೀವಿಯು ಕಷ್ಟಸುಖ ರೂಪದಲ್ಲಿ ಬರುವ ಕರ್ಮಗಳನ್ನು ಅನುಭವಿಸುವುದು ಹೊರತು, ದೇವರ ಹಾಗೆ ಕೆಲಸ ಮಾಡದವನಾಗಿದ್ದಾನೆ. ಜೀವಿಯು, ದೇವರು ಕೆಲಸ ಮಾಡದಿದ್ದರೂ ಶರೀರದ ಒಳಗೆ ಇಂದ್ರಿಯಗಳಿಂದ, ಶರೀರದ ಹೊರಗೆ ಇಂದ್ರಿಯಗಳಿಂದ ಕೆಲಸ ಮಾಡುವವನು ಆತ್ಮ ಒಬ್ಬನೇ. ಆತ್ಮ ಕೆಲಸಗಳನ್ನು ಮಾಡುವುದೇ ಅಲ್ಲದೇ ತನ್ನ ಕೆಳಗಿರುವ ಜೀವಾತ್ಮನೊಂದಿಗೂ ಮೇಲೆ ಇರುವ ಪರಮಾತ್ಮನೊಂದಿಗೂ ಯಾವಾಗಲೂ ಸಂಬಂಧ ಇರುವುದರಿಂದ ಮೇಲೆ, ಕೆಳಗೆ ಇಬ್ಬರೊಂದಿಗೆ ಸಂಬಂಧವಿರುವ ಆತ್ಮನನ್ನು ಮೇಲೆ ಕೆಳಗೆ ಸೊನ್ನೆಗಳಿರುವ “ವಿ” ಎನ್ನುವ ಅಕ್ಷರದಿಂದ ಗುರುತಿಸಲಾಗಿದೆ. “ವಿ” ಎನ್ನುವ ಅಕ್ಷರ ಮೇಲೆ ಗುಡಿ ಇದ್ದು, ಕೆಳಗೆ ಗುಡಿ ಇರುವುದಾಗಿರುವುದರಿಂದ, ಎರಡೂ ಕಡೆ ಒಂದೇ ವಿಧವಾಗಿ



ಬಗ್ಗಿರುವುದರಿಂದ ಆತ್ಮಕ್ಕೆ ಗುರುತಾಗಿ ಇಡುವುದರಲ್ಲಿ "ವಿ" ಅನ್ನುವ ಅಕ್ಷರ ಪೂರ್ತಿ ನ್ಯಾಯಬದ್ಧವಾಗಿ ಇದೆ. ಕೆಳಗೆ "ವಿ" ಆಕಾರವನ್ನು ದೊಡ್ಡದಾಗಿ ಮಾಡಿ ನೋಡೋಣ.

ಶರೀರದಲ್ಲಿ ಕತ್ತಿಗೆ ಅರಿಯದ, ಅಗ್ನಿಗೆ ಸುಡದ, ನೀರಿಗೆ ತೋಯದ ಆತ್ಮಗಳು ಎರಡು ಇವೆ. ಅವೇ ಒಂದು ಪರಮಾತ್ಮ, ಎರಡು ಜೀವಾತ್ಮ. ಹಾಗೇ ಕ್ರಿಯೆಗಳು ಇಲ್ಲದ (ಕೆಲಸಗಳು ಮಾಡದ) ಆತ್ಮಗಳು ಸಹ ಪರಮಾತ್ಮ, ಜೀವಾತ್ಮವೆ. ಈ ಎರಡು ಆತ್ಮಗಳ ಮಧ್ಯದಲ್ಲಿ ಎರಡರೊಂದಿಗೆ ಸಂಬಂಧಪಟ್ಟಿರುವುದು ಆತ್ಮ ಒಂದೇ. ಮೇಲೆ ಪರಮಾತ್ಮ, ಕೆಳಗೆ ಜೀವಾತ್ಮ ಇರುತ್ತಿರುವಾಗ, ಎರಡರೊಂದಿಗೆ ಸಂಬಂಧವಿರುವಹಾಗೆ ಇರುವ ತೆಲುಗು ಅಕ್ಷರಗಳಲ್ಲಿ ಪ್ರತ್ಯೇಕಿಸಿ "ವಿ" ಒಂದು ಮಾತ್ರವೇ ಇದೆ. ತೆಲುಗು ಭಾಷೆಯಲ್ಲಿ 'ವಿ' ಎನ್ನುವ ಅಕ್ಷರ ಜೀವಾತ್ಮ, ಪರಮಾತ್ಮಗಳೊಂದಿಗೆ ಸಂಬಂಧವಿರುವ ಆತ್ಮವನ್ನು ತನ್ನ ಹೋಲಿಕೆಯಿಂದ ತೋರಿಸುತ್ತಿದೆ. ಆದ್ದರಿಂದ ಆತ್ಮ ಜ್ಞಾನ ಇರುವವರೆನ್ನುವ ಸೂಚನೆಯಿಂದ 'ವಿ' ಎನ್ನುವ ಅಕ್ಷರವನ್ನು ಮಧ್ಯದಲ್ಲಿ ಇರುವಹಾಗೆ "ದ್ರಾವಿಡ" ಪದವನ್ನು ಆದಿನದ ಜ್ಞಾನಿಗಳು ಗುರ್ತಿಸಿದ್ದಾರೆ. "ದ್ರಾವಿಡ" ಪದದಲ್ಲಿ ಮಧ್ಯದಲ್ಲಿರುವ 'ವಿ' ಆಕಾರವನ್ನು ಅರ್ಥವನ್ನು ತಿಳಿದು ಕೊಂಡಿದ್ದೇವೆ. ಹಾಗೇ ವಿ ಗೆ ಮುಂದೆ ಹಿಂದೆ ಇರುವ ದ್ರಾ–ಡ ಅನ್ನುವ ಅಕ್ಷರಗಳನ್ನು ಆದಿನದ ಜ್ಞಾನಿಗಳು ಹೇಗೆ ಹೋಲಿಸಿದ್ದಾರೋ ನೋಡೋಣ.

ಪರಮಾತ್ಮನಿಂದ ಆತ್ಮ, ಜೀವಾತ್ಮ ಎನ್ನುವ ಎರಡು ಆತ್ಮಗಳು ವಿಭಜಿಸಲ್ಪಟ್ಟಿವೆಯೆಂದು, ಮೊದಲೇ ಹೇಳಿಕೊಂಡಿದ್ದೇವೆ. ಆದ್ದರಿಂದ ಪರಮಾತ್ಮನನ್ನು ಸೂಚಿಸುವ ಅಕ್ಷರ ಎರಡು ಅಕ್ಷರಗಳ ಸಮ್ಮೇಳನವಾಗಿ ಇರಬೇಕೆನ್ನುವ ಉದ್ದೇಶದಿಂದ 'ದಾ' ನ್ನು 'ರ' ನ್ನು ಸೇರಿಸಿ 'ದ್ರಾ' ಎಂಬ ಸಂಯುಕ್ತ (ಎರಡು ಅಕ್ಷರಗಳು ಸೇರಿದ) ಅಕ್ಷರವನ್ನು ಇಡುವುದು ನಡೆದಿದೆ. "ದ್ರಾ" ಎಂಬ ಅಕ್ಷರವನ್ನು ವಿಭಜಿಸಿ ನೋಡಿದರೆ 'ದಾ' ಮತ್ತು 'ರ' ಎನ್ನುವ ಎರಡು ಅಕ್ಷರಗಳು ಇರುವಹಾಗೆ ತಿಳಿಯುತ್ತಿದೆ. ಆದ್ದರಿಂದ ಎರಡು ಆತ್ಮಗಳಿಗು

ದೊಡ್ಡದಾದ ಪರಮಾತ್ಮ ಗುರುತಾಗಿ ದ್ರಾ ಎನ್ನುವ ಅಕ್ಷರವನ್ನು ಹೇಳಿಕೊಳ್ಳುತ್ತಿದ್ದೇವೆ. ಹಾಗೇ ಜೀವಾತ್ಮಕ್ಕೆ 'ಡ' ಎನ್ನುವ ಅಕ್ಷರವನ್ನು ಗುರುತಿಸಿಕೊಂಡಿದ್ದೇವೆ. ಜೀವಾತ್ಮ ಯಾವ ಆತ್ಮದೊಂದಿಗೂ ಸಂಬಂಧ ಇಲ್ಲದಾಗಿರುವುದರಿಂದ ಒಂದೇ ಅಕ್ಷರವಾದ 'ಡ' ನ್ನು ಜೀವಾತ್ಮನಿಗೆ ಗುರುತಾಗಿ ಇಡುವುದು ನಡೆದಿದೆ. ಪರಮಾತ್ಮ ಗುರುತಾದ 'ದ್ರಾ' ಎನ್ನುವ ಅಕ್ಷರ ಪಕ್ಕದಲ್ಲಿ ಆತ್ಮ ಗುರುತಾದ 'ವಿ' ಎನ್ನುವ ಅಕ್ಷರವಿರುವಾಗ, ಕೊನೆಯ ಜೀವಾತ್ಮ ಗುರುತಾಗಿ 'ಡ' ನ್ನು ಇಡುವುದಾಗಿದೆ. ಡ ಎನ್ನುವ ಅಕ್ಷರ ಶಬ್ಧ ಮುರಿದ ಹಾಗೆ ನಿಂತುಹೋಗುತ್ತಿದೆ. ಆದ್ದರಿಂದ ಜೀವಾತ್ಮನಿಗೆ ಗುರುತಾಗಿ 'ಡ' ಎನ್ನುವ ಅಕ್ಷರವನ್ನೇ ಹೇಳಿಕೊಳ್ಳುವುದು ನಡೆದಿದೆ. ಮೂರಕ್ಷರಗಳನ್ನು ಸೇರಿಸಿ ದ್ರಾವಿಡ ಎಂದು ಹೇಳುವುದರಲ್ಲಿ, ಮೂರು ಆತ್ಮಗಳು ವಿನಃ ಏನೂ ಇಲ್ಲ ಎಂದು ತಿಳಿಯುವಹಾಗೆ 'ಡ' ಎನ್ನುವ ಕೊನೆಯ ಅಕ್ಷರ ಮುರಿದ ಶಬ್ದದಹಾಗೆ ಹೇಳಲಾಗುತ್ತಿರುವುದರಿಂದ, ಮೂರು ಅರ್ಥಗಳೊಂದಿಗೆ ಕೂಡಿಕೊಂಡ ಅಕ್ಷರಗಳನ್ನು ಹಿರಿಯರು ಆಯ್ಕೆ ಮಾಡಿಕೊಂಡು, ಮೂರು ಆತ್ಮಗಳ ಜ್ಞಾನ ತಿಳಿದವರಾದ ಇಂದೂಗಳನ್ನು ಆ ದಿನ ದ್ರಾವಿಡ ಜ್ಞಾನ ಇರುವವರೆನ್ನುವ ಉದ್ದೇಶದಿಂದ ದ್ರಾವಿಡರು ಅಂದಿದ್ದಾರೆ. ಈ ವಿಧವಾದ ಭಾವದಲ್ಲಿ ದ್ರಾವಿಡರು ಅಂದರೂ, ದ್ರಾವಿಡ ಜ್ಞಾನ ಅಂದರೂ, ಆ ದಿನ ಪ್ರಪಂಚವೆಲ್ಲಾ ದೊಡ್ಡ ಗೌರವ ಇರುತ್ತಿತ್ತು. ಆದ್ದರಿಂದ ದ್ರಾವಿಡ ಜ್ಞಾನವಿರುವ ದೇಶವಾದ ಅದನ್ನು ಜ್ಞಾನಿಗಳ ದೇಶವೆನ್ನುವ ಅರ್ಥದಿಂದ ಇಂದೂದೇಶ ಎಂದು ಉಚ್ಚರಿಸುತ್ತಿದ್ದರು.

ಮಧ್ಯ ಏಷ್ಯಾ ಖಂಡದಿಂದ ಬಂದಿರುವ ಏಷೀಯರು ಜ್ಞಾನಿಗಳಾದ ದ್ರಾವಿಡರನ್ನು ನೋಡಿ, ಅಸೂಯದಿಂದ ಅವರಿಗಿಂತ ದೊಡ್ಡದಾಗಿ ಹೇಳಿಕೊಂಡಹಾಗೆ ತಮ್ಮನ್ನು ಆರ್ಯರಾಗಿ ಹೇಳಿಕೊಂಡಿದ್ದಾರೆ. ಆರ್ಯರು ಅಂದರೆ ಗುರುಗಳು ಎಂದು ಅರ್ಥ ಬರುವುದರಿಂದ, ತಾವು ಜ್ಞಾನಿಗಳಿಗಿಂತ ದೊಡ್ಡವರೆಂದು ಪ್ರಕಟಿಸಿಕೊಂಡಿದ್ದಾರೆ. ಆದರೂ ಅವರಹತ್ತಿರ ದೈವಜ್ಞಾನ

ಯಾವ ಮಾತ್ರ ಇರಲಿಲ್ಲ. ಯಾವ ದೈವಜ್ಞಾನವನ್ನಾಗಲೀ, ಮೂರು ಆತ್ಮಗಳ ವಿವರವಾಗಲಿ ತಿಳಿಯದ ಆರ್ಯರು ತಾವು ಸೃಷ್ಠಿಸಿದ ವೇದಗಳೇ ದೊಡ್ಡವೆಂದು, ವೇದಗಳಲ್ಲಿ ಸಮಸ್ತ ಜ್ಞಾನವೂ ಇದೆಯೆಂದು ಪ್ರಚಾರ ಮಾಡಿದ್ದಾರೆ. ವೇದಗಳು ಅವುಗಳಲ್ಲಿ ಅಂತರ್ಭಾಗಗಳಾದ ಉಪನಿಷತ್ತುಗಳು ದೈವ ಜ್ಞಾನಕ್ಕೆ ನಿಲಯ ಎನ್ನುವ ಹಾಗೆ, ದೇವರು, ಜ್ಞಾನ ಭಕ್ತಿ ಎಂಬ ಪದಗಳನ್ನು ಉಪಯೋಗಿಸಿ ವೇದಗಳಲ್ಲಿ ಉಪನಿಷತ್ತುಗಳಲ್ಲಿ, ಪುರಾಣಗಳಲ್ಲಿ ಬರೆದರೂ, ವಾಸ್ತವಕ್ಕೆ ಅದರಲ್ಲಿ ಮೂರು ಆತ್ಮಗಳ ಜ್ಞಾನ ಇಲ್ಲದೇ ಹೋಗಿರುವುದರಿಂದ, ಅವು ಜ್ಞಾನಕ್ಕೆ ನಿಲಯ ಆಗಲಾರದೇ ಹೋಗಿವೆ. ಕೊನೆಗೆ ದ್ವಾಪರ ಯುಗದಲ್ಲಿ ವ್ಯಾಸನಿಂದ ನಾಲ್ಕು ವೇದಗಳು, ಹದಿನೆಂಟು ಪುರಾಣಗಳು, 1108 ಉಪನಿಷತ್ತುಗಳು ಬರೆಯಲ್ಪಟ್ಟು ಗ್ರಂಥರೂಪವಾಗಿ ಬದಲಾವಣೆಯಾಗಿವೆ. ಆರ್ಯನಾದ ವ್ಯಾಸನು ಸಹ ವೇದಗಳು, ಪುರಾಣಗಳು, ಉಪನಿಷತ್ತುಗಳೇ ಮುಕ್ತಿಗೆ ಸೋಪಾನಗಳೆಂದು ತಿಳಿದು, ಅದರಲ್ಲಿರುವುದು ನಿಜವಾದ ಜ್ಞಾನವೆಂದು ತಪ್ಪಾಗಿ ಅರ್ಥೈಸಿಕೊಂಡು, ಅವುಗಳನ್ನು ಗ್ರಂಥಗಳ ರೂಪದಲ್ಲಿ ತಯಾರಿಸಿ ಇಡುವುದು ನಡೆದಿದೆ. ಅಲ್ಲಿಯವರೆಗು ವೇದ ಸೂತ್ರಗಳನ್ನು ಉಪನಿಷತ್ತುಗಳನ್ನು ಎಷ್ಟೋ ಜನ ಬರೆದಿರುವಾಗ, ಅಲ್ಲಿಯವರೆಗು ಚಿನ್ನಾಭಿನ್ನವಾಗಿ ಇರುವ ಅವುಗಳನ್ನು ಒಂದು ಕಡೆ ಸೇರಿಸಿ, ತಾನು ಸಹ ಸ್ವಲ್ಪ ಬರೆದು, ನಾಲ್ಕು ವೇದಗಳನ್ನು ಪೂರ್ತಿಮಾಡಿ ಗ್ರಂಥ ರೂಪದಲ್ಲಿ ಮಾಡಿದ ಮೊದಲನೆಯವನು ವೇದವ್ಯಾಸನು. ವೇದಗಳನ್ನು ಬರೆಯುವುದರಿಂದ ಆತನನ್ನು ವೇದವ್ಯಾಸನೆಂದು ಗುರುತಿಸುವುದಕ್ಕಾಗಿ, ವ್ಯಾಸನ ಹೆಸರು ಮುಂದೆ ವೇದ ಅನ್ನುವ ಬಿರುದನ್ನು ಇಡುವುದು ನಡೆದಿದೆ.

ನಾಲ್ಕು ವೇದಗಳನ್ನು, ಹದಿನೆಂಟು ಪುರಾಣಗಳನ್ನು, 1108 ಉಪನಿಷತ್ತುಗಳನ್ನು ಛಂದೋಬದ್ಧವಾಗಿ ಶ್ಲೋಕಗಳ ರೂಪದಲ್ಲಿ ಬರೆದ ವ್ಯಾಸನು ತಾನು ದೊಡ್ಡ ಕೆಲಸ ಮಾಡಿದ್ದೇನೆಂದು, ಶಾಶ್ವತವಾಗಿ ಮನುಷ್ಯರಿಗೆ ಜ್ಞಾನವನ್ನು ಗ್ರಂಥ ರೂಪದಲ್ಲಿ ತಿಳಿಸಿದ್ದೇನೆಂದು ಸಂತೋಷಪಟ್ಟನು. ಆದರೆ ಆ ಸಂತೋಷ ಬಹಳ ಕಾಲ ನಿಲ್ಲಲಿಲ್ಲ. ದ್ವಾಪರಯುಗದ ಕೊನೆಯಲ್ಲಿ ಧರ್ಮಗಳು

ಅಧರ್ಮಗಳಾಗಿ ಬದಲಾಗುತ್ತಿವೆಯೆನ್ನುವ ಉದ್ದೇಶದಿಂದ, ದೇವರು ಭಗವಂತನಾಗಿ ಹುಟ್ಟಿ ಪುನಃ ತಾನು ಸೃಷ್ಟ್ಯಾದಿಯಲ್ಲಿ ಸೂರ್ಯನಿಗೆ ಹೇಳಿದ ಜ್ಞಾನವನ್ನು ಭಗವದ್ಗೀತೆಯಾಗಿ ಅರ್ಜುನನಿಗೆ ಹೇಳುವುದು ನಡೆದಿದೆ. ಭಗವಂತನಾದ ಕೃಷ್ಣನು ಹೇಳಿದ ಜ್ಞಾನ ಅರ್ಜುನನಿಂದ ವ್ಯಾಸನಿಗೆ ಸೇರಿತು. ಮಹಾ ಮೇಧಾವಿಯಾದ ವ್ಯಾಸನು ಭಗವಂತನು ಹೇಳಿದ ಜ್ಞಾನವನ್ನು ಕೇಳಿದ ನಂತರ ತಾನು ಎಷ್ಟೋ ತಪ್ಪು ಮಾಡಿದ್ದೇನೆಂದೂ, ತಾನು ವೇದಗಳ ರೂಪದಲ್ಲಿ, ಪುರಾಣಗಳ ರೂಪದಲ್ಲಿ ಹೇಳಿರುವುದು ಜ್ಞಾನವೇ ಅಲ್ಲವೆಂದು ತಿಳಿದು, ತಾನು ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತವಾಗಿ ಕೃಷ್ಣನು ಹೇಳಿದ ಭಗವದ್ಗೀತೆಯನ್ನು ಗ್ರಂಥವಾಗಿ ಶ್ಲೋಕಗಳ ರೂಪದಲ್ಲಿ ಬರೆದು ತೃಪ್ತಿ ಪಟ್ಟಿದ್ದಾನೆ.

ಇಂದೂದೇಶಕ್ಕೆ ಬರುವುದಕ್ಕಿಂತ ಮೊದಲು ಋಗ್ವೇದವನ್ನು ಸ್ವಲ್ಪಮಟ್ಟಿಗೆ ಸೃಷ್ಟಿಸಿಕೊಂಡ ಆರ್ಯರು, ಭಾರತದೇಶಕ್ಕೆ ಬಂದ ನಂತರ ಉಳಿದ ಮೂರು ವೇದಗಳನ್ನು, ಋಗ್ವೇದದಲ್ಲಿನ ಸ್ವಲ್ಪ ಭಾಗವನ್ನು, ಉಪನಿಷತ್ತುಗಳನ್ನು ಪುರಾಣಗಳನ್ನು, ರಾಮಾಯಣ ಮೊದಲಾದ ಇತಿಹಾಸಗಳನ್ನು ತಯಾರು ಮಾಡಿದ್ದಾರೆ. ಅದರಲ್ಲಿ ಜ್ಞಾನವಿದೆಯೆಂದು ಹೇಳಿದರೂ, ಅದು ಮನುಷ್ಯರು ಹೇಳಿದ ಜ್ಞಾನವಾಗಿರುವುದರಿಂದ, ದೇವರು ಹೇಳದ ಜ್ಞಾನವಾಗಿರುವುದರಿಂದ ಅವುಗಳಲ್ಲಿ ಜ್ಞಾನ ತುಪ್ಪದೀರೇಕಾಯಿಯಲ್ಲಿ ತುಪ್ಪ ಇದ್ದಹಾಗೆ ತಯಾರಾಗಿದೆ. ದ್ರಾವಿಡರ ಜ್ಞಾನಕ್ಕಿಂತ ತಮ್ಮ ಜ್ಞಾನ ಮಿಗಿಲಾದದ್ದು ಎನ್ನುವಹಾಗೆ, ಹೊರಗೆ ಕಾಣಿಸುವ ಎಷ್ಟೋ ಆಚರಣೆಗಳನ್ನು ಸೃಷ್ಟಿಸಿಕೊಂಡು, ಜ್ಞಾನಿಗಳ ಹಾಗೆ ಕಾಣಿಸಬೇಕೆಂದು ಪ್ರಯತ್ನಿಸಿದ್ದಾರೆ. ದ್ರಾವಿಡರು ಕರ್ಮ, ಬ್ರಹ್ಮಯೋಗಗಳನ್ನು ಆಚರಿಸಿದಾಗ, ಆರ್ಯರು ಯಜ್ಞಯಾಗಗಳು, ವೇದಾಧ್ಯಯನಗಳು, ತಪಸ್ಸುಗಳು ಅನೇಕ ವಿಧಗಳ ಆರಾಧನೆಗಳನ್ನು ಜಾರಿಗೆ ತಂದು ಆಚರಿಸಲು ಆರಂಭಿಸಿದ್ದಾರೆ. ಆಗ ಕಾಣಿಸದ ಕರ್ಮಯೋಗಕ್ಕಿಂತಲೂ, ಕಾಣಿಸುವ ಯಜ್ಞಯಾಗಗಳು, ವ್ರತಕ್ರತುಗಳು ವೇದಾಧ್ಯಯನಗಳು, ತಪಸ್ಸುಗಳು, ದಾನಗಳು ಚೆನ್ನಾಗಿ ಕಾಣಿಸಿದಾಗ ಉಳಿದ ಪ್ರಜೆಗಳೆಲ್ಲರೂ ಅವುಗಳನ್ನೇ ಆಚರಿಸುವುದಕ್ಕೆ ಆರಂಭಿಸಿದ್ದಾರೆ. ಈ

ವಿಧವಾಗಿ ನಡೆಯುತ್ತಾ ಕಾಲಕ್ರಮದಲ್ಲಿ ದ್ವಾಪರಯುಗ ಅಂತ್ಯಕ್ಕೆ ಯಜ್ಞಯಾಗಾದಿಗಳನ್ನು ತಪಸ್ಸುಗಳನ್ನು, ದಾನಗಳನ್ನು, ವೇದಾಧ್ಯಯನಗಳನ್ನು ಆಚರಿಸುವವರು ಹೆಚ್ಚಾಗಿ ಹೋಗಿದ್ದಾರೆ. ರಾಜರು ಸಹಿತ ಆರ್ಯರ ಬಲೆಯಲ್ಲಿ ಬಿದ್ದು ಅವರ ಕೋರಿಕೆಗಳನ್ನು ಈಡೇರಿಸಿಕೊಳ್ಳುವುದಕ್ಕೆ ಯಜ್ಞಯಾಗಾದಿಗಳನ್ನು ಮಾಡುವದಕ್ಕೆ ಆರಂಭಿಸಿದ್ದಾರೆ. ಪುತ್ರರಿಗೋಸ್ಕರ ಪುತ್ರಕಾಮೇಷ್ಠಿಯಾಗ ತ್ರೇತಾಯುಗದಲ್ಲಿ ಮಾಡಿದಾಗ, ಅದೇ ಯುಗದಲ್ಲೇ ಶ್ರೀರಾಮನು ಅಶ್ವಮೇಧಯಾಗವನ್ನು ಮಾಡಿದಹಾಗೆ ನಮಗೆ ನಿರೂಪಣೆಗಳಿವೆ. ತ್ರೇತಾಯುಗದಲ್ಲಿ ಎಷ್ಟೋ ಮಹರ್ಷಿಗಳು ಯಜ್ಞಗಳನ್ನು ಮಾಡುತ್ತಿರುವಾಗ ಆ ಯಜ್ಞಗಳು ಅಧರ್ಮವಾಗಿರುವವೆಂದು ಅವುಗಳನ್ನು ಧ್ವಂಸ ಮಾಡುವುದಕ್ಕೆ ದಕ್ಷಿಣದಲ್ಲಿರುವ ಶ್ರೀಲಂಕದಿಂದ ರಾಕ್ಷಸರು ಬರುತ್ತಿದ್ದರೆಂದು ಇತಿಹಾಸವಾದ ರಾಮಾಯಣದಲ್ಲಿ ಬರೆದುಕೊಂಡಿದ್ದಾರೆ.

ತ್ರೇತಾಯುಗದಲ್ಲೇ ಆರ್ಯರಾದ ವಾಲ್ಮೀಕಿ ಬರೆದ ರಾಮಾಯಣ ಗ್ರಂಥ ಯಜ್ಞಯಾಗಾದಿಗಳು, ತಪಸ್ಸುಗಳು, ವೇದಾಧ್ಯಯನಗಳು ಧರ್ಮಸಮ್ಮತವಾದವೆಂದು, ಅವೇ ನಿಜವಾದ ಜ್ಞಾನವೆಂದು, ಮನುಷ್ಯ ತಪ್ಪದೆ ಆಚರಿಸಬೇಕಾದ ದರ್ಮಾಚರಣಗಳೆಂದು ಬೋಧಿಸಿ ಬರೆಯುವುದರಿಂದ ಉಳಿದವರೆಲ್ಲರೂ ಆ ಮಾತನ್ನೆ ವಾಸ್ತವವೆಂದುಕೊಂಡಿದ್ದಾರೆ. ಕಲಿಯುಗ ಕಾಲ ನಡೆಯುವ ಈ ಕಾಲದಲ್ಲಿ ನಾವು ಆರ್ಯರೆನ್ನುವ ಸ್ಪೃಹ ಆರ್ಯರಿಗಿದ್ದರೂ, ನಾವು ದ್ರಾವಿಡರು ಎನ್ನುವ ಸ್ಪೃಹ (ಜ್ಞಾಪಕ) ದ್ರಾವಿಡರಿಗೆ ಇಲ್ಲದಂತೆ ಹೋಗಿರುವುದರಿಂದ ಆರ್ಯರು ಹೇಳಿದ ಯಜ್ಞ, ದಾನ, ತಪಸ್ಸು, ವೇದಗಳೇ ನಿಜವಾದ ಜ್ಞಾನವೆಂದು ದ್ರಾವಿಡರು ಸಹ ಭ್ರಮಿಸುವುದು ನಡೆದಿದೆ. ದ್ವಾಪರಯುಗ ಅಂತ್ಯಕ್ಕೇ ದ್ರಾವಿಡರು ತಮ್ಮ ಜ್ಞಾನವನ್ನು ಕಳೆದುಕೊಂಡು ಪೂರ್ತಿ ಅಜ್ಞಾನದಶೆಯಲ್ಲಿ ಇರುವುದರಿಂದ ವ್ಯಾಸನು ಬರೆದ ವೇದಗಳು, ಉಪನಿಷತ್ತುಗಳು, ಪುರಾಣಗಳು ದೊಡ್ಡ ಜ್ಞಾನ ನಿಧಿಗಳಾಗಿ ಕಾಣಿಸಿವೆ. ಹಾಗೆ ಕಾಣಿಸುವುದರಿಂದ ತಮ್ಮ ಚರಿತ್ರೆಯನ್ನು, ತಮ್ಮ ಜ್ಞಾನವನ್ನು ಮರೆತ ದ್ರಾವಿಡರು ಸಹ ಆರ್ಯರ

ಆಚರಣೆಗಳನ್ನು ಆಚರಿಸುವುದಕ್ಕೆ ಆರಂಭಿಸಿದ್ದಾರೆ. ಈ ವಿಧವಾಗಿ ಭಾರತದೇಶವೆಲ್ಲಾ ಇರುವ ಆರ್ಯರು, ದ್ರಾವಿಡರು ಎಲ್ಲರೂ ಯಜ್ಞ ಯಾಗಾದಿಗಳಲ್ಲಿ, ವೇದಾಧ್ಯಯನಗಳಲ್ಲಿ, ದಾನಗಳಲ್ಲಿ, ತಪಸ್ಸುಗಳಲ್ಲಿ ಮುಳುಗಿಹೋ ಗುವುದರಿಂದ ದೇವರು ಸೃಷ್ಟ್ಯಾದಿಯಲ್ಲಿ ಬೋಧಿಸಿದ ಮೂರು ಆತ್ಮಗಳ ಬೋಧನೆಯಾಗಲಿ, ಕರ್ಮ, ಬ್ರಹ್ಮ ಯೋಗಗಳಾಗಲೀ ಎಲ್ಲೂ ಕಾಣಿಸದಂತೆ ಹೋಗಿವೆ. ಆಗ ಧರ್ಮಗಳಿಗೆ ಮುಪ್ಪು ಏರ್ಪಟ್ಟು, ಧರ್ಮಗ್ಲಾನಿ ಏರ್ಪಟ್ಟಿದೆ ಯೆಂದು ತಿಳಿದ ದೇವರು ಧರ್ಮಗಳಲ್ಲಿನ ಗ್ಲಾನಿಯನ್ನು ತೆಗೆದುಹಾಕುವು ದಕ್ಕೆ ಭಗವಂತನಾಗಿ ಬರಬೇಕಾಗಿ ಬಂದಿದೆ. ಹಾಗೆ ಬಂದಿರುವವನೇ ದ್ವಾಪರಯುಗ ಅಂತ್ಯದಲ್ಲಿನ ಶ್ರೀಕೃಷ್ಣನು.

ಶ್ರೀಕೃಷ್ಣನು ಸಾಧಾರಣ ಮನುಷ್ಯನಹಾಗೆ ಬಂದು, ಆತನು ಇಂತಹ (ದೇವರೇ) ಎಂದು ಗುರುತು ಇಲ್ಲದೇ ಸಾಮಾನ್ಯನಹಾಗೆ ಇದ್ದು, ಪುನಃ ಸೃಷ್ಟ್ಯಾದಿಯಲ್ಲಿ ಸೂರ್ಯನಿಗೆ ಹೇಳಿದ ಜ್ಞಾನವನ್ನೇ ಹೇಳಿ, ಧರ್ಮಗಳಲ್ಲಿ ತಿಳಿಯದಂತೆ ಅಡಗಿರುವ ಗ್ಲಾನಿಯನ್ನು ತೆಗೆದುಹಾಕುವುದು ನಡೆದಿದೆ. ಹಾಗೆ ಬೋಧಿಸಿದ ಬೋಧನೆಯಲ್ಲಿ ಕೃಷ್ಣನು ಒಂದು ಸಂದರ್ಭದಲ್ಲಿ ವಿಶ್ವರೂಪ ಸಂದರ್ಶನ ಯೋಗವೆನ್ನುವ ಅಧ್ಯಾಯದಲ್ಲಿ 48, 53 ಶ್ಲೋಕಗಳಲ್ಲಿ ಯಜ್ಞಗಳಿಂದಾಗಲಿ, ದಾನಗಳಿಂದಾಗಲಿ, ವೇದಾಧ್ಯಯನಗಳಿಂದಾಗಲಿ, ತಪಸ್ಸುಗಳಿಂದಾಗಲಿ ದೇವರನ್ನು ತಿಳಿಯುವುದಕ್ಕೆ ಸಾಧ್ಯವಿಲ್ಲವೆಂದು ಹೇಳುವುದು ನಡೆದಿದೆ. ದೇವರು ಭಗವಂತನಾಗಿ (ಮನುಷ್ಯನಾಗಿ) ಬಂದು ಪುನಃ ತನ್ನ ಧರ್ಮಗಳನ್ನು ತಿಳಿಸಿದರೂ, ದ್ರಾವಿಡರು ತಮ್ಮ ಜ್ಞಾನವನ್ನು ಗುರುತಿಸಲಾರದೇ ಹೋಗಿದ್ದಾರೆ. ಕೃಷ್ಣನು ಭಗವದ್ಗೀತೆಯೆನ್ನುವ ಹೆಸರಿಂದ ಆದಿಯಲ್ಲಿ ಹೇಳಿದ ಜ್ಞಾನವನ್ನೇ ಹೇಳಿ, ಪುರುಷೋತ್ತಮ ಪ್ರಾಪ್ತಿ ಯೋಗವೆನ್ನುವ 16, 17 ಶ್ಲೋಕಗಳಲ್ಲಿ ಮೂರು ಅತ್ಮಗಳ ತ್ರೈತ ಸಿದ್ಧಾಂತ ಜ್ಞಾನವನ್ನು ಹೇಳಿದರೂ ಗ್ರಹಿಸಲಾರದೆ ಹೋಗಿದ್ದಾರೆ. ಇಂದಿನ ಕಾಲದಲ್ಲಿ ದ್ರಾವಿಡರು ಪೂರ್ತಿಯಾಗಿ ಅಜ್ಞಾನದಲ್ಲಿ ಮುಳುಗಿಹೋಗಿರುವುದರಿಂದ, ಭಗವದ್ಗೀತೆಯಲ್ಲಿ ಹೇಳಿದ ಜ್ಞಾನವನ್ನು ಸಹ

ಅರ್ಥ ಮಾಡಿಕೊಳ್ಳದ ಸ್ಥಿತಿಯಲ್ಲಿ ಇದ್ದುಹೋಗಿದ್ದಾರೆ. ಮೊದಲಿನಿಂದ ಪ್ರಪಂಚ ಜ್ಞಾನದಲ್ಲಿ ಮೇಧಾವಿಗಳಾದ ಆರ್ಯರು, ತಮ್ಮ ಸಮಾಜಗಳನ್ನು ದ್ರಾವಿಡ ದೇಶವಾದ ದಕ್ಷಿಣ ಭಾರತದಲ್ಲಿ ಸಹ ಸ್ಥಾಪಿಸಿ, ದೇವರು ಅಧರ್ಮವೆಂದು ಸೂಚಿಸಿದ ಕಾರ್ಯಗಳನ್ನೇ ದ್ರಾವಿಡರಿಂದ ಮಾಡಿಸುವ ಮಟ್ಟಕ್ಕೆ ಬೆಳೆದಿದ್ದಾರೆ.

ಆರ್ಯರು ಇಂದೂದೇಶದಲ್ಲಿ ತ್ರೇತಾಯುಗದ ಪ್ರಾರಂಭದಲ್ಲಾಗಲೀ, ಇಲ್ಲವೆ ಸ್ವಲ್ಪ ಮುಂಚಿತವಾಗಿ ಕೃತಯುಗದ ಕೊನೆಯಲ್ಲಾಗಲೀ ಪ್ರವೇಶಿಸಿದ್ದಾರೆಂದು ತಿಳಿಯುತ್ತಿದೆ. ಆರ್ಯರು ಭಾರತದೇಶದಲ್ಲಿ ಪ್ರವೇಶಿಸಿದಾಗ ಏಷೀಯರೆನ್ನುವ ಹೆಸರು ಪಡೆದು ಅದನ್ನೇ ಹೇಳಿಕೊಂಡವರು, ಸ್ವಲ್ಪ ಕಾಲಕ್ಕೆ ದ್ರಾವಿಡರಿಗಿಂತ ದೊಡ್ಡದಾಗಿ ಕಾಣಿಸುವಹಾಗೆ ತಮ್ಮನ್ನು ತಾವು ಆರ್ಯರಾಗಿ (ಗುರುಗಳಾಗಿ) ಪ್ರಕಟಿಸಿಕೊಂಡಿದ್ದಾರೆ. ತ್ರೇತಾಯುಗ ಆರಂಭದಲ್ಲೇ ಉತ್ತರ ಭಾರತದೇಶವನ್ನು ಆಕ್ರಮಿಸಿಕೊಂಡು ವಿಂಧ್ಯಪರ್ವತಗಳವರೆಗು ನಿಂತುಹೋಗಿ, ದಕ್ಷಿಣ ದೇಶವನ್ನು ದ್ರಾವಿಡ ರಾಜ್ಯವೆಂದ ಆರ್ಯರು, ತ್ರೇತಾಯುಗವೊಂದರ ಮಧ್ಯಕಾಲಕ್ಕೇ ತಮ್ಮ ದೊಡ್ಡಸ್ತಿಕೆಯನ್ನು ದಕ್ಷಿಣ ದೇಶದಲ್ಲಿಯೂ ಸಹ ವ್ಯಾಪಿಸುವಂತೆ ಮಾಡಿದ್ದಾರೆ. ದೈವಜ್ಞಾನದಲ್ಲಿ ಮುಂದಿದ್ದು ಪ್ರಪಂಚ ಜ್ಞಾನದಲ್ಲಿ ಹಿಂದುಳಿದ ದ್ರಾವಿಡರು, ಕೃತಯುಗದಲ್ಲಿ ಜ್ಞಾನಿಗಳಾಗಿ ಪ್ರಪಂಚ ಪ್ರಸಿದ್ಧಿಯನ್ನೊಂದಿ, ತ್ರೇತಾಯುಗ ಆರಂಭ ಸಮಯದಲ್ಲೇ ತಮ್ಮಲ್ಲಿನ ದೈವಜ್ಞಾನವನ್ನು ಕಳೆದುಕೊಂಡಿದ್ದಾರೆ. ಇತ್ತ ದೈವಜ್ಞಾನವೂ ಇಲ್ಲದೆ, ಅತ್ತ ಪ್ರಪಂಚ ಜ್ಞಾನವೂ ಇಲ್ಲದೆ ಉಭಯ ಭ್ರಷ್ಟರಾಗಿರುವ ದ್ರಾವಿಡರನ್ನು ನೋಡಿದ ಆರ್ಯರು, ಅದೇ ಸಮಯವೆನ್ನುವಂತೆ ಇಂದೂದೇಶವೆನ್ನುವ ಹೆಸರನ್ನು ಸ್ವಲ್ಪ ಬದಲಾಯಿಸಿ, ಇಂದೂ ಶಬ್ಧವನ್ನು ಇಲ್ಲದಂತೆ ಮಾಡಿ, ಹಿಂದೂ ಎನ್ನುವ ಹೆಸರನ್ನು ಇಟ್ಟು ಹಿಂದೂದೇಶವೆಂದು ಹೇಳಿದ್ದಾರೆ. ತಾವು ಸಿಂಧೂನದಿ ತೀರದಿಂದ ಬಂದಿದ್ದೇವೆಂದು, ತಮ್ಮಿಂದಲೇ ಸಿಂಧೂನದಿ ಪ್ರಾಂತದಲ್ಲಿನ ನಾಗರಿಕತೆ ಭಾರತದೇಶದೊಳಗೆ ಬಂದಿದೆಯೆಂದು, ಅದರಿಂದ ಹಿಂದೂ ದೇಶವೆಂದು ಹೇಳುತ್ತಿದ್ದೇವೆಂದು ವಿವರಣೆ ಸಹ ಕೊಟ್ಟಿದ್ದಾರೆ. ಆಗಲೇ ತಾವು ಜ್ಞಾನಿಗಳೆಂದು, ತಮ್ಮ ಜ್ಞಾನದಿಂದಲೇ ಭಾರತದೇಶವನ್ನು

ಇಂದೂ ದೇಶ ಎನ್ನುತ್ತಿದ್ದಾರೆಂದು, ಗಟ್ಟಿಯಾಗಿ ದ್ರಾವಿಡರು ಹೇಳಲಾರದೇ ಹೋಗಿದ್ದಾರೆ. ಹಿಂದೂ ಎನ್ನುವ ಮಾತನ್ನು ಆ ದಿನ ಖಂಡಿಸದೆ ಹೋಗಿರುವುದರಿಂದ, ಇಂದೂ ಶಬ್ಧ ಕಾಲಗರ್ಭದಲ್ಲಿ ಬೆರೆತುಹೋಗಿ, ಕೊನೆಗೆ ಹಿಂದೂ ಶಬ್ಧ ಶಾಶ್ವತವಾಗಿ ನಿಂತುಹೋಗಿದೆ. ಈ ವಿಧವಾಗಿ ಜ್ಞಾನಿಗಳದೇಶವಾದ ಇಂದೂದೇಶವೊಂದರ ಹೆಸರನ್ನು ಬದಲಾಯಿಸಿ ಹಿಂದೂದೇಶವೆಂದು ಹೇಳಿದ ಘನತೆ ಆರ್ಯರಿಗೇ ದಕ್ಕಿದೆ.

ಮೊದಲು ಜ್ಞಾನಿಗಳ ದೇಶವೆನ್ನುವ ಅರ್ಥವನ್ನು ಕೊಡುವ ಇಂದೂದೇಶ ಎನ್ನುವ ಹೆಸರನ್ನು ತೆಗೆದುಹಾಕಿ, ಅರ್ಥವಿಲ್ಲದ ಹಿಂದೂ ಪದವನ್ನು ಹೆಸರಾಗಿ ಇಡುವುದು ಕೇವಲ ಅಸೂಯದಿಂದ ಮಾಡಿದ ಕೆಲಸವೇ ಆಗಲಿ ಬೇರೆಅಲ್ಲ. ನಂತರ ಯಾರೋ ಒಬ್ಬರು ಮುಂಬರುವ ದಿನಗಳಲ್ಲಿ ಚರಿತ್ರೆಯನ್ನು ಪುನಃ ಹೊರ ತೆಗೆದು, ಪುನಃ ಇಂದೂದೇಶವೆನ್ನುವ ಹೆಸರನ್ನು ಹೊಂದಬಹುದೆನ್ನುವ ಉದ್ದೇಶದಿಂದ, ಮೂರನೆ ಹೆಸರನ್ನು ಸಹ ಆರ್ಯರೇ ತರುವುದು ನಡೆದಿದೆ. ಭಾರತದೇಶ ಎನ್ನುವ ಹೆಸರನ್ನು ಭರತನೆನ್ನುವ ರಾಜ ಪಾಲಿಸಿದ ದೇಶವಾಗಿ ನೆಪ ತೋರಿಸಿ, ಇಂದೂದೇಶವನ್ನೇ ಭಾರತದೇಶವೆಂದು ಸಹ ಹೇಳಿದ್ದಾರೆ. ಈ ದೇಶವನ್ನು ಎಷ್ಟೋ ಜನ ರಾಜರು ಪಾಲಿಸಿದಾಗ, ಒಬ್ಬ ಭರತನ ಹೆಸರು ಮಾತ್ರ ಏಕೆ ದೇಶಕ್ಕೆ ಅಂಟಿಕೊಂಡಿದೆಯೋ? ಯಾರನ್ನು ಕೇಳಿದರೂ ಸಮಾಧಾನ ಹೇಳುವುದಿಲ್ಲ. ಈ ವಿಧವಾಗಿ ಅರ್ಥವಿಲ್ಲದ ಹಿಂದೂ ಪದವನ್ನೂ, ಆಧಾರವಿಲ್ಲದ ಭಾರತ ಪದವನ್ನು ಇಂದೂದೇಶಕ್ಕೆ ಅಂಟಿಸಿ, ಅಸಲಾದ ಅರ್ಥದೊಂದಿಗೆ ಕೂಡಿಕೊಂಡ ಇಂದೂ ಪದವನ್ನು ಇಲ್ಲದಂತೆ ಮಾಡುವುದರಲ್ಲಿ ಆರ್ಯರು ಕೃತಕೃತ್ಯರಾಗಿದ್ದಾರೆ. ಹಾಗೆ ದೇಶದ ಹೆಸರು ಬದಲಾಗುವುದರಿಂದ, ತಮ್ಮ ಚರಿತ್ರೆ ಏನೋ ದ್ರಾವಿಡರಿಗೆ ತಿಳಿಯದಂತೆ ಹೋಗುತ್ತದೆನ್ನುವ ಉದ್ದೇಶದಿಂದಲೇ ಆರ್ಯರು ಎರಡು ಹೆಸರುಗಳನ್ನು ಕಲ್ಪಿಸಿ ಅಸಲು ಹೆಸರನ್ನು ಮುಚ್ಚಿಹಾಕಿದ್ದಾರೆ. ಈ ದಿನ  ತಮ್ಮ ಚರಿತ್ರೆಯನ್ನು ಮರೆತುಹೋದರೂ, ತಮ್ಮ ಜ್ಞಾನವನ್ನು ತಿಳಯದಂತೆ ಹೋದರೂ, ತಮ್ಮ ಧರ್ಮಗಳನ್ನು ಪೂರ್ತಿಯಾಗಿ ಬಿಟ್ಟು

ಹಾಕಿದ ದ್ರಾವಿಡರು ಉಳಿದಿರುವುದರಿಂದ ಅವರು ತಮ್ಮ ದೇಶದ ಹೆಸರನ್ನಾಗಲಿ, ತಮ್ಮ ಧರ್ಮಗಳನ್ನಾಗಲಿ, ತಮ್ಮ ಜ್ಞಾನವನ್ನಾಗಲಿ ಗುರುತಿಸಲಾರದ ಸ್ಥಿತಿಯಲ್ಲಿದ್ದು, ಯಾರು ಏನು ಹೇಳಿದರೆ ಅದನ್ನು ಕೇಳುವಹಾಗೆ ಇದ್ದಾರೆ.

ಒಂದುಕಾಲದಲ್ಲಿ ಕೃತಯುಗದಲ್ಲಿ ದೈವಜ್ಞಾನದಲ್ಲಿ ತಮಗಿಂತ ಮೀರಿದವರು ಇಲ್ಲವೆಂದು ಅನಿಸಿಕೊಂಡ ದ್ರಾವಿಡರು ತ್ರೇತಾಯುಗ ಕಾಲದಲ್ಲಿ ಆರ್ಯರ ಬರುವಿಕೆಯಿಂದ ಸ್ವಲ್ಪ ಸ್ವಲ್ಪ ಪ್ರಕಾಶಿಸಿ ನಂದುಹೋದ ದೀಪದಹಾಗೆ ಬದಲಾಗುತ್ತಾ ಬಂದು, ಕೊನೆಗೆ ಬೆಂಕಿ ಉಳಿಸಿದ ಇದ್ದಲಿಯಂತೆ ಉಳಿದುಹೋಗುತ್ತಾ ಬರುವುದು, ಮೊದಲೇ ಮೇಧಾವಿಗಳಾದ ಆರ್ಯರಿಗೆ ಚೆನ್ನಾಗಿ ಅನುಕೂಲವಾಗಿದೆ. ಆರ್ಯರು ಮೊದಲು ಇಂದೂದೇಶಕ್ಕೆ ಬಂದಾಗ, ಸ್ವಚ್ಛವಾದ ಇಂದೂಗಳನ್ನು ಆರ್ಯರು ದ್ರಾವಿಡರಲ್ಲಿ ನೋಡತೊಡಗಿದ್ದಾರೆ. ಆ ದಿನ ದ್ರಾವಿಡರಲ್ಲಿರುವ ಜ್ಞಾನ, ಜ್ಞಾನಶಕ್ತಿ ತಮ್ಮಲ್ಲಿ ಇಲ್ಲವೆಂದು, ಅಂತಹ ಶಕ್ತಿಯನ್ನು, ಅಂತಹ ಜ್ಞಾನವನ್ನು ತಾವು ಹೊಂದಲಾರೆವೆಂದು ತಿಳಿದು, ತಮಗಿಂತ ಯಾವ ವಿಷಯದಲ್ಲೂ ದ್ರಾವಿಡರು ದೊಡ್ಡದಾಗಿರುವುದು ಸರಿಹೋಗದ ಆರ್ಯರು, ಪಥಕದ ಪ್ರಕಾರ ದ್ರಾವಿಡರನ್ನು ಜ್ಞಾನವನ್ನು ಕಳೆದುಕೊಂಡ ಅಜ್ಞಾನಿಗಳಾಗಿ ಮಾಡಬೇಕೆಂದುಕೊಂಡು, ಅವರಿಗಿಂತ ನಾವೇ ದೊಡ್ಡವರು ಅನ್ನುವಹಾಗೆ, ತಮ್ಮನ್ನು ಗುರುಗಳಾಗಿ (ಆರ್ಯರಾಗಿ) ಹೇಳಿಕೊಂಡಿದ್ದಾರೆ. ನಂತರ ಇಂದೂ ದೇಶದ ಹೆಸರನ್ನು ಬದಲಾಯಿಸಿ ಹಿಂದೂದೇಶವೆಂದೂ, ಭಾರತದೇಶವೆಂದೂ ಹೊಸ ಹೆಸರುಗಳನ್ನಿಟ್ಟು ದ್ರಾವಿಡರು ತಮ್ಮ ಚರಿತ್ರೆಯನ್ನು ಮರೆತುಹೋಗುವಂತೆ ಮಾಡಿದ್ದಾರೆ. ನಂತರ ಕುಲವ್ಯವಸ್ಥೆಯನ್ನು ಆರ್ಯರು ಹೇಗೆ ಪ್ರವೇಶ ಮಾಡಿದ್ದಾರೋ ವಿವರಿಸಿಕೊಂಡು ನೋಡೋಣ.

ಕೃತಯುಗದ ಆರಂಭದಲ್ಲಿ ಸೂರ್ಯನು ಮನುವಿಗೆ ಜ್ಞಾನ ತಿಳಿಸಿದ ನಂತರ ಅಂದಿನ ಪ್ರಜೆಗಳೆಲ್ಲರೂ ಜ್ಞಾನವನ್ನು ತಿಳಿದು ದೊಡ್ಡ ಜ್ಞಾನಿಗಳಾಗಿ ಇರುವುದರಿಂದ, ಪ್ರಪಂಚ ದೇಶಗಳಲ್ಲಿ ಈ ದೇಶವನ್ನು ಜ್ಞಾನಿಗಳ ದೇಶವೆಂದು

ಹೊಗಳುವುದು ನಡೆದಿದೆ. ದೈವಜ್ಞಾನವನ್ನು ಹೊಂದಿದ ಇಂದೂ ದೇಶದ ಪ್ರಜೆಗಳಲ್ಲಿ ಎರಡು ವರ್ಣಗಳು ಮಾತ್ರ ಉಳಿದುಕೊಂಡಿವೆ. ವರ್ಣ ಅಂದರೆ ಬಣ್ಣ ಎಂದು ಅರ್ಥ. ಆ ದಿನಗಳಲ್ಲಿ ಜ್ಞಾನವನ್ನು ಹುಣ್ಣಿಮೆಯ ಬೆಳದಿಂಗಳಾಗಿ, ಅಜ್ಞಾನವನ್ನು ಅಮಾವಾಸ್ಯೆ ಕತ್ತಲಾಗಿ ಹೋಲಿಸಿ ಹೇಳುತ್ತಿದ್ದರು. ಬೆಳದಿಂಗಳು ಬಿಳಿಯದಾಗಿರುತ್ತದೆ, ಕತ್ತಲು ಕಪ್ಪಾಗಿರುತ್ತದೆಂದು, ಜ್ಞಾನ ಅಜ್ಞಾನಗಳನ್ನು ತಿಳಿಸುವ ಬಿಳಿ ಕಪ್ಪು ಬಣ್ಣಗಳಾಗಿ ಹೋಲಿಕೆ ಮಾಡಿ ಹೇಳುವುದು ನಡೆದಿದೆ. ಕೃತಯುಗದಲ್ಲಿ ಮನುಷ್ಯರೆಲ್ಲರೂ ಜ್ಞಾನ ತಿಳಿದವರೇ ಎಂದು ಹೇಳಿದರೂ, ಎಲ್ಲರಲ್ಲಿ ನಾವು ಜ್ಞಾನಿಗಳೇ ಎನ್ನುವ ಭಾವವಿದ್ದರೂ ನೂರಕ್ಕೆ 98 ಮಂದಿ ಜ್ಞಾನಿಗಳಾದಾಗ, ನೂರಕ್ಕೆ ಶೇಕಡ ಎರಡರಷ್ಟು ಜನ ಅಜ್ಞಾನವನ್ನು ಹೊಂದಿ ಸರಿಯಾದ ಜ್ಞಾನವನ್ನು ಅವರ ಬುದ್ಧಿ ಗ್ರಹಿಸಿಕೊಳ್ಳದ ಸ್ಥಿತಿಯಲ್ಲಿ ಇರುತ್ತಿದ್ದರು. ಅಂತಹ ಅಜ್ಞಾನಿಗಳನ್ನು ಕರಿಯರೆಂದು, ಜ್ಞಾನಿಗಳನ್ನು ಬಿಳಿಯರೆಂದು ವರ್ಣಗಳನ್ನು (ಬಣ್ಣಗಳನ್ನು) ಹೋಲಿಸಿ ಹೇಳುವುದು ಆ ದಿನ ಅಭ್ಯಾಸವಾಗಿರುತ್ತಿತ್ತು. ಆ ವಿಧವಾಗಿ ಆರಂಭವಾದ ವರ್ಣ ಎನ್ನುವ ಪದ ಕೊನೆಗೆ ಕುಲ ಎನ್ನುವ ಅರ್ಥವನ್ನು ಸೂಚಿಸುವುದಾಗಿದೆ. ಆದ್ದರಿಂದ ಇಂದಿಗೂ ಕೆಲವರು ಕುಲಗಳ ಪ್ರಸ್ತಾವನೆ ಬಂದಾಗ ವರ್ಣ ಎನ್ನುವ ಪದವನ್ನು ಬಳಸುವುದು ನಡೆಯುತ್ತಿದೆ. ವರ್ಣ ಎನ್ನುವ ಪದ ಒಂದು ಭಾಗವನ್ನು, ಒಂದು ಗುಂಪನ್ನು ಸೂಚಿಸುವಾಗಲೂ ಸಹ ಬಳಸಬಹುದು.

ಕೃತಯುಗ ಪ್ರಾರಂಭದಲ್ಲಿ ಸಂಪೂರ್ಣ ಜ್ಞಾನಿಗಳಾದ ದ್ರಾವಿಡರು ಇಂದೂದೇಶದಲ್ಲಿ ಒಂದು ಗುಂಪಾಗಿ ಹೇಳಲ್ಪಟ್ಟರೆ, ಜ್ಞಾನವಿಲ್ಲದ ಬಹಳ ಸ್ವಲ್ಪ ಜನ ಮಾತ್ರ ಮತ್ತೊಂದು ಗುಂಪಾಗಿ ಹೇಳಲ್ಪಡುತ್ತಿದ್ದರು. ಎರಡು ಗುಂಪಿನವರನ್ನು ಎರಡು ವರ್ಣಗಳವರೆಂದು ಹೇಳುವುದು ಸಹ ನಡೆದಿದೆ. ಬಿಳಿ ಕಪ್ಪು ವರ್ಣಗಳಾಗಿ ಹೋಲಿಸಿ ಹೇಳಲಾಗುವ ಆ ಎರಡು ವರ್ಣದವರು ನಾವು ಇಂತಹವರೆಂದು ಹೇಳಿಕೊಳ್ಳುವುದರಲ್ಲಿ ನಾಚಿಕೆಪಡುತ್ತಿರಲಿಲ್ಲ. ಜ್ಞಾನಿಗಳನ್ನು ಬಿಳಿ ವರ್ಣವಾಗಿ,

ಅಜ್ಞಾನಿಗಳನ್ನು ಕಪ್ಪು ವರ್ಣವಾಗಿ ಹೋಲಿಸಿ ಹೇಳಿಕೊಳ್ಳುವುದು ನಡೆದಿದೆ. ಚಂದ್ರನು, ಬೆಳದಿಂಗಳು ಎರಡೂ ಜ್ಞಾನಕ್ಕೆ ಚಿಹ್ನೆಗಳೆಂದೂ, ಅಮಾವಾಸ್ಯೆ, ಕತ್ತಲು ಎರಡೂ ಅಜ್ಞಾನಕ್ಕೆ ಚಿಹ್ನೆಗಳೆಂದು ಹೇಳಿಕೊಳ್ಳುತ್ತಿದ್ದರು. ತಾವು ಸಂಪಾದಿಸಿಕೊಂಡ ಜ್ಞಾನ ಪ್ರಪಂಚದಲ್ಲಿ ಎಲ್ಲದಕ್ಕಿಂತ ದೊಡ್ಡದು ಆಗಿರುವುದರಿಂದ ಅದನ್ನು ಬ್ರಹ್ಮ ಎನ್ನುತ್ತಿದ್ದರು. ಅದೇ ವಿಧವಾಗಿ ಜ್ಞಾನವನ್ನು ಸಂಪಾದಿಸಿಕೊಂಡ ವರನ್ನು ಎಲ್ಲದಕ್ಕಿಂತ ದೊಡ್ಡದನ್ನು (ಜ್ಞಾನವನ್ನು) ಸಂಪಾದಿಸಿಕೊಂಡಿದ್ದಾರೆ ಆದ್ದರಿಂದ, ಅವರನ್ನು ಬ್ರಹ್ಮಜ್ಞಾನಿಗಳು ಎನ್ನುತ್ತಿದ್ದರು. ಪ್ರಪಂಚದಲ್ಲಿ ಎಲ್ಲದಕ್ಕಿಂತ ದೊಡ್ಡದು, ಎಲ್ಲದಕ್ಕಿಂತ ಉತ್ತಮವಾದದ್ದು, ಎಲ್ಲದಕ್ಕಿಂತ ರಹಸ್ಯವಾದದ್ದು, ಎಲ್ಲದರಲ್ಲಿ ಪ್ರಥಮ ಸ್ಥಾನದಲ್ಲಿರುವ ಜ್ಞಾನವನ್ನು ತಿಳಿದವನನ್ನು ಅದರ ಉನ್ನತ ಸ್ಥಾನಕ್ಕೆ (ದೊಡ್ಡ ಸ್ಥಾನಕ್ಕೆ) ತಕ್ಕಹಾಗೆ, ದೊಡ್ಡ ಎನ್ನುವ ಅರ್ಥ ಬರುವಹಾಗೆ ಬ್ರಹ್ಮ ಎನ್ನುತ್ತಿದ್ದರು. ಬ್ರಹ್ಮಜ್ಞಾನ ಇರುವವರು ಆಗಿರುವುದರಿಂದ ಒಬ್ಬನನ್ನು ಬ್ರಹ್ಮ ಎಂದಾಗಲಿ, ಬ್ರಾಹ್ಮಣನು ಎಂದಾಗಲಿ ಎನ್ನುತ್ತಿದ್ದರು. ಆದಿನ ಇಂದೂ ದೇಶದಲ್ಲಿನ ದ್ರಾವಿಡರೆಲ್ಲರೂ ಬ್ರಹ್ಮ (ದೊಡ್ಡ) ಜ್ಞಾನವನ್ನು ತಿಳಿದವರೇ ಆಗಿರುವುದರಿಂದ ಎಲ್ಲರನ್ನೂ ಬ್ರಾಹ್ಮಣರು ಎನ್ನುತ್ತಿದ್ದರು. ಬ್ರಹ್ಮಜ್ಞಾನ ಅಥವಾ ದೈವಜ್ಞಾನವನ್ನು ಅನುಸರಿಸಿ ಇವರು ಜ್ಞಾನಿಗಳು ಎನ್ನುವ ಸೂಚನೆ ಪ್ರಕಾರ ಬ್ರಾಹ್ಮಣರು ಅನ್ನುವುದು ನಡೆದಿದೆ. ಬ್ರಾಹ್ಮಣರು ಎನ್ನುವ ಮಾತು ಅವರು ಕಲಿತ ವಿದ್ಯೆಯನ್ನನುಸರಿಸಿ ಬಂದಿರುವುದಾಗಲೀ, ಅದು ಒಂದು ಕುಲ ಅಲ್ಲ. ಆದಿನ ಕುಲಗಳ ವ್ಯವಸ್ಥೆ ಇಲ್ಲವೇ ಇಲ್ಲ. ಬ್ರಹ್ಮಜ್ಞಾನವನ್ನು ಅಥವಾ ಬ್ರಹ್ಮವಿದ್ಯೆ ಯನ್ನು ತಿಳಿದವನು ಬ್ರಾಹ್ಮಣನು ಎನ್ನುವ ಒಂದು ವರ್ಗ. ಬ್ರಹ್ಮಜ್ಞಾನ ತಿಳಿಯದವರು ಕೇವಲ ಶೇಕಡ ಎರಡರಷ್ಟು ಜನ ಒಂದು ವರ್ಗದವರಾಗಿ ಇರುತ್ತಿದ್ದರು. ತಿಳಿದವರು ತಿಳಿಯದವರು ಎನ್ನುವ ಅರ್ಥವನ್ನು ಕೊಡುವ ವರ್ಣಗಳು ವಿನಃ ಶತೃತ್ವಕ್ಕೆ ಸಂಬಂಧಿಸಿದ ವರ್ಗಗಳು ಇರುತ್ತಿರಲಿಲ್ಲವೆಂದು ತಿಳಿಯಬೇಕು.

ಆ ದಿನಗಳಲ್ಲಿ ಬ್ರಹ್ಮ ಜ್ಞಾನವನ್ನು ತಿಳಿದವರು ದೊಡ್ಡವರೆಂದು, ತಿಳಿಯದವರು ತಿಳಿದವರನ್ನು ಗೌರವಿಸುತ್ತಿದ್ದರು. ಎಲ್ಲಿಯಾದರೂ ಜ್ಞಾನವನ್ನು ತಿಳಿದವರು ಉನ್ನತ ಸ್ಥಾನದ ಮೇಲೆ ಕುಳಿತುಕೊಂಡರೆ, ಜ್ಞಾನ ತಿಳಿಯದವರು ಕೆಳಗಿನ ಸ್ಥಾನದಲ್ಲಿ ಕುಳಿತುಕೊಳ್ಳುತ್ತಿದ್ದರು. ಉದಾಹರಣೆಗೆ ಬ್ರಹ್ಮಜ್ಞಾನಿ ಆದವನು ಒಂದು ಕಟ್ಟೆಯ ಮೇಲೆ ಕುಳಿತುಕೊಂಡರೆ, ಜ್ಞಾನ ತಿಳಿಯದವರು ಕಟ್ಟೆಯ ಕೆಳಗಿನ ಸ್ಥಳದಲ್ಲಿ ಕುಳಿತುಕೊಳ್ಳುತ್ತಿದ್ದರು. ಹಾಗೇ ಎಲ್ಲಿಯಾದರೂ ದೈವಜ್ಞಾನವನ್ನು ತಿಳಿದವನು ಕುರ್ಚಿಯಲ್ಲಿ ಕುಳಿತುಕೊಂಡರೆ, ದೈವಜ್ಞಾನವನ್ನು ತಿಳಿಯದವನು ಕೆಳಗೆ ಕುಳಿತುಕೊಂಡು, ಮೇಲೆ ಕುಳಿತುಕೊಂಡ ಜ್ಞಾನಿಯನ್ನು ಗೌರವಿಸುತ್ತಿದ್ದನು. ತಿಳಿದವರು ವಯಸ್ಸಿನಲ್ಲಿ  ಚಿಕ್ಕವರಾದರೂ, ತಿಳಿಯದವರು ವಯಸ್ಸಿನಲ್ಲಿ ದೊಡ್ಡವರಾದರೂ, ತಮ್ಮ ವಯಸ್ಸನ್ನು ಅನುಸರಿಸಿ ಚಿಕ್ಕ ದೊಡ್ಡ ಅಂದುಕೊಳ್ಳದೆ, ಅವರಿಗಿರುವ ಜ್ಞಾನವನ್ನನುಸರಿಸಿ ಚಿಕ್ಕ ದೊಡ್ಡ ತಾರತಮ್ಯಗಳನ್ನು ಲೆಕ್ಕಿಸಿ ಕೊಳ್ಳುತ್ತಿದ್ದರು. ತಿಳಿದವನಿಗೆ ಮಂಚವಾದರೆ, ತಿಳಿಯದವನಿಗೆ ಚಾಪೆ ಎಂದೂ, ತಿಳಿದವನಿಗೆ ಚಾಪೆ ಆದರೆ, ತಿಳಿಯದವನಿಗೆ ನೆಲ ಎನ್ನುವ ಮಾತು ನಾಣ್ನುಡಿಯಾಗಿ ಇರುತ್ತಿತ್ತು.

ಅದೇ ಪದ್ಧತಿಯಲ್ಲಿ ಜ್ಞಾನವನ್ನು ತಿಳಿದವನನ್ನು ಮೇಲಿನವನೆಂದು, ಜ್ಞಾನ ತಿಳಿಯದವನನ್ನು ಕೆಳಗಿನವನೆಂದು (ಮಾದಿಗ) ಎನ್ನುವುದು ನಡೆಯುತ್ತಿತ್ತು. ತಿಳಿಯದವನು ತಿಳಿದವನನ್ನು ನಮ್ಮ ಮೇಲಿನವನೆಂದು ಸಂಬೋಧಿಸುತ್ತಾ ಗೌರವಪ್ರದವಾಗಿ ಹೇಳುತ್ತಿದ್ದರು. ಹಾಗೇ ತಿಳಿದವರು ತಿಳಿಯದವರನ್ನು ಮಾದಿಗರು (ನಮ್ಮ ಕೆಳಗಿನವರೆಂದು) ಸತ್ಯವನ್ನು ಹೇಳುತ್ತಾ ಮಾತನಾಡುತ್ತಿದ್ದರು. ತಿಳಿಯದವರು ತಿಳಿದವರನ್ನು ನಮ್ಮ ಮೇಲಿನವರೆಂದು ಅನ್ನುವುದಕ್ಕಿಂತ ನಮಗಿಂತ ಹಿರಿಯರು ಎನ್ನುವ ಮಾತನ್ನು ಹೇಳುವುದು ಒಳ್ಳೆಯದೆಂದು ತಿಳಿದು, ನಮ್ಮ ಹಿರಿಯರೆಂದು ಅರ್ಥ ಬರುವಹಾಗೆ ನಮ್ಮ ಬ್ರಾಹ್ಮಣರು ಎಂದು ಸಹ ಹೇಳುತ್ತಿದ್ದರು.  ಜ್ಞಾನ ತಿಳಿಯದವರು ಜ್ಞಾನ ತಿಳಿದವರನ್ನು ನಮ್ಮ ಹಿರಿಯರೆಂದಾಗಲೀ, ನಮ್ಮ ಬ್ರಾಹ್ಮಣರೆಂದಾಗಲೀ ಹೇಳುತ್ತಿರುವಾಗ ತಮ್ಮ

ಜ್ಞಾನವನ್ನು ತಿಳಿಯದವರನ್ನು ನಮ್ಮ ಕೆಳಗಿನವರೆಂದೇ ಹೇಳುತ್ತಿದ್ದರು. ಅರ್ಥವನ್ನು ತಿಳಿಸುವುದರಲ್ಲಿ ಅದಕ್ಕಿಂತ ಒಳ್ಳೆಯ ಪದ ಇಲ್ಲದಿರುವುದರಿಂದ ಹಾಗೆ ಹೇಳುತ್ತಿದ್ದರು. ಈ ವಿಧವಾಗಿ ಆ ದಿನ ಅಂದರೆ ಕೃತ ಯುಗ ಮೊದಲ ಕಾಲದಲ್ಲಿ ಮನುಷ್ಯರಲ್ಲಿ ದೈವ ಜ್ಞಾನವನ್ನು ತಿಳಿದವರು, ತಿಳಿಯದವರು ಎನ್ನುವ ಎರಡು ವಿಧಗಳ ವರ್ಣಗಳು ಮಾತ್ರ ಇರುತ್ತಿದ್ದವು. ಅವರನ್ನೇ ನಮ್ಮ ಬ್ರಾಹ್ಮಣರೆಂದು ತಿಳಿಯದವರು, ನಮ್ಮ ಕೆಳಗಿನವರೆಂದು ತಿಳಿದವರು ಎನ್ನುತ್ತಿದ್ದರು. ಈ ವಿಧವಾಗಿ ನಮ್ಮ ಬ್ರಾಹ್ಮಣ ಎಂದು ಒಂದು ವರ್ಗ ಅಥವಾ ಒಂದು ವರ್ಣ ಇರುವಾಗ, ಮಾದಿಗ (ನಮ್ಮ ಕೆಳಗಿನವರೆನ್ನುವ) ಒಂದು ವರ್ಗ ಅಥವಾ ಒಂದು ವರ್ಣದವರು ಇಂದೂ ದೇಶದಲ್ಲಿ ದ್ರಾವಿಡರಲ್ಲಿ ಇರುತ್ತಿದ್ದರು.

ಕೃತಯುಗದಿಂದ ಇರುವ ನಮ್ಮ ಬ್ರಾಹ್ಮಣ, ಮಾದಿಗ ಎನ್ನುವ ಎರಡು ವರ್ಣದವರನ್ನು ತ್ರೇತಾಯುಗದಲ್ಲಿ ಇಂದೂ ದೇಶದಲ್ಲಿ ಪ್ರವೇಶಿಸಿದ ಆರ್ಯರು ಗಮನಿಸಿದ್ದಾರೆ. ಹಾಗೆ ಗಮನಿಸಿದ ಆರ್ಯರು ಏಕೈಕ ಕುಟುಂಬವಾಗಿರುವ ದ್ರಾವಿಡರಿಗಿಂತ ತಾವೇ ಅಧಿಕರೆನ್ನುವ ಹಾಗೆ, ತಾವು ಜ್ಞಾನಿಗಳಿಗು ಅಜ್ಞಾನಿಗಳಿಗೂ ಎಲ್ಲರಿಗೂ ಗುರುಗಳೆನ್ನುವ ಹಾಗೆ, ಆರ್ಯರೆನ್ನುವ ನಾಮವನ್ನು ಅವರು ಇಟ್ಟುಕೊಳ್ಳುವುದು ನಡೆದಿದೆ. ಇಂದೂ ದೇಶದೊಳಕ್ಕೆ ಆರ್ಯರು ಬರುವುದಕ್ಕಿಂತ ಮೊದಲು ಏಷೀಯರನ್ನುವ ಹೆಸರಿನಿಂದಿರುವ ಏಷ್ಯಾ ಖಂಡದವರು, ಅಷ್ಟೊತ್ತಿಗೆ ಮೂರು ಅಥವಾ ನಾಲ್ಕು ವರ್ಗಗಳಾಗಿ ಇರುತ್ತಿದ್ದರು. ಆ ವರ್ಗಗಳು ಅವರಿಗಿರುವ ಜ್ಞಾನವನ್ನನುಸರಿಸಿ ಅಲ್ಲ ಆದರೆ, ಅವರಿಗಿರುವ ಕೆಲಸಗಳನ್ನನುಸರಿಸಿ ತಮ್ಮಲ್ಲಿ ವರ್ಗಗಳು ನಿರ್ಣಯಿಸಿ ಕೊಂಡಿರುತ್ತಿದ್ದರು. ಆ ವರ್ಗಗಳೇ ಆಗಾಗಲೇ ಕುಲಗಳಾಗಿ, ಜಾತಿಗಳಾಗಿ ಹೇಳಲಾಗುತ್ತಿದ್ದವು. ಇಂದೂ ದೇಶದಲ್ಲಿ ಇಲ್ಲದ ಕುಲಗಳು ಏಷ್ಯಾ ಖಂಡದಲ್ಲಿ ಆಗಲೇ ಇರುತ್ತಿದ್ದವು. ಮೂರು ನಾಲ್ಕು ಕುಲಗಳಾಗಿ ಇದ್ದು ಪ್ರಪಂಚ ಜ್ಞಾನದಲ್ಲಿ ಮೇಧಾವಿಗಳಾದ್ದರಿಂದ, ಆರ್ಯರು ದ್ರಾವಿಡರನ್ನು ಅಸೂಯೆಯಿಂದ ಅಜ್ಞಾನಿಗಳಾಗಿ ಮಾಡಬೇಕೆಂದುಕೊಂಡಿದ್ದಾರೆ. ದ್ರಾವಿಡರಲ್ಲಿ ಕುಲಗಳ ಭಾಗಗಳು ಮಾಡಿದರೆ, ಅವರು ಕುಲಗಳ ಪ್ರಕಾರ ಬೇರೆಯಾಗಿ

ತಮಗಿಂತ ಕಡಿಮೆಯವರಾಗಿ ಹೋಗುವರೆಂದು, ಜ್ಞಾನದಲ್ಲಿ ಭ್ರಷ್ಟರಾಗಿ ಹೋಗುವರೆಂದು ತಿಳಿದು, ಸಮಯವನ್ನು ನೋಡಿ ದ್ರಾವಿಡರಲ್ಲಿ ಬ್ರಾಹ್ಮಣ, ಮಾದಿಗ ಎನ್ನುವವು ಪ್ರಪಂಚ ರೀತಿಯಲ್ಲಿ ಕುಲಗಳೆಂದು ಪ್ರಚಾರಮಾಡುವುದಕ್ಕೆ ಆರಂಭಿಸಿದ್ದಾರೆ. ಕೃತಯುಗದಲ್ಲಿ 17,28,000 ವರ್ಷಗಳು ದೈವಜ್ಞಾನಿಗಳಾಗಿರುವ ದ್ರಾವಿಡರು ತ್ರೇತಾಯುಗ ಆರಂಭದಿಂದಲೇ ತಮ್ಮಲ್ಲಿನ ಜ್ಞಾನವನ್ನು ಕಳೆದುಕೊಳ್ಳುವದಕ್ಕೆ ಆರಂಭಿಸಿದರು. ಅದೇ ಸಮಯವೆಂದು ಭಾವಿಸಿದ ಆರ್ಯರು ಬ್ರಾಹ್ಮಣ, ಮಾದಿಗ ಎನ್ನುವ ವರ್ಗಗಳನ್ನು ಎರಡು ಕುಲಗಳಾಗಿ ವರ್ಣಿಸಿ ಹೇಳುವುದು ನಡೆದಿದೆ. ಅಷ್ಟೇ ಅಲ್ಲದೆ ಬ್ರಾಹ್ಮಣರದು ದೊಡ್ಡ ಕುಲವೆಂದು ಹೇಳುತ್ತಾ, ಕೆಲಸವನ್ನನುಸರಿಸಿ ಉಳಿದವರೆಲ್ಲರನ್ನೂ ಕುಲಗಳಾಗಿ ವಿಭಜಿಸಿ ಬ್ರಾಹಣರು, ವೈಶ್ಯರು, ಕ್ಷತ್ರಿಯರು, ಶೂದ್ರರೆಂದು ನಾಲ್ಕು ವರ್ಗಾಗಳಾಗಿ ಹೇಳುವುದೇ ಅಲ್ಲದೇ, ಕೆಲಸಗಳು ಮಾಡುವ ವರ್ಗಗಳೆಲ್ಲವು ಶೂದ್ರ ಕುಲದವರೆಂದು ಹೇಳುವುದು ನಡೆದಿದೆ. ಶೂದ್ರರು ಎಂದರೆ ನೀಚವಾದವರೆಂದು, ಬ್ರಹ್ಮಣರೆಂದರೆ ಪವಿತ್ರರೆಂದು, ಉಳಿದ ವೈಶ್ಯ, ಕ್ಷತ್ರಿಯ ಕುಲದವರು ಹೊರತುಪಡಿಸಿ ಉಳಿದ ಎಲ್ಲ ಕೆಲಸಗಳು ಮಾಡುವವರೆಲ್ಲರೂ ಅವರ ಕೆಲಸಗಳನ್ನನುಸರಿಸಿ ಕುಲಗಳಾಗಿ ಬೇರ್ಪಡಿಸಲ್ಪಟ್ಟಿದ್ದಾರೆಂದು ಹೇಳಿದ್ದಾರೆ. ಸೋರೆಗಳು ಮಾಡುವವನು ಕುಂಬಾರ ಎಂದೂ, ಕಬ್ಬಿಣ ಸಾಮಾನು ಕೆಲಸಮಾಡುವವರನ್ನು ಕಮ್ಮಾರರೆಂದು, ಬಟ್ಟೆಗಳನ್ನು ಹೊಗೆಯುವವನನ್ನು ಅಗಸನೆಂದು ಅನೇಕವಿಧಗಳ ವೃತ್ತಿ ಕೆಲಸಗಳನ್ನು ಮಾಡುವವರನ್ನು ವೃತ್ತಿಯನ್ನನುಸರಿಸಿ, ಕೆಲಸಗಳನ್ನನುಸರಿಸಿ ಕುಲಗಳಾಗಿ ವಿಭಜಿಸುವುದು ನಡೆದಿದೆ. ಇದೆಲ್ಲವೂ ಆರ್ಯರು ದ್ರಾವಿಡರ ಮೇಲೆ ಅಸೂಯೆಯಿಂದ ಮಾಡಿದ ಕುತಂತ್ರವೇ ಆದರೂ, ದ್ರಾವಿಡರು ಪ್ರಪಂಚ ಜ್ಞಾನದಲ್ಲಿ ಬುದ್ಧಿವಂತರು ಅಲ್ಲದಿರುವುದರಿಂದ, ಆರ್ಯರಿಗೆ ತಮ್ಮ ಮೇಲಿರುವ ಕೆಟ್ಟ ಭಾವವನ್ನು ಗ್ರಹಿಸಲಾರದೆ ಹೋಗಿದ್ದಾರೆ. ಈ ವಿಧವಾಗಿ ಆರ್ಯರು ದ್ರಾವಿಡರಲ್ಲಿ ಕುಲ ಬೀಜಗಳು ನಾಟಿರುವುದರಿಂದ ಅವು ಇಂದಿಗೂ ಮಹಾ ವೃಕ್ಷಗಳಾಗಿ ಕುಳಿತುಕೊಂಡಿವೆ.

ನಮ್ಮ ದೇಶಚರಿತ್ರೆಯಲ್ಲಿ ತ್ರೇತಾಯುಗದಲ್ಲೇ ಕುಲವ್ಯವಸ್ಥೆ ಆರ್ಯರ ಪ್ರೋತ್ಸಾಹದಿಂದ ಇಷ್ಟಬಂದಹಾಗೆ ಬೆಳೆದುಹೋಗಿದೆ. ಏಷ್ಯಾ ಖಂಡದಲ್ಲಿ ಮೊದಲೇ ಕುಲಗಳ ಹೆಚ್ಚುಕಡಿಮೆಗಳಿರುವುದರಿಂದ, ಅನುಭವದಿಂದ ಇಂದೂದೇಶದಲ್ಲಿಯೂ ಕುಲಗಳನ್ನು ಪ್ರಚಾರ ಮಾಡಿ ಮನುಷ್ಯರನ್ನು ಬೇರ್ಪಡಿಸಿ, ಒಂದೇ ಕುಟುಂಬದಂತೆ ಇರುವ ಇಂದೂಗಳನ್ನು (ದ್ರಾವಿಡರನ್ನು) ಭಿನ್ನಾಭಿನ್ನ ವಾಗಿ ಮಾಡಿದ್ದಾರೆ. ಕುಲಗಳು ತಯಾರಾಗದ ಮುನ್ನ, ಆರ್ಯರು ಇಂದೂದೇಶ ದಲ್ಲಿ ಪ್ರವೇಶಿಸುವುದಕ್ಕಿಂತ ಮೊದಲು ಅರ್ಥದಿಂದ ಕೂಡಿಕೊಂಡ ನಮ್ಮ ಬ್ರಾಹ್ಮಣ, ಮಾದಿಗ (ನಮ್ಮ ಕೆಳಗಿನವ) ಎನ್ನುವ ಎರಡು ಹೆಸರುಗಳಿಂದಿರುವ ದ್ರಾವಿಡರಲ್ಲಿ ಕುಲವ್ಯವಸ್ಥೆ ಎಲ್ಲರನ್ನೂ ಸೀಳಿಸಿ ಹಾಕಿದಾಗ, ನಮ್ಮ ಬ್ರಾಹ್ಮಣ ಎನ್ನುವವರು ಶೇ. ಎರಡರಷ್ಟು, ಮಾದಿಗ (ನಮ್ಮ ಕೆಳಗಿನವರು) ಎನ್ನುವವರು ಶೇ.ಎರಡರಷ್ಟು ಶಾತ ಗುರುತಿಗಾಗಿ ಉಳಿದುಹೋಗಿದ್ದಾರೆ. ಉಳಿದ ತೊಂಬತ್ತಾರ(ಶೇಕಡ96)ರಷ್ಟು ಶೂದ್ರರಾಗಿ ಉಳಿದುಹೋಗಿದ್ದಾರೆ. ಬ್ರಾಹ್ಮಣರು, ವೈಶ್ಯರು, ಕ್ಷತ್ರಿಯರು, ಶೂದ್ರರು ಎಂದು ನಾಲ್ಕು ವರ್ಗಗಳಾಗಿ ಸೀಳಿಸಿದರೂ, ಕೆಲವು ಕಡೆ ಬ್ರಾಹ್ಮಣರು ವಿನಃ ಉಳಿದವರೆಲ್ಲರೂ ಶೂದ್ರರೇ ಎನ್ನುವ ಭಾವವಿದೆ. ಕೃತಯುಗದಲ್ಲಿ ಜ್ಞಾನಿಗಳು, ಅಜ್ಞಾನಿಗಳು ಇಲ್ಲವೆ ಬ್ರಾಹ್ಮಣರು, ನಮ್ಮ ಮಾದಿಗರು ಅನ್ನುವ ಎರಡು ಹೆಸರುಗಳಿಂದಿದ್ದರೂ, ದ್ರಾವಿಡಜಾತಿಯೆನ್ನುವ ಒಂದೇ ಗುಂಪಾಗಿ ಇಂದೂಗಳಿರುತ್ತಿದ್ದರು. ಆ ದಿನ ಇಂದೂಗಳು ಅನ್ನುವುದಕ್ಕಾಗಲಿ, ದ್ರಾವಿಡರು ಎನ್ನುವುದಕ್ಕಾಗಲಿ ವಿಶೇಷವಾದ ಅರ್ಥವಿರುತ್ತಿತ್ತು. ತ್ರೇತಾಯುಗ ಪ್ರಾರಂಭದಲ್ಲೇ ಬಂದು ಸೇರಿದ ಆರ್ಯರು ದ್ರಾವಿಡರ ಮೇಲೆ ಅಸೂಯೆಯಿಂದ ನಾವು ಬೇರೆ, ಅವರು ಬೇರೆ ಅನ್ನುವ ಭಾವದಿಂದ ಉದ್ದೇಶಪೂರ್ವಕವಾಗಿ ದ್ರಾವಿಡರನ್ನು ಕುಲಗಳವರಂತೆ ಬೇರೆಮಾಡಿ ಕೊನೆಗೆ ನಾವು ದ್ರಾವಿಡರು ಅನ್ನುವ ಮಾತನ್ನು ಮರೆತುಹೋಗುವಹಾಗೆ ಮಾಡಿದ್ದಾರೆ. ಕಲಿಯುಗದಲ್ಲಿ ಇಂದಿಗೂ ದ್ರಾವಿಡರೆನ್ನುವ ಹೆಸರನ್ನು ನಾವು ಹೇಳಿದರೂ ಸಹ ಜ್ಞಾಪಕ ಬಾರದ ಸ್ಥಿತಿಯಲ್ಲಿ ದ್ರಾವಿಡರು ಉಳಿದುಹೋಗಿದ್ದಾರೆ.

ದ್ರಾವಿಡರನ್ನು ವಿಚ್ಛೇದನೆ ಮಾಡಬೇಕೆನ್ನುವ ಉದ್ದೇಶದಿಂದಿರುವ ಆರ್ಯರು ಪ್ರಣಾಳಿಕೆ ರೂಪಿಸಿಕೊಂಡು ಕುಲಗಳಾಗಿ ಇಂದೂಗಳನ್ನು ಸೀಳಿಸಿ ಹಾಕುವುದೇ ಅಲ್ಲದೆ, ಅವರಲ್ಲಿ ಶೂದ್ರರು ನೀಚವಾದವರೆಂದೂ, ಬ್ರಾಹ್ಮಣರು ಪವಿತ್ರರೆಂದು, ಪವಿತ್ರರಾದವರು ನೀಚವಾದವರನ್ನು ಮುಟ್ಟಿಕೊಳ್ಳಬಾರದೆಂದು, ಶೂದ್ರರ ಗಾಳಿ ತಾಕಿದರೂ ಸಹ ಬ್ರಾಹ್ಮಣರಲ್ಲಿ ಸ್ವಲ್ಪ ಪವಿತ್ರತೆ ಹೋಗುವುದೆಂದೂ, ಶಾಸ್ತ್ರೀಯತೆ ಇಲ್ಲದ ಮೂಢನಂಬಿಕೆಗಳನ್ನು ಏರ್ಪಡಿಸಿ ಹೆಚ್ಚಿನ ಶಾತ ಪ್ರಜೆಗಳನ್ನು ಬ್ರಾಹ್ಮಣರಿಂದ ಬೇರೆಮಾಡಿ, ಒಬ್ಬರ ಮಧ್ಯೆ ಒಬ್ಬರಿಗೆ ಭೇದಭಾವಗಳನ್ನು ಏರ್ಪಡಿಸಿದ್ದಾರೆ. ಅಲ್ಲಿಗೆ ನಿಲ್ಲದೆ ಮೊದಲಿನಿಂದ ಮಾದಿಗರಂತೆ (ನಮ್ಮ ಕೆಳಗಿನವರಾಗಿ) ಇರುವ ಶೇ.ಎರಡರಷ್ಟು ಮನುಷ್ಯರನ್ನು ಶೂದ್ರರಲ್ಲಿಯೂ ಸೇರಿಸದೆ, ಅವರನ್ನು ಪ್ರತ್ಯೇಕವಾಗಿ ಪಂಚಮರೆಂದು ಹೆಸರಿಟ್ಟು ಹೇಳಲಾಗಿದೆ. ಪಂಚಮನೆಂದರೆ ಐದನೆಯವನು ಎಂದು ಅರ್ಥ. ಬ್ರಾಹ್ಮಣ ಮಾದಿಗ ಮೊದಲಿನಿಂದ ಇರುವಾಗ ಅವರ ಹೆಸರುಗಳನ್ನು ಹಾಗೇ ಇಟ್ಟು ಮಧ್ಯದಲ್ಲಿ ಶೇ. 96 ರಷ್ಟಿರುವ ಪ್ರಜೆಗಳನ್ನು ಶೂದ್ರರಾಗಿ ಮಾಡಿ ಉಳಿದ ಶೇ.ಎರಡರಷ್ಟು ಮಾದಿಗರನ್ನು ಪಂಚಮರೆಂದು ಐದನೆಯವರನ್ನಾಗಿ ಮಾಡಿದ್ದಾರೆ. ಐದನೇ ವರ್ಣಕ್ಕೆ ಸೇರಿದ ಮಾದಿಗರು (ನಮ್ಮ ಕೆಳಗಿನವರು) ಶೂದ್ರರಿಗಿಂತ ಹೀನವಾದ, ನೀಚವಾದವರೆಂದು ಪ್ರಚಾರ ಮಾಡಿದ್ದಾರೆ. ಬ್ರಾಹ್ಮಣರಿಗೆ ಶೂದ್ರರು ಹೇಗೆ ಅಂಟಬಾರದವರೋ, ಹಾಗೆ ಶೂದ್ರರಿಗು ಪಂಚಮರಾದ ಮಾದಿಗರು ಅಂಟಬಾರದವರೆಂದು, ಮಾದಿಗರನ್ನು ಶೂದ್ರರು ಅಂಟಿಮುಟ್ಟಿಕೊಳ್ಳುವುದರಿಂದ ಶೂದ್ರರ ಘನತೆ, ಗೌರವ ಕಡಿಮೆಯಾಗುತ್ತದೆಂದು ಪ್ರಚಾರ ಮಾಡಿದ್ದಾರೆ. ಆ ಪ್ರಚಾರದಿಂದ ಶೂದ್ರರಾಗಿ (ನೀಚರಾಗಿ) ಕರೆಯಲ್ಪಡುವವರು ಸಹ ಮಾದಿಗರನ್ನು ತಮಗಿಂತ ನೀಚರೆನ್ನುವಹಾಗೆ ನೋಡುತ್ತಾ, ಅವರನ್ನು ಮುಟ್ಟಿಕೊಳ್ಳುವುದರಿಂದ ತಮ್ಮ ಧನ, ಬಲ ಕಡಿಮೆಯಾಗುತ್ತದೆಂದು ಅಂದುಕೊಂಡಿದ್ದಾರೆ. ಈ ವಿಧವಾಗಿ ಆರ್ಯರು ಹುಳಗಳಾಗಿ, ದ್ರಾವಿಡ ವೃಕ್ಷವನ್ನು ರಂಧ್ರಗಳು ಮಾಡುತ್ತಿದ್ದಾರೆಂದು ಇಂದೂಗಳಾದವರು ಗ್ರಹಿಸಲಾರದೆ ಹೋಗಿದ್ದಾರೆ. ಅವರು ಹೇಳಿರುವುದೇ

ಸನಾತನ ಧರ್ಮವೆಂದು ನಂಬಿದ್ದಾರೆ. ಅಂದಿನಿಂದ ಶೂದ್ರರು ಸಹ ಮಾದಿಗರನ್ನು ಅಂಟದಂತೆ ದೂರವಾಗಿ ಇಟ್ಟಿದ್ದಾರೆ. ಕುಲ ವಿಪಕ್ಷ ಬ್ರಾಹ್ಮಣರು ಶೂದ್ರರಮೇಲೆ ತೋರಿಸಿದಾಗ, ಶೂದ್ರರು ಕೆಳಗಿನವರಾಗಿರುವ ಮಾದಿಗರ ಮೇಲೆ ತೋರಿಸುವುದು ನಡೆಯುತ್ತಾ ಬಂದಿದೆ.

ಕುಲ ಎನ್ನುವ ವಿಷ ಬೀಜ ತ್ರೇತಾಯುಗದಲ್ಲೇ ಆರಂಭವಾಗಿದೆ, ದ್ವಾಪರ ಯುಗವೆಲ್ಲವೂ ಮುಂದುವರೆದಿದೆ. ಪ್ರಸ್ತುತ ಕಲಿಯುಗದಲ್ಲಿ ಇಲ್ಲಿಯವರೆಗೂ ಮುಂದುವರೆದಿದೆ. ಇನ್ನೂ ಅಲ್ಲಲ್ಲಿ ಮುಂದುವರಿಯುತ್ತಿದೆ. ಕೆಲವು ಹಳ್ಳಿಗಳಲ್ಲಿ ಮಾದಿಗರಿಂದ ಕೆಲಸ ಮಾಡಿಸಿಕೊಂಡು ಅವರಿಗೆ ಅನ್ನ ನೀಡಿದರೂ, ನೀರು ಒಯ್ದರೂ ಅವರ ಪಾತ್ರೆಗಳನ್ನು ಪಕ್ಕಕ್ಕಿಟ್ಟು ಅವುಗಳಲ್ಲೇ ಇಡುವುದು ನಾನು ಸ್ವತಹವಾಗಿ ಎಷ್ಟೋ ಕಡೆ ನೋಡಿದ್ದೇನೆ. ನಾನು ಚಿಕ್ಕವನಾಗಿರುವಾಗ, ಬಿಸಿಲಿನಲ್ಲಿ ಕೆಲಸ ಮಾಡುವ ಮಾದಿಗರು ಮನೆ ಮುಂದಕ್ಕೆ ಬಂದು ಬಾಯಾರಿಕೆಯಿಂದಿದ್ದೇವೆ ನೀರು ಕುಡಿಯಬೇಕೆಂದು ಕೇಳಿದರೆ, ನಮ್ಮ ಮನೆಯಲ್ಲಿನ ಹಿರಿಯರು ಒಂದು ದೊಡ್ಡ ಚೆಂಬಿನಲ್ಲಿ ನೀರು ತೆಗೆದುಕೊಂಡು ಹೋಗಿ, ಅವರ ಕೈಗೆ ಚೆಂಬನ್ನು ಕೊಡದೆ, ಅವರು ಕೈಗಳು ಬಾಯಿಹತ್ತಿರ ಇಟ್ಟುಕೊಂಡು ಬಗ್ಗಿ ನಿಂತರೆ, ಕೈಯೊಳಗೆ ನೀರು ಹಾಕಿದರೆ ಅವರು ಕುಡಿಯುತ್ತಿದ್ದರು. ಹಾಗೆ ಕುಡಿಯುವುದರಲ್ಲಿ ಸ್ವಲ್ಪ ನೀರು ಬೆರಳು ಸಂದಿಗಳಲ್ಲಿ ಕೆಳಗೆ ಸೋರಿಹೋಗುತ್ತಿದ್ದವು. ನಮಗೆ ಆ ಕಾರ್ಯ ವಿಚಿತ್ರವಾಗಿ ಕಾಣಿಸುತ್ತಿತ್ತು. ಏಕೆ ಹಾಗೆ ಹಾಕಬೇಕು? ಚೆಂಬನ್ನು ಕೊಟ್ಟರೆ ನೀರು ಕೆಳಗೆ ಬೀಳದಂತೆ ಕುಡಿಯುತ್ತಿದ್ದರಲ್ಲ ಎಂದು ನಮ್ಮ ಹಿರಿಯರನ್ನು ಕೇಳಿದರೆ ಅವರು ಮಾದಿಗರು, ಅವರು ನಮ್ಮ ಚೆಂಬನ್ನು ಮುಟ್ಟಿಕೊಳ್ಳಬಾರದು ಎಂದು ಹೇಳುತ್ತಿದ್ದರು. ಆಗ ಅವರು ಹಾಗೆ ಏಕೆ ಹೇಳುತ್ತಿದ್ದಾರೋ ಅರ್ಥವಾಗುತ್ತಿರಲಿಲ್ಲ. ಒಂದು ದಿನ ನಮ್ಮ ತಾಯಿ, ತಂದೆಯರೊಂದಿಗೆ ಒಂದು ಊರಲ್ಲಿ ಬ್ರಾಹ್ಮಣರ ಮನೆಗೆ ಹೋಗಿದ್ದೇವೆ. ಆಗ ಬಾಗಿಲು ದಾಟಿ ಒಳಗೆ ಹೋಗುತ್ತಲೆ ಬಾಗಿಲು ಪಕ್ಕದಲ್ಲೇ ನಾವು ಕೆಳಗೆ ಕುಳಿತುಕೊಂಡಿದ್ದೇವೆ. ಪಕ್ಕದಲ್ಲೇ ಒಂದು ಗೂಡು, ಅದರಲ್ಲಿ

ಚೆಂಬು ಗ್ಲಾಸು, ಕೆಲವು ವಿಸ್ತರಿ ಎಲೆಗಳು ಇವೆ. ಅದು ಹಳ್ಳಿ ಆದ್ದರಿಂದ ಭೋಜನ ಸಮಯಕ್ಕೆ ಹೋಟಲ್ ಸಹ ಇಲ್ಲದಿರುವುದರಿಂದ ಅವರ ಮನೆಯಲ್ಲೇ ಊಟ ಮಾಡಬೇಕಾಗಿ ಬಂದಿದೆ. ಆಗ ಅವರು ಪಕ್ಕದ ಗೂಡಿನಲ್ಲಿರುವ ಚೆಂಬಲ್ಲಿ ನೀರು ಹಾಕಿ, ಗೂಡಿನಲ್ಲಿ ವಿಸ್ತರಿಎಲೆ ತೆಗೆದುಕೊಳ್ಳಿ ಎಂದು ಹೇಳಿ ಅದರಲ್ಲಿ ಅನ್ನ ಇಡುವುದು ನಡೆದಿದೆ. ಅವರ ಪಾತ್ರೆಗಳಲ್ಲಿ ಅನ್ನ ತಂದು ಮನೆಯ ಮುಂದೆ ನಾಯಿಗೆ ಇಟ್ಟಹಾಗೆ ಇಡುವುದು, ನೀರು ತಂದು ಒಯ್ದುಹೋಗುವುದು ಗಮನಿಸಿದರೆ ನಮ್ಮ ಮನೆಮುಂದೆ ನೀರು ಕೇಳಿದ ಮಾದಿಗರಿಗೆ ನೀರು ಹಾಕಿದಹಾಗೆ, ಇವರು ನಮಗೆ ಅನ್ನ ಇಡುವುದು, ನೀರು ಒಯ್ಯುವುದು ನಡೆದಿದೆಯೆಂದು ಅರ್ಥವಾಯಿತು. ನಮ್ಮ ಮನೆಹತ್ತಿರ ನೀರು ಕುಡಿದವರು ನಮಗೆ ಅಂಟಬಾರದವರಾದರೆ, ಇವರ ಮನೆಹತ್ತಿರ ಅನ್ನ ತಿನ್ನುತ್ತಿರುವ ನಾವು ಇವರಿಗೆ ಅಂಟಬಾರದವರಾಗಿ ಇದ್ದೇವೆಂದೆನಿಸಿತು, ಅನಿಸುವುದೇ ಅಲ್ಲ ಪ್ರತ್ಯಕ್ಷವಾಗಿ ಕಾಣಿಸಿತು. ನನ್ನ ವಯಸ್ಸು ಒಂಬತ್ತು ಅಥವಾ ಹತ್ತು ವರ್ಷಗಳಿರುವಾಗ ನಡೆದ ಆ ಎರಡು ಸಂಘಟನೆಗಳು ನನಗೆ ಚೆನ್ನಾಗಿ ಜ್ಞಾಪಕ ಇವೆ.

ಪ್ರಸ್ತುತ ಕಾಲದಲ್ಲಿ ಪಟ್ಟಣ ಪ್ರಾಂತಗಳಲ್ಲಿ ಕುಲ ವಿಪಕ್ಷಗಳು, ಅಂಟಬಾರದತನ ಅಷ್ಟಾಗಿ ಕಾಣಿಸುತ್ತಿಲ್ಲ. ಪಟ್ಟಣಗಳಲ್ಲಿ ಎಲ್ಲರೂ ಎಲ್ಲ ಕೆಲಸಗಳಲ್ಲಿ ಲಗ್ನವಾಗಿ, ಒಬ್ಬರಿಗೊಬ್ಬರು ಸಂಬಂಧವಿಲ್ಲದಂತೆ ಕೆಲಸಗಳು ಮಾಡಿಕೊಳ್ಳಬೇಕಾಗಿ ಇರುತ್ತದೆ. ಯಾವ ಕುಲದವನು ಯಾವ ಕೆಲಸವನ್ನು ಮಾಡುತ್ತಿದ್ದಾನೋ ಯಾರಿಗೂ ಅರ್ಥವಾಗುವುದಿಲ್ಲ. ಆದ್ದರಿಂದ ಒಬ್ಬರನ್ನೊಬ್ಬರು ಅರ್ಥೈಸಿಕೊಳ್ಳುವುದಕ್ಕೆ ಅವಕಾಶವಿಲ್ಲದ ಪರಿಸ್ಥಿತಿಯಲ್ಲಿ ಇರುವುದರಿಂದ ಪಟ್ಟಣಗಳಲ್ಲಿ ಕುಲ ವಿಪಕ್ಷಗಳು, ಅಂಟಬಾರದ ತನ ಕಾಣಿಸುತ್ತಿಲ್ಲ. ಆದರೆ ಚಿಕ್ಕ ಗ್ರಾಮಗಳಲ್ಲಿ ಶೂದ್ರರು ಮಾದಿಗರನ್ನು ಅಂಟಬಾರದವರಾಗಿ ನೋಡುವುದು ಇಂದಿಗೂ ಕಾಣಿಸುತ್ತಲೇ ಇದೆ. ಅಷ್ಟೇ ಅಲ್ಲದೆ ಬ್ರಾಹ್ಮಣರು ಶೂದ್ರರನ್ನು ಅಂಟಬಾರದವರಾಗಿ ನೋಡುವುದು ದೇವಾಲಯಗಳ ಹತ್ತಿರ ಚೆನ್ನಾಗಿ ಕಾಣಿಸುತ್ತಿದೆ. ಎಂದೊ

ತ್ರೇತಾಯುಗದಲ್ಲಿ ಆರ್ಯರು ಇಂದೂದೇಶದಲ್ಲಿ ಅಂಟಿಸಿದ ಜಾಢ್ಯ ಇಂದಿಗೂ ಸಾಕ್ಷಿಯಾಗಿ ಕಾಣಿಸುತ್ತಲೇ ಇದೆ. ನನಗೆ ಚಿಕ್ಕ ವಯಸ್ಸಿನಲ್ಲಿಯೇ ಗಾಢವಾಗಿ ಅಂಟಿಕೊಂಡ ಕುಲ ವಿಪಕ್ಷ ಸಂಘಟನೆಗಳು ನಾನು ಎಂದಿಗೂ ಮರೆತುಹೋಗ ದಂತಹವು. ಆದರೇ ನಾನು ಇತ್ತ ಬ್ರಹ್ಮಣನಾಗಿ ಆಗಲಿ, ಅತ್ತ ಮಾದಿಗನಾಗಿ ಆಗಲಿ ಹುಟ್ಟದಂತೆ ಕಮ್ಮಕುಲದಲ್ಲಿ ಹುಟ್ಟಿ ಶೂದ್ರನಾಗಿ ಲೆಕ್ಕಿಸಲ್ಪಡುತ್ತಿದ್ದೇನೆ. ಬ್ರಾಹ್ಮಣರ ದೃಷ್ಠಿಯಲ್ಲಿ ಶೂದ್ರರು ಅಂಟಬಾರದವರಾಗಿ ಇರುವಾಗ, ನಾನು ಸಹ ಅವರಿಗೆ ಅಂಟಬಾರದವನೇ ಅಲ್ಲವೆ!

ಎಷ್ಟೋ ಜ್ಞಾನಿಯಾದರೂ, ಯೋಗಿಯಾದರೂ ನನ್ನನ್ನು ಅವರು ಅಂಟಬಾರದ ಶೂದ್ರನಾಗಿ (ನೀಚನಾಗಿ) ಲೆಕ್ಕಿಸುವುದು ಅವರು ಮಾಡುತ್ತಿರುವ ದೊಡ್ಡ ತಪ್ಪೆಂದು ಅರ್ಥವಾಗಿದೆ. ಅವರು ಎಷ್ಟೋ ದೊಡ್ಡ ತಪ್ಪು ಮಾಡುತ್ತಿದ್ದಾರೆಂದು, ಸಮಾಜಕ್ಕೆ ಬಹಳ ಅನ್ಯಾಯ ಮಾಡುತ್ತಿದ್ದಾರೆಂದು ಅವರನ್ನು ನಾನು ಅನ್ನುವುದಾದರೆ, ಅದೇ ಲೆಕ್ಕ ಪ್ರಕಾರ ಮಾದಿಗರನ್ನು ನೀಚವಾಗಿ ನೋಡುವ ಶೂದ್ರರು ಸಹ ಮಾದಿಗರ ಬಗ್ಗೆ ಬಹಳ ಅನ್ಯಾಯ ಮಾಡಿದಂತಲ್ಲವೆ ಎಂದು ತಿಳಿಯುತ್ತಿದೆ. ನಾವು ಬ್ರಾಹ್ಮಣರನ್ನುವ ಕುಲ ವಿಪಕ್ಷದಿಂದ ಅಂಟಬಾರ ದವರನ್ನಾಗಿ ನೋಡುತ್ತಿದ್ದಾರೆಂದು ಅವರು ಮಾಡುತ್ತಿರುವುದು ತಪ್ಪು ಅಂದಾಗ, ಅದೇ ಮಾತನ್ನೆ ಶೂದ್ರರ ಕುರಿತು ಮಾದಿಗರು ಅನ್ನಬಹುದಲ್ಲವೆ! ಶೂದ್ರರು ಬ್ರಾಹ್ಮಣರನ್ನು ಅನ್ನುವುದರಲ್ಲಿ ಎಷ್ಟು ನ್ಯಾಯವಿದೆಯೋ, ಮಾದಿಗರು ಶೂದ್ರರನ್ನು ಎನ್ನುವುದರಲ್ಲಿ ಅಷ್ಟೇ ನ್ಯಾಯವಿದೆ. ಇದೆಲ್ಲವೂ ಆಲೋಚಿಸಿದ ನಾವು ಬ್ರಾಹ್ಮಣರಿಗು, ಶೂದ್ರರಿಗೂ ಮಧ್ಯದಲ್ಲಿರುವ ಅಂಟಬಾರದ ತನವನ್ನು ಇಲ್ಲದೆ ಮಾಡುವುದಕ್ಕೆ ಪ್ರಯತ್ನಿಸಬೇಕೆಂದುಕೊಂಡಿದ್ದೇವೆ. ಅದೇ ವಿಧವಾಗಿ ಶೂದ್ರರಿಗೂ ಮಾದಿಗರಿಗೂ ಮಧ್ಯದಲ್ಲಿರುವ ಅಂಟಬಾರದ ತನವನ್ನು ಸಹ ಇಲ್ಲದಂತೆ ಮಾಡುವುದಕ್ಕೆ ಪ್ರಯತ್ನಿಸಬೇಕೆಂದುಕೊಂಡಿದ್ದೇನೆ. ಹಾಗೆ ಮಾಡುವುದು ಇಂದಿನ ಸಮಾಜದಲ್ಲಿ ಹರಿಯುವ ಹಳ್ಳಕ್ಕೆ ಎದುರೀಜುವಂತಿದೆ ಎನ್ನುವ ಮಾತು ವಾಸ್ತವವೇ ಆದರೂ, ಆ ಪ್ರಯತ್ನವನ್ನು ಬಿಡಬಾರದೆಂದು, ಅಂದುಕೊಂಡ ಕೆಲಸವನ್ನು ತಪ್ಪದೆ ಸಾಧಿಸಬೇಕೆಂದುಕೊಂಡಿದ್ದೇನೆ.

ಕುಲ ವಿಪಕ್ಷ ಇಲ್ಲದೆ ಮಾಡಬೇಕೆಂದರೆ ಮೊದಲು ಪ್ರತಿ ಮನುಷ್ಯನಿಗೂ ದೇವರು ಹೇಳಿದ ಜ್ಞಾನ ತಿಳಿಯಬೇಕು. ದೇವರು ಹೇಳಿದ ಜ್ಞಾನವನ್ನು ತಿಳಿದುಕೊಂಡರೆ ದೇವರು ಎಲ್ಲರನ್ನೂ ಸಮಾನವಾಗಿ ಹುಟ್ಟಿಸಿದ್ದಾನೆಂದೂ, ಎಲ್ಲರಿಗೂ ಒಂದೇ ವಿಧವಾದ ಅವಯವಗಳಿಂದ ಕೂಡಿಕೊಂಡ ಶರೀರವನ್ನೇ ಕೊಟ್ಟಿದ್ದಾನೆಂದು, ದೇವರು ಯಾರನ್ನೂ ಹೆಚ್ಚು ಕಡಿಮೆಗಳಾಗಿ ಆಗಲಿ, ಕೆಲವರನ್ನು ಪವಿತ್ರರನ್ನಾಗಿ, ಕೆಲವರನ್ನು ನೀಚರನ್ನಾಗಿ ಆಗಲಿ ಹುಟ್ಟಿಸಲಿಲ್ಲವೆಂದು ತಿಳಿಯುತ್ತಿದೆ. ಹಾಗಿರುವಾಗ ದೇವರ ಸೃಷ್ಠಿಯನ್ನು ಅಲ್ಲಗಳೆದು ಮನುಷ್ಯ ಕುಲಗಳು, ಮತಗಳನ್ನು ಏರ್ಪಡಿಸಿಕೊಳ್ಳುವುದು ನಡೆದಿದೆಯೆಂದು ತಿಳಿದುಹೋಗುತ್ತಿದೆ. ಮನುಷ್ಯನು ಮಾಡಿದ ತಪ್ಪನ್ನು ಮನುಷ್ಯನೇ ಸರಿಮಾಡಿಕೊಳ್ಳಬೇಕೆನ್ನುವ ಉದ್ದೇಶದೊಳಗೆ ಪ್ರತಿ ಮನುಷ್ಯ ಬಂದು ಪ್ರಯತ್ನ ಮಾಡಿದರೆ ತಪ್ಪದೇ ಕುಲ ಎನ್ನುವ ರೋಗ, ಅಂಟಬಾರದತನ ಅನ್ನುವ ಜಾಡ್ಯವು ಸಮಾಜದಲ್ಲಿ ಇಲ್ಲದಂತೆ ಹೋಗಬಲ್ಲದು. ಆದ್ದರಿಂದ ಆ ಕೆಲಸವನ್ನು ಮೊದಲು ನಾನೇ ಪ್ರಾರಂಭಮಾಡಬೇಕೆಂದುಕೊಂಡಿದ್ದೇನೆ. ಅದರಲ್ಲಿನ ಭಾಗವಾಗಿ ಮೊದಲು ಮಾಡಬೇಕಾದ ಕೆಲಸವನ್ನು ಶೂದ್ರರಲ್ಲೇ ಅನೇಕ ಕುಲಗಳಿದ್ದು, ಎಲ್ಲರೂ ಶೂದ್ರರೇ ಆದರೂ, ಯಾವ ಕುಲಕ್ಕೆ ಆ ಕುಲ ಪ್ರತ್ಯೇಕವೆನ್ನುವಹಾಗೆ ಪ್ರವರ್ತಿಸುತ್ತಿರುವುದನ್ನು ಗುರುತಿಗಾಗಿ ತೆಗೆದುಕೊಂಡು, ಮೊದಲು ಶೂದ್ರರಲ್ಲಿನ ಕುಲಗಳನ್ನು ಸಮಾನ ಮಾಡಬೇಕೆಂದುಕೊಂಡಿದ್ದೇವೆ. ಅದಕ್ಕೆ ಆರಂಭ ಮಾಡಬೇಕಾಗಿರುವ ಕೆಲಸ ಕುಲಾಂತರ ವಿವಾಹಗಳು. ಯಾವಾಗ ಕುಲಾಂತರ ವಿವಾಹಗಳು ನಡೆಯುತ್ತವೊ ಆಗ ನಿನ್ನ ಕುಲ, ನನ್ನ ಕುಲ ಎನ್ನುವ ಮಾತು ಇಲ್ಲದಂತೆ ಕುಲಗಳು ಬೆರೆತುಹೋದರೆ ನಂತರ ಅದಷ್ಟಕ್ಕದೆ ಮನುಷ್ಯರೆಲ್ಲರೂ ಬೆರೆತುಹೋಗುವುದು ನಡೆಯುತ್ತದೆ. ಹಾಗಿರುವಾಗ ದೇವರು ನನಗೆ ಎಲ್ಲರೂ ಸಮಾನವೇ, ನಾನು ಎಲ್ಲರನ್ನೂ ಸಮಾನವಾಗಿ ಸೃಷ್ಠಿಸಿದ್ದೇನೆನ್ನುವ ಮಾತು ಅರ್ಥವಾಗುತ್ತದೆ. ಆದ್ದರಿಂದ ದೇವರು ಹೇಳಿದ ಜ್ಞಾನ ಜಾರಿಯಾಗುವುದಕ್ಕೆ ಕುಲ x ಕುಲ ಎನ್ನುವ ಮಾತು ಇಲ್ಲದಂತೆ, ಕುಲ + ಕುಲ ಎನ್ನುವ ಮಾತು ಬರಬೇಕೆನ್ನುವ

ಸೂತ್ರವನ್ನು ಜಾರಿಮಾಡಬೇಕೆಂದುಕೊಂಡಿದ್ದೇನೆ. ಆದ್ದರಿಂದ ಆ ಕೆಲಸದಲ್ಲಿ ಭಾಗವಾಗಿ ನಾನು ಮೊದಲು ಕುಲಾಂತರ ವಿವಾಹವನ್ನು ಮಾಡಿಕೊಂಡಿದ್ದೇನೆ. ನಂತರ ನನ್ನ ಕುಮಾರನಿಗೂ ಸಹ ಕುಲಾಂತರ ವಿವಾಹವನ್ನು ಮಾಡಿದ್ದೇನೆ.

ನನ್ನಲ್ಲಿ ಬಂದಿರುವ ಆಲೋಚನೆಯನ್ನು ಅಷ್ಟಕ್ಕೆ ಬಿಡದೆ ಆಚರಣೆ ಯೊಳಗೆ ಮೊದಲು ನಾನೇ ತಂದಿದ್ದೇನೆ. ನಂತರ ನನ್ನ ಸಮ್ಮುಖದಲ್ಲಿ ನಡೆದ ವಿವಾಹಗಳೆಲ್ಲವನ್ನು ಕುಲಾಂತರ ವಿವಾಹಗಳಾಗಿ ಹೇಳಿ ಮಾಡಿಸಿದ್ದೇನೆ. ಇಲ್ಲಿಗೆ ಸುಮಾರು ನೂರು ಜನಕ್ಕಾಗಲೀ ಅದಕ್ಕಿಂತ ಹೆಚ್ಚಿನ ಜನಕ್ಕಾಗಲೀ ಕುಲಾಂತರ ವಿವಾಹಗಳು ಮಾಡಿಸಿರುತ್ತೇವೆ. ನಾಳೆ ಬರುವ ಹುಣ್ಣಿಮೆ ದಿನ ಅಂದರೆ ನಾಳೆ ಬರುವ ಮೇ ತಿಂಗಳು 14ನೇ ತಾರೀಖು 2014 ರಂದು ರೆಡ್ಡಿ ಕುಲ ಹುಡುಗನಿಗೆ ಪದ್ಮಶಾಲಿ ನೇಕಾರ ಕುಲದ ಹುಡುಗಿಗೆ ಮದುವೆ ನಡೆಸುತ್ತಿದ್ದೇವೆ. ಈಗ ಮದುವೆ ಮಾಡಿಕೊಳ್ಳುವ ರೆಡ್ಡಿ ಕುಲದ ಹುಡುಗನ ತಂದೆಗೂ ಸಹ ಕುಲಾಂತರ ವಿವಾಹಕ್ಕೆ ನಾವೇ ಬುನಾದಿ ಹಾಕಿದ್ದೇವೆ. ಈ ವಿಧವಾಗಿ ಒಂದು ಕಡೆ ಕುಲಾಂತರ ವಿವಾಹಗಳನ್ನು ನಡೆಸುತ್ತಾ, ಕುಲಗಳನ್ನು ಬೆರೆತುಹೋಗುವಹಾಗೆ ಮಾಡುತ್ತಿದ್ದೇವೆ. ಯಾರ ಕುಲದಲ್ಲಿ ಅವರಿದ್ದು ಎಲ್ಲರೂ ಸೇರಿ ಒಂದೇ ಕುಟುಂಬವಾಗಿ ಇರಬೇಕೆಂದು ಹೇಳುತ್ತಿದ್ದೇವೆ. ಹಾಗೆ ಮತ್ತೊಂದು ಕಡೆ ದೈವಜ್ಞಾನವನ್ನು ಬೋಧಿಸುತ್ತಾ, ಬೇರೆ ಬೇರೆ ಮತಗಳವರು ಒಂದೇ ದಾರಿಯಲ್ಲಿ ಬಂದು ಒಂದೇ ದೇವರನ್ನು ಆರಾಧಿಸುವಹಾಗೆ ಮಾಡುತ್ತಿದ್ದೇವೆ. ಎಲ್ಲ ಮತಗಳವರಿಗೂ ದೇವರು ಹೇಳಿರುವುದು ಒಂದೇ ಜ್ಞಾನವೆಂದು ತಿಳಿದ ಪ್ರಜೆಗಳು, ಅವರವರ ಮತಗಳಲ್ಲಿ ಅವರಿದ್ದೂ ಎಲ್ಲ ಮತಗಳವರು ಒಂದೇ ದೇವರ ಸಂತತಿಯೆಂದು ತಿಳಿದು, ಏಕ ಕುಟುಂಬವಾಗಿ ಬದಲಾಗುತ್ತಿದ್ದಾರೆ. ನಮ್ಮ ಜ್ಞಾನವನ್ನು ಪೂರ್ತಿಯಾಗಿ ಕೇಳಿದವನಾಗಲೀ, ಪೂರ್ತಿಯಾಗಿ ಓದಿದವನಾಗಲೀ, ಅವರು ಯಾವ ಕುಲದಲ್ಲಿದ್ದರೂ, ಯಾವ ಮತದಲ್ಲಿದ್ದರೂ ಅವರ ಕುಲ ಮತಗಳನ್ನು ಮರೆತುಹೋಗಿ, ನಾವೆಲ್ಲಾ ಮನುಷ್ಯರು ಎನ್ನುವ ಭಾವದಿಂದ, ನಾವೆಲ್ಲರೂ ಒಂದೇ ದೇವರ ಜ್ಞಾನವನ್ನು ತಿಳಿದುಕೊಳ್ಳುತ್ತಿದ್ದೇವೆನ್ನುವ ಭಾವದಿಂದ ಒಂದಾಗಿ

ಬೆರೆತುಹೋಗುತ್ತಿದ್ದಾರೆ. ಅದನ್ನು ನೋಡಿ ಹೀಗಾದರೇ ನಮ್ಮ ಕುಲ ಏನಾಗಬೇಕು? ನಮ್ಮ ಮತವೇನಾಗಬೇಕು? ಎಂದು ಬಾಧೆಪಡುವ ಪಕ್ಕದವರು ಸಹ ಇರುತ್ತಾರೆ. ಅಂತಹವರು ಸಹ ನಮ್ಮ ಬೋಧನೆಗಳು ಕೇಳಿದರೂ, ಓದಿದರೂ ತಪ್ಪದೆ ಬದಲಾಗುತ್ತಾರೆಂದು ಹೇಳುತ್ತಿದ್ದೇವೆ. ನಾವು ಹೇಳುವುದೇ ಅಲ್ಲದೆ ನಮ್ಮ ಹತ್ತಿರ ಎಲ್ಲ ಕುಲದವರನ್ನು ಸಮಾನವಾಗಿ ನೋಡುತ್ತಿದ್ದೇವೆ. ಆದ್ದರಿಂದ ಕಡಿಮೆ ಕುಲ ಎನ್ನುವ ಭಾವ ಅವರಲ್ಲಿ ಇಲ್ಲದೆ ಹೋಗುತ್ತಿದೆ. ಕಡಿಮೆ ಕುಲದವರು ಸಹ ನಮ್ಮ ಹತ್ತಿರ ಹೆಚ್ಚಿನ ಕುಲದವರ ಹತ್ತಿರ ಬೆರೆತುಹೋಗುತ್ತಿದ್ದಾರೆ. ಹಾಗೆ ಹೆಚ್ಚಿನ ಕುಲದವರು ಸಹ ಕಡಿಮೆ ಕುಲದವರ ಹತ್ತಿರ ಬೆರೆತುಹೋಗುತ್ತಿದ್ದಾರೆ.

ನಾವು ಈ ವಿಧವಾಗಿ ಮಾಡುವುದರಿಂದ ಆರ್ಯರು ದ್ರಾವಿಡರಿಗೆ ಮಾಡಿದ ದ್ರೋಹ ಸ್ವಲ್ಪವಾದರೂ ಕಡಿಮೆಯಾಗಬಲ್ಲದೆಂದು ಅಂದು ಕೊಳ್ಳುತ್ತಿದ್ದೇವೆ. ಇಲ್ಲಿ ಕೆಲವರು ಒಂದು ಪ್ರಶ್ನೆಯನ್ನು ಕೇಳುವುದಕ್ಕೆ ಅವಕಾಶವಿದೆ. ಅದೇನೆಂದರೇ! ಕೃತಯುಗ ಅಂತ್ಯದಲ್ಲಿ, ತ್ರೇತಾಯುಗ ಆದಿಯಲ್ಲಿ ಆರ್ಯರು ಇಂದೂದೇಶದೊಳಗೆ ಬಂದು, ದ್ರಾವಿಡರ ಹತ್ತಿರ ಇರುವ ಜ್ಞಾನವನ್ನು ನೋಡಿ ಅಸೂಯೆಪಟ್ಟು, ದ್ರಾವಿಡರ ಪತನಕ್ಕೆ ಎಷ್ಟೋ ತಂತ್ರ, ಕುತಂತ್ರಗಳನ್ನು ಮಾಡಿದ್ದಾರೆಂದು ನೀವು ಹೇಳುತ್ತಿದ್ದೀರಲ್ಲ! ಆರ್ಯರು ಅಷ್ಟೊಂದು ಕುತಂತ್ರಗಳನ್ನು ಮಾಡುವಾಗ ದ್ರಾವಿಡರಾದವರು ಯಾರೇ ಆಗಲೀ ಆರ್ಯರು ಮಾಡುವ ಕೆಲಸವನ್ನು ಗುರುತಿಸಲಾರದೆ ಹೋಗಿದ್ದಾರಾ? ಆ ಕಾಲದಲ್ಲಿ ಆರ್ಯರು ಮಾಡಿದ ತಪ್ಪುಗಳು ಈ ಕಾಲದಲ್ಲಿನ ನಿಮಗೆ ಕಾಣಿಸುತ್ತಿರುವಾಗ, ಆ ಕಾಲದಲ್ಲಿನ ಯಾರಿಗೇ ಆಗಲೀ ಆರ್ಯರ ತಪ್ಪುಗಳು ಕಾಣಿಸಲಿಲ್ಲವೇ? ನಿಮಗಿರುವ ಬುದ್ಧಿ ಅವರಿಗೆ ಇಲ್ಲವೆನ್ನುತ್ತೀರಾ? ಆ ದಿನಗಳಲ್ಲಿ ಆರ್ಯರನ್ನು ಕುರಿತು ಯಾರೂ ಕೆಟ್ಟದೆಂದು ಹೇಳದಿರುವಾಗ, ನೀವು ಮಾತ್ರ ಆರ್ಯರು ಮಾಡಿರುವವೆಲ್ಲವೂ ಕೆಟ್ಟದೇಯೆಂದು ಹೇಳುವುದರಲ್ಲಿ ನಿಮ್ಮ ಆಂತರ್ಯವೇನು? ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗೆ ಇದೆ ನೋಡಿ.

ಸತ್ಯವನ್ನು ತಿಳಿಸುವುದೇ ನನ್ನ ಉದ್ದೇಶ. ಇರುವುದು ಇರುವಹಾಗೆ ಬಿಚ್ಚಿ ಹೇಳುವುದೇ ನನ್ನ ಆಂತರ್ಯ. ನನಗೆ ಒಳಗೆ ಒಂದು ಹೊರಗೆ ಒಂದು ಇಟ್ಟುಕೊಂಡು ಮಾತನಾಡುವ ಅವಶ್ಯವಿಲ್ಲ. ಮನುಷ್ಯರ ದೃಷ್ಠಿಯಲ್ಲಿ ಅಲ್ಲದೆ ದೇವರ ದೃಷ್ಠಿಯಲ್ಲಿ ಸಕ್ರಮವಾಗಿ ಇರಬೇಕೆಂದುಕೊಳ್ಳುವವನು. ಮನುಷ್ಯರ ಭಾವದಲ್ಲಿ ನಾನು ಕೆಟ್ಟದಾಗಿ ಕಾಣಿಸಿದರೂ ಫರವಾಗಿಲ್ಲ. ಆದರೆ ದೇವರ ಧರ್ಮಕ್ಕೆ ವಿರೋಧಿ ಆಗಬಾರದೆನ್ನುವುದೇ ನನ್ನ ಛಲ. ಆ ಕಾಲದಲ್ಲಿ ದ್ರಾವಿಡರ ಸ್ವಭಾವವನ್ನು ಕುರಿತು ನಾನು ಮೊದಲೇ ಹೇಳಿದ್ದೇನೆ. ಆದಿನ ದ್ರಾವಿಡರು ತಮಗೆ ದೇವರ ಜ್ಞಾನವೇ ಮುಖ್ಯವೆಂದುಕೊಂಡು ಇತರ ವಿಷಯಗಳಲ್ಲಿ ತಲೆಹಾಕುವವರಲ್ಲ. ಆದರೂ ಆ ದಿನಗಳಲ್ಲಿ ರಾಜರ ಪಾಲನೆ ಸಾಗುತ್ತಿತ್ತು. ಏನು ಜೋಕ್ಯಮಾಡಿಕೊಂಡರೂ ರಾಜಾಗಲೀ, ಮಂತ್ರಿಯಾಗಲೀ ಜೋಕ್ಯ ಮಾಡಿಕೊಳ್ಳಬೇಕಾಗಿರುತ್ತಿತ್ತು. ಆ ವಿಧವಾಗಿ ರಾಜರು ಸಹ ಜೋಕ್ಯ ಮಾಡಿಕೊಳ್ಳಲಾರದೆ ಆರ್ಯರು ಇಂದೂದೇಶದಲ್ಲಿ ಪ್ರವೇಶಿಸಿದಾಗ ಬುದ್ಧಿ ವಂತಿಕೆಯಿಂದ ಪ್ರವರ್ತಿಸಿ, ಒಂದು ಪ್ರಣಾಳಿಕೆ ಏರ್ಪಾಟು ಮಾಡಿಕೊಂಡು ಆ ಪ್ರಣಾಳಿಕೆ ಪ್ರಕಾರ ಕಾರ್ಯಗಳು ಮಾಡುವವರೆಂದು ಮೊದಲೇ ಹೇಳಿದ್ದೇವೆ. ಆ ವಿಧವಾಗಿಯೇ ಆರ್ಯರು ಅಂದಿನ ದ್ರಾವಿಡ ಜನಸಂಖ್ಯೆಗಿಂತಎರಡು ಪಟ್ಟು ಹೆಚ್ಚಾಗಿ ಬಂದು, ಬದುಕುವುದಕ್ಕೆ ಇಲ್ಲಿ ಎಷ್ಟೋ ಜೀವನಕ್ಕೆ ಬೇಕಾಗಿರುವವು ಇವೆಯೆಂದು ಗ್ರಹಿಸಿ, ಈ ದೇಶವನ್ನು ಬಿಟ್ಟು ಹೋಗಬೇಕೆಂದುಕೊಳ್ಳಲಿಲ್ಲ. ಆಗ ಅವರು ಬುದ್ಧಿವಂತಿಕೆಯಿಂದ ಯಜ್ಞಯಾಗಾದಿಗಳಿಂದ ರಾಜ್ಯ ಸುಭಿಕ್ಷವಾಗಿ ಇರುತ್ತದೆಂದು ರಾಜರ ಹತ್ತಿರ ಸೇರಿ ಬೋಧಿಸಲು ಪ್ರಾರಂಭಮಾಡಿದ್ದಾರೆ. ಅಲ್ಲಿಯವರೆಗು ಯಜ್ಞಯಾಗಗಳ ಹೆಸರಾಗಲಿ, ವೇದಗಳ ಹೆಸರಾಗಲಿ, ತಪಸ್ಸುಗಳ ಹೆಸರಾಗಲೀ ಕೇಳದ ರಾಜರು ಆರ್ಯರು ಯಾವುದೋ ಹೊಸ ಪದ್ಧತಿ ಹೇಳುತ್ತಿದ್ದಾರೆಂದು ಅವುಗಳ ಮೇಲೆ ಆಸಕ್ತಿ ತೋರಿಸುವುದು ನಡೆದಿದೆ. ಯಜ್ಞ ಯಾಗಗಳನ್ನಾಗಲೀ, ತಪಸ್ಸು, ವೇದಗಳನ್ನಾಗಲೀ ತಿಳಿದವರು ಆರ್ಯರು ಮಾತ್ರವೇಯೆಂದು ತಿಳಿದು ಅವರನ್ನು ತಮ್ಮ ಆಸ್ಥಾನದಲ್ಲಿ ಇರುವಂತೆ ಕೋರಿದಾಗ,

ಅದಕ್ಕೆ ಆರ್ಯರು "ನಾವು ಗುರುಗಳೆಂದು, ರಾಜ ಗುರುಗಳಾಗಿ ಆಸ್ಥಾನದಲ್ಲಿ ಇಟ್ಟುಕೊಂಡು ನಮ್ಮ ಸಲಹೆ ಮೇರೆಗೆ ನಡೆದುಕೊಳ್ಳಬೇಕಾಗಿರುತ್ತದೆಂದು" ತಿಳಿಸಿದ್ದಾರೆ. ಆಗ ಯಜ್ಞಗಳ ಮೇಲೆ ಆಸಕ್ತಿ ಇರುವವರೆಲ್ಲರೂ ಆರ್ಯರನ್ನು ತಮ್ಮ ಆಸ್ಥಾನ ಗುರುಗಳಾಗಿ ನೇಮಿಸಿಕೊಂಡಿದ್ದಾರೆ. ಆಸ್ಥಾನ ಪಂಡಿತರಾಗಿ, ಆಸ್ಥಾನ ಗುರುಗಳಾಗಿ ರಾಜ್ಯಗಳಲ್ಲಿ ಕಾಲಿಟ್ಟ ಆರ್ಯರು ದ್ರಾವಿಡರಾದ ರಾಜರನ್ನು ತಮ್ಮ ಕೈಕೆಳಗೆ ಇಟ್ಟುಕೊಳ್ಳುವುದು ನಡೆದಿದೆ. ರಾಜನ ಹತ್ತಿರ ಸೇರಿದ ಆರ್ಯರನ್ನು ನೋಡಿ ಅವರನ್ನು ಯಾರೂ ಏನು ಅನ್ನಲಾರದೆ ಹೋಗುತ್ತಿದ್ದರು. ಆರ್ಯರು ಮಾಡುತ್ತಿರುವುದು ಒಂದು ಕಡೆ ತಪ್ಪಾಗಿ ಕಾಣಿಸುತ್ತಿದ್ದರೂ ಅವರನ್ನು ಕುರಿತು ವಿರುದ್ಧವಾಗಿ ಮಾತನಾಡಿದರೆ ರಾಜನ ಕೋಪಕ್ಕೆ ಗುರಿಯಾಗಬೇಕಾಗುತ್ತದೇನೋ ಎಂದು ಕೆಲವರು ಸುಮ್ಮನೆ ಇರುವುದು ನಡೆದಿದೆ. ಈ ವಿಧವಾಗಿ ಅವರನ್ನು ಯಾರೂ ಏನೂ ಎನ್ನಲಾರದೆ ಹೋಗಿದ್ದಾರೆ.

ಇಂದೂ ದೇಶದಿಂದ ಸೀಳಿಹೋದ ಲಂಕೆ ಈಗ ಭಾರತದೇಶಕ್ಕೆ ಸುಮಾರು ಇಪ್ಪತ್ತು ಕಿಲೋಮೀಟರ್‌ಗಳ ದೂರದಲ್ಲಿದೆ. ಕೃತಯುಗದಲ್ಲೇ ಭಾರತದೇಶದಿಂದ ಸರಿದುಹೋಗುವುದಕ್ಕೆ ಪ್ರಾರಂಭಿಸಿದ ಲಂಕೆ ತ್ರೇತಾಯುಗದಲ್ಲಿ ಸ್ವಲ್ಪಕಾಲಕ್ಕೆ ಅರ್ಧಕಿಲೋಮೀಟರ್ ದೂರದಲ್ಲಾಗಲೀ ಅಥವಾ ಅದಕ್ಕಿಂತ ಕಡಿಮೆ ದೂರದಲ್ಲಾಗಲಿ ಇರುತ್ತಿತ್ತು. ಆಗ ಆರ್ಯರು ತಮ್ಮ ಆಚಾರಗಳನ್ನು ದ್ರಾವಿಡರಲ್ಲಿ ಹೇಳಿಸುವುದಕ್ಕೆ ತಮ್ಮಲ್ಲಿ ಮುಖ್ಯವಾದ ಮೇಧಾವಿಗಳಾದ ಋಷಿಗಳನ್ನು ದಕ್ಷಿಣ ದೇಶಕ್ಕೆ ಕಳುಹಿಸಿ ದಕ್ಷಿಣ ದೇಶ ರಾಜರ ಹತ್ತಿರಕ್ಕೆ ಸೇರುವಹಾಗೆ ಮಾಡಿದ್ದಾರೆ. ದಕ್ಷಿಣ ದೇಶದಲ್ಲಿರುವ ರಾಜರಿಗೆ ಯಜ್ಞಗಳ ವಿಶೇಷತೆಯನ್ನು ಅವುಗಳಿಂದ ಬರುವ ಲಾಭಗಳನ್ನು ಹೇಳುವುದೇ ಅಲ್ಲದೆ, ಅಶ್ವಮೇಧಯಜ್ಞ ಮೊದಲಾದ ಯಜ್ಞಗಳಿಂದ ಯುದ್ಧ ಮಾಡದೆ ರಾಜ್ಯಗಳನ್ನು ತಮ್ಮ ಅಧೀನದೊಳಗೆ ತಂದುಕೊಳ್ಳಬಹುದೆಂದು ತಿಳಿಸುವುದು ನಡೆದಿದೆ. ಆಗ ರಾಜ್ಯಕಾಂಕ್ಷೆ ಇರುವ ಚಿಕ್ಕಚಿಕ್ಕ ರಾಜ್ಯಗಳ ರಾಜರು ತಮ್ಮ ರಾಜ್ಯಗಳನ್ನು ವಿಸ್ತರಿಸಿಕೊಳ್ಳುವುದಕ್ಕೋ, ಇತರ ರಾಜ್ಯಗಳ ರಾಜರು ತಮ್ಮ ಮೇಲೆ ದಂಡೆತ್ತಿ

ಬಾರದಂತಿರುವುದಕ್ಕೋ, ತಮ್ಮ ರಾಜ್ಯ ಸುಭಿಕ್ಷವಾಗಿ ಇರುವುದಕ್ಕೋ, ಆಸೆಪಟ್ಟವರಾಗಿ ಆರ್ಯ ಋಷಿಗಳು ಹೇಳಿದ ಹಾಗೆ ಧಾನ್ಯಯಜ್ಞ, ವರುಣಯಜ್ಞ, ಧನಯಜ್ಞ, ಭೂಮಿಯಜ್ಞ, ಪುತ್ರಕಾಮೇಷ್ಠಿ ಯಜ್ಞ, ರಾಜ್ಯಕಾಮೇಷ್ಠಿ ಯಜ್ಞ, ವಿಶ್ವಶಾಂತಿಯಜ್ಞ, ಸರ್ಪ ಯಜ್ಞ ಎನ್ನುವ ಮೊದಲಾದ ಅನೇಕ ಹೆಸರುಗಳಿಂದ ಕೂಡಿಕೊಂಡ ಯಜ್ಞಗಳ ಮೇಲೆ ರಾಜರ ದೃಷ್ಠಿಯನ್ನು ಮರಳಿಸಿ, ಅವುಗಳನ್ನು ಮಾಡಿಸುತ್ತಿದ್ದರು. ಆ ಯಜ್ಞಗಳು ಮಾಡುವುದಕ್ಕೆ ವೇದಮಂತ್ರಗಳು ಅವಶ್ಯವೆಂದು, ವೇದಮಂತ್ರಗಳನ್ನು ತಾವು ಮಾತ್ರವೇ ಹೇಳಬಲ್ಲೆವೆಂದು, ತಮ್ಮ ಅವಶ್ಯ ಎಷ್ಟೋ ಇದೆಯೆಂದು ರಾಜರಿಗೆ ತಿಳಿಸುತ್ತಾ, ರಾಜರನ್ನು ಅವರ ಕೈಕೆಳಗೆ ಇಟ್ಟು ಕೊಂಡಿದ್ದರು. ದಕ್ಷಿಣ ದೇಶದಲ್ಲಿ ಸಹ ಎಲ್ಲಿ ನೋಡಿದರೂ ಯಜ್ಞಕಾರ್ಯಗಳು ಎಲ್ಲರೂ ಮಾಡುವಹಾಗೆ ಪ್ರೇರೇಪಿಸಿದ್ದಾರೆ. ಯಜ್ಞಗಳಿಂದಲೇ ದೇವತೆಗಳು ತೃಪ್ತಿ ಹೊಂದುವರೆಂದು ಹೇಳಿ, ಯಜ್ಞಗಳು ಮಾಡುವುದೇ ನಿಜವಾದ ಭಕ್ತಿ ಎಂದು ಬೋಧಿಸಿದ್ದಾರೆ. ಈ ವಿಧವಾಗಿ ದಕ್ಷಿಣ ದೇಶವನ್ನು ಸಹ ಆರ್ಯರು ಆಕ್ರಮಿಸಿಕೊಂಡು ತಮ್ಮ ಆಚರಣೆಯೊಳಗೆ ದ್ರಾವಿಡರನ್ನು ಸಹ ಬದಲಾಯಿಸಿ ಕೊಂಡಿದ್ದಾರೆ.

ಈ ವಿಧವಾಗಿ ಆರ್ಯರು ತಮ್ಮ ಬುದ್ಧಿವಂತಿಕೆಯನ್ನು ಉಪಯೋಗಿಸಿ ದಕ್ಷಿಣ ಭಾರತದೇಶವನ್ನು ಸಹ ಆಕ್ರಮಿಸಿದ ವಿಷಯ, ಸಮೀಪದಲ್ಲೇ ಇರುವ ಶ್ರೀಲಂಕ ರಾಜ್ಯಕ್ಕೆ ರಾಜನಾದ (ಲಂಕೇಶ್ವರನಾದ) ರಾವಣಬ್ರಹ್ಮನಿಗೆ, ಆರ್ಯರ ವಿಷಯವೆಲ್ಲವೂ ತಿಳಿದುಹೋಯಿತು. ರಾವಣನು ಸ್ವಚ್ಛವಾದ ದ್ರಾವಿಡ ಬ್ರಾಹ್ಮಣನು ಆಗಿರುವುದರಿಂದ ಉಳಿದವರಿಗಿಂತ ಎಷ್ಟೋ ದೊಡ್ಡ ತಿಳುವಳಿಕೆಯುಳ್ಳವನು. ಈಕಡೆ ಪ್ರಪಂಚ ತಿಳುವಳಿಕೆಯಲ್ಲಿ ಮೇಧಾವಿಯೇ ಅಲ್ಲದೆ, ಪರಮಾತ್ಮ ಜ್ಞಾನದಲ್ಲಿ ಬಹಳ ದೊಡ್ಡವನು. ಜ್ಞಾನಶಕ್ತಿ ಸಂಪೂರ್ಣವಾಗಿ ಇರುವ ಜ್ಞಾನ ಇರುವವನು. ಲಂಕಾ ರಾಜ್ಯದಲ್ಲಿ ಸ್ವಚ್ಛವಾದ ಪಾಲನೆ ಮಾಡುತ್ತಾ, ಒಂದು ಕಡೆ ಇಂದೂ ದೇಶದಲ್ಲಿ ಆರ್ಯರು ಮಾಡುವ ದಬ್ಬಾಳಿಕೆಗಳನ್ನು ಗಮನಿಸುತ್ತಾ ಇರುತ್ತಿದ್ದನು. ರಾವಣಬ್ರಹ್ಮ ರಾಜ್ಯವಾದ ಶ್ರೀಲಂಕಯೆಲ್ಲವೂ ದ್ರಾವಿಡರು ಮಾತ್ರವೇ ಇರುತ್ತಿದ್ದರು.

ಆರ್ಯರನ್ನು ತನ್ನ ರಾಜ್ಯದೊಳಗೆ ಬಾರದಂತೆ ರಾವಣಬ್ರಹ್ಮ ಕಟ್ಟುನಿಟ್ಟು ಮಾಡಿದ್ದಾನೆ. ಒಂದುವೇಳೆ ಯಾರಾದರೂ ಕಳ್ಳತನದಿಂದ ಲಂಕಾರಾಜ್ಯದೊಳಗೆ ಸಮುದ್ರದ ಮೂಲಕ ಬರಬೇಕೆಂದುಕೊಂಡು ಪ್ರಯತ್ನಿಸಿ ಅರ್ಧಕಿಲೋಮೀಟರ್ ದೂರ ಸಮುದ್ರದಲ್ಲಿ ಹೋಗುವುದರೊಳಗೆ ಲಂಕ ಸೈನಿಕರು ಕಂಡುಹಿಡಿದು ಅವರನ್ನು ಸಾಯಿಸುವುದು ನಡೆದಿದೆ. ಅಷ್ಟೇ ಅಲ್ಲದೆ ಲಂಕೆಗೆ ಸಮೀಪದಲ್ಲಿರುವ ಭಾರತದೇಶದಲ್ಲಿ ಸಹ ಕೆಲವು ಪ್ರಾಂತಗಳಲ್ಲಿ ಆರ್ಯರನ್ನು ಇಲ್ಲದಂತೆ ಲಂಕ ಸೈನಿಕರು ಓಡಿಸಿದ್ದಾರೆ. ಈ ದಿನ ತಮಿಳನಾಡು, ಕೇರಳ ರಾಷ್ಟ್ರಗಳಾಗಿರುವ ಪ್ರದೇಶಗಳಲ್ಲಿ ಆರ್ಯರನ್ನು ರಾವಣನು ತಮ್ಮ ಸೈನ್ಯದಿಂದ ಹಿಂಸಿಸಿ ಓಡಿಸಿದ್ದಾನೆ. ಆದ್ದರಿಂದ ಆ ದಿನಗಳಲ್ಲಿ ಆಂಧ್ರ ದೇಶದವರೆಗು ಆರ್ಯರು ವ್ಯಾಪಿಸಿ ತಮ್ಮ ದೊಡ್ಡಸ್ತಿಕೆಯನ್ನು ಚಲಾಯಿಸುತ್ತಿದ್ದರು. ಅಂದಿನ ಕಾಲದಲ್ಲಿ ಈಗ ತಮಿಳನಾಡಿನಲ್ಲಿರುವ ಚೆನ್ನಪಟ್ಟಣ (ಚೆನ್ನೈ) ವರೆಗು, ಕರ್ನಾಟಕದಲ್ಲಿರುವ ಹಂಪೆವರೆಗು ಆರ್ಯರು ಪರಿಮಿತರಾಗಿದ್ದೂ ಆಕಡೆ ಚೆನ್ನ ಪಟ್ಟಣವನ್ನು ದಾಟಿಯಾಗಲೀ, ಈಕಡೆ ಹಂಪೆಯನ್ನು ದಾಟಿಯಾಗಲೀ ಮುಂದಕ್ಕೆ ಹೋಗಲಾರದೆ ಹೋಗಿದ್ದಾರೆ. ಆ ವಿಧವಾಗಿ ಅವರು ಮುಂದಕ್ಕೆ ಹೋಗದಂತಿರುವುದಕ್ಕೆ ರಾವಣಬ್ರಹ್ಮವೊಂದರ ಭಯದಿಂದಲೇ ಎಂದು ಹೇಳಬಹುದು. ಆಂಧ್ರ, ಕರ್ನಾಟಕ, ಒರಿಸ್ಸಾ, ಮಹಾರಾಷ್ಟ್ರಗಳಾಗಿರುವ ದಕ್ಷಿಣ ಭಾರತದೇಶದಲ್ಲಿ ಆರ್ಯರು ತಮ್ಮ ಆರ್ಯ ಪ್ರಭಾವವನ್ನು ಬೆಳೆಸಿಕೊಳ್ಳುವುದಕ್ಕೆ ಯಜ್ಞಯಾಗಾದಿಗಳು, ವೇದ ಅಧ್ಯಯನಗಳು ಹೆಚ್ಚಾಗಿ ಮಾಡುತ್ತಿದ್ದರು.

ಆದರೆ ಎಲ್ಲಿ ವೇದಗಳ ಮಂತ್ರಗಳು ಓದುತ್ತಿದ್ದಾರೆಂದು ತಿಳಿದರೂ, ಎಲ್ಲಿ ಯಜ್ಞಗಳು ಮಾಡುತ್ತಿದ್ದಾರೆಂದು ತಿಳಿದರೂ, ಲಂಕ ರಾಜನಾದ ರಾವಣಬ್ರಹ್ಮ ತನ್ನ ಸೈನಿಕರನ್ನು ಕಳುಹಿಸಿ ಅವರಮೇಲೆ ದಾಳಿ ಮಾಡಿಸಿ ಯಜ್ಞಗಳನ್ನು ಧ್ವಂಸ ಮಾಡಿಸುತ್ತಿದ್ದನು. ವೇದಗಳನ್ನು ಹೇಳದಂತೆ ಆರ್ಯರ ಬಾಯಿಗಳನ್ನು ಹೊಲಿಯುತ್ತಿದ್ದನು. ಅಲ್ಲಿಯವರೆಗು ಇಂದೂದೇಶದಲ್ಲಿ ಆರ್ಯರನ್ನು ಎದುರಿಸಿದವರೇ ಇಲ್ಲದೆ ಹೋಗಿದ್ದರು. ಆದರೆ ಮಹಾಮೇಧಾವಿ ಆದ

ರಾವಣಬ್ರಹ್ಮ ಹತ್ತಿರ ಆರ್ಯರ ದಬ್ಬಾಳಿಕೆಗಳು ಸಾಗಲಿಲ್ಲ. ಲಂಕರಾಜ್ಯ ಅವರಿಗೆ ಶತ್ರುರಾಜ್ಯವಾಗಿ ಕಾಣಿಸಿದೆ. ಲಂಕೇಶ್ವರನು ಆರ್ಯರಪಾಲಿಗೆ ಯಮನಹಾಗೆ ಕಾಣಿಸಿದ್ದಾನೆ. ಆದ್ದರಿಂದ ಲಂಕ ಎಂದರೂ, ಲಂಕೇಶ್ವರನೆಂದರೂ, ಲಂಕ ಸೈನಿಕರೆಂದರೂ, ಆ ದಿನದ ಆರ್ಯರಿಗೆ ಸಿಂಹಸ್ವಪ್ನವಾಗಿ ಹೋಗಿದೆ. ಭಾರತದೇಶದಲ್ಲಿ ಚಿಕ್ಕಚಿಕ್ಕ ರಾಜರನ್ನು ತಮ್ಮ ವಶದಲ್ಲಿ ಇಟ್ಟುಕೊಂಡ ಆರ್ಯರು ರಾವಣಬ್ರಹ್ಮನ ಮೇಲೆ, ಲಂಕಾ ರಾಜ್ಯದ ಮೇಲೆಗೆ ದಾಳಿ ಮಾಡುವುದಕ್ಕೆ ಆ ರಾಜರೆಲ್ಲರನ್ನೂ ಪ್ರೇರೇಪಿಸಿದ್ದಾರೆ. ಆದರೂ ಆ ರಾಜರೆಲ್ಲರೂ ರಾವಣಬ್ರಹ್ಮ ವಿಷಯದಲ್ಲಿ ಹಿಂದೆಜ್ಜೆ ಹಾಕಿದ್ದಾರೆ. ರಾವಣನ ಮೇಲೆ ಯುದ್ಧಕ್ಕೆ ಹೋಗಿ ನಾವು ತಿರುಗಿ ಬರಲಾರೆವೆಂದು ಉತ್ತರ ಹೇಳಿದ್ದಾರೆ.

ಲಂಕೇಶ್ವರನಾದ ರಾವಣನು ಸೂರ್ಯಗ್ರಹದಿಂದ ಮನುವಿಗೆ ತಿಳಿದ ಜ್ಞಾನವನ್ನು ತಿಳಿದು, ಸಂಪೂರ್ಣಜ್ಞಾನಿಯಾಗಿ ತಯಾರಾಗುವುದೇ ಅಲ್ಲದೆ ಸಂಪೂರ್ಣ ಯೋಗಿಯಾಗಿದ್ದಾನೆ. ಲಂಕಾರಾಜ್ಯದಲ್ಲಿ ಕೃತಯುಗ ಕಾಲದಲ್ಲಿದ್ದ ನಮ್ಮ ಬ್ರಾಹ್ಮಣ, ಮಾದಿಗ ಎನ್ನುವ ಎರಡು ವಿಧಗಳ ಮನುಷ್ಯರು ಮಾತ್ರವೇ ಇದ್ದಾರೆ. ರಾವಣನು ಸ್ವಚ್ಛವಾದ ಬ್ರಾಹ್ಮಣ ಜಾತಿಯವನಾಗುವುದೇ ಅಲ್ಲದೆ, ದೇಶಕ್ಕೆ ರಾಜನಾಗಿರುವುದರಿಂದ ದ್ರಾವಿಡ ಬ್ರಾಹ್ಮಣರೆಲ್ಲರಿಗೂ ನಾಯಕನಾಗಿದ್ದು ಬ್ರಾಹ್ಮಣರಲ್ಲಿ ದೈವಭಕ್ತಿ ಜ್ಞಾನಶಕ್ತಿ ಕಡಿಮೆಯಾಗದಂತೆ ನೋಡಿಕೊಳ್ಳುತ್ತಿದ್ದನು. ಭಾರತದೇಶ ಲಂಕೆಯೊಂದಿಗೆ ಸ್ವಲ್ಪ ಬೇರೆಯಾಗಿ ದೂರವಾಗಿ ಸರಿಯುತ್ತಾ ಬಂದಿರುವುದರಿಂದ ತನ್ನ ಲಂಕಾ ರಾಜ್ಯದಲ್ಲೇ ತನ್ನ ದೃಷ್ಠಿಯನ್ನು ಹೆಚ್ಚಾಗಿ ತೋರಿಸಿ ದ್ರಾವಿಡ ಬ್ರಾಹ್ಮಣನು ಯಾರೇಯಾಗಲಿ ಅಜ್ಞಾನದೊಳಗೆ ಹೋಗದಂತೆ, ಜ್ಞಾನದಲ್ಲಿದ್ದೂ ಸೂರ್ಯ ಗ್ರಹದಿಂದ ತಿಳಿದ ಮೂರು ಆತ್ಮಗಳ ಜ್ಞಾನವನ್ನು ಹೊಂದಿ, ಎಷ್ಟೋ ಜ್ಞಾನಶಕ್ತಿಗೆ ನಿಲಯುವಾಗಿರುವಂತೆ ರಾವಣನು ಪರ್ಯವೇಕ್ಷಿಸುತ್ತಿದ್ದನು. ಲಂಕೆಯಲ್ಲೆಲ್ಲಾ ಒಟ್ಟು ಎಲ್ಲಾಗಲಿ ಅಜ್ಞಾನ ಶೇಕಡ ಎರಡರಷ್ಟು ಮನುಷ್ಯರಲ್ಲಿ ಹೊರತು ಉಳಿದವರಲ್ಲಿ ಇರುತ್ತಿರಲಿಲ್ಲ. ತೊಂಬತ್ತಾರರಷ್ಟು ಮನುಷ್ಯರು ದ್ರಾವಿಡ ಬ್ರಾಹ್ಮಣರಾಗಿ ಮೆರೆಯುತ್ತಾ,

ಆರ್ಯರಂತೆ ಅಲ್ಲದೆ ಯಜ್ಞ ಯಾಗಗಳಿಗು, ವೇದಾಧ್ಯಯನಗಳಿಗು, ತಪಸ್ಸುಗಳಿಗು ದೂರವಾಗಿದ್ದರು. ಅವರಹತ್ತಿರ ನಿಜವಾದ ಬ್ರಹ್ಮಜ್ಞಾನವಿರುವುದರಿಂದ ದೇವರನ್ನು ಒಬ್ಬನನ್ನು ಹೊರತು ಯಾವ ದೇವತೆಗಳನ್ನು ಪೂಜಿಸುತ್ತಿರಲಿಲ್ಲ. ಯೋಗವನ್ನು ಹೊರತು ತಪಸ್ಸನ್ನು ಮಾಡುವವರಲ್ಲ. ಆದ್ದರಿಂದ ಸಂಪೂರ್ಣ ಜ್ಞಾನಿಗಳಾಗಿ ಯೋಗಿಗಳಾದ ಲಂಕೆಯಲ್ಲಿ ದ್ರಾವಿಡ ಬ್ರಾಹ್ಮಣರಿಗೆ ರೋಗಗಳು ಸಹಿತ ಭಯಪಡುತ್ತಿದ್ದವು. ಯಾವ ರೋಗವಾಗಲಿ ಲಂಕೆ ಹತ್ತಿರಕ್ಕೆ ಹೋಗುತ್ತಿರಲಿಲ್ಲ. ತ್ರೇತಾಯುಗ ಕಾಲದಲ್ಲಿ ಭೂಮಂಡಲದಲ್ಲೆಲ್ಲಾ ಅತ್ಯಧಿಕ ಯೋಗಶಕ್ತಿ ಇರುವ ಯೋಗಿ, ಯೋಗೀಶ್ವರನು ರಾವಣನು ಒಬ್ಬನೇಯೆಂದು ಹೇಳಬಹುದು. ಎಲ್ಲರಿಗಿಂತ ದೊಡ್ಡಯೋಗಿ ಆಗಿರುವುದರಿಂದ ಪದ್ಧತಿ ಪ್ರಕಾರ ದೊಡ್ಡ ಎನ್ನುವ ಗುರುತಿಗೆ ತಕ್ಕಹಾಗೆ ಆತನನ್ನು ಬ್ರಹ್ಮ ಎನ್ನುತ್ತಿದ್ದರು. ಆದ್ದರಿಂದ ಆತನ ಹೆಸರಿನ ಕೊನೆಯಲ್ಲಿ ಮಾರ್ಯಾದೆಪೂರ್ವಕವಾಗಿ ಆತನನ್ನು ದೈವ ಜ್ಞಾನ ತಿಳಿದ ಜ್ಞಾನಿಗಳೆಲ್ಲರೂ ಬ್ರಹ್ಮ ಎಂದು ಉಚ್ಛರಿಸುತ್ತಾ "ರಾವಣಬ್ರಹ್ಮ" ಎನ್ನುತ್ತಿದ್ದರು. ಆತನು ಜೀವಾತ್ಮ, ಆತ್ಮ, ಪರಮಾತ್ಮ ಅನ್ನುವ ಮೂರು ಆತ್ಮಗಳ ಜ್ಞಾನವನ್ನು ತಿಳಿದವನು ಆಗಿರುವುದರಿಂದ "ತ್ರಿ ಆತ್ಮಜ್ಞಾನಿ" ಎಂದೂ, ಹಾಗೇ ಭೂತ, ಭವಿಷ್ಯತ್, ವರ್ತಮಾನ ಕಾಲಗಳನ್ನುವ ಮೂರು ಕಾಲಗಳನ್ನು ತಿಳಿದವನಾಗಿರುವುದರಿಂದ "ತ್ರಿ ಕಾಲಜ್ಞಾನಿ" ಎಂದೂ ಅನ್ನುವುದು ನಡೆದಿದೆ.

ಭಗವದ್ಗೀತಾ ಜ್ಞಾನದಲ್ಲಿ ಅಧರ್ಮಗಳೆಂದು, ಇವುಗಳಿಂದ ದೇವರು ತಿಳಿಯುವುದಿಲ್ಲವೆಂದು ದೇವರೇ ಹೇಳಿದರೂ, ಆ ಮಾತನ್ನು ಅತಿಕ್ರಮಿಸಿ ಅಧರ್ಮಗಳಾದ ಯಜ್ಞ ಯಾಗಾದಿಗಳನ್ನು, ವೇದಗಳ ಅಧ್ಯಾಯನವನ್ನು, ತಪಸ್ಸುಗಳನ್ನು ಪ್ರವೇಶವಿಟ್ಟು ದೈವಜ್ಞಾನವನ್ನು ಕಲುಷಿತ ಮಾಡಬೇಕೆಂದು ನೋಡಿದ ಆರ್ಯರ ಪ್ರಯತ್ನವನ್ನು ಎದುರಿಸಿ, ಇವು ಅಧರ್ಮಗಳು ಎಂದು ಹೇಳುವುದರಿಂದ, ಈತನು ಧರ್ಮಗಳ ಗ್ಲಾನಿಯಾದ ಕಲುಷಿತವನ್ನು ತೆಗೆದುಹಾಕಲು ಬಂದಿರುವ ಭಗವಂತನೇನೋ ಎನ್ನುವ ಊಹೆ ಬಾರದೆ ತಪ್ಪುವುದಿಲ್ಲ. ಆದರೆ ಅಂತಹ ದೊಡ್ಡ ವ್ಯಕ್ತಿಯನ್ನು ಈದಿನ ಮನುಷ್ಯರು

ಅಜ್ಞಾನಿಗಳಾಗಿ, ಆರ್ಯರು ಬೋಧಿಸಿರುವುದನ್ನು ಕೇಳಿ, ರಾವಣಬ್ರಹ್ಮನನ್ನು, ತ್ರಿಕಾಲಜ್ಞಾನಿಯನ್ನು ಸಾಧಾರಣ ಮನುಷ್ಯನಿಗಿಂತ ನೀಚನಂತೆ ಹೋಲಿಸಿ ಮಾತನಾಡುತ್ತಿರುವುದನ್ನು ನೋಡಿದರೆ, ಯೋಗಿಯಾದ ನನಗೆ ಸ್ವಲ್ಪ ಬಾಧೆಯಾಗೆ ಇದೆ. ಆದ್ದರಿಂದ ಮರೆಯಲ್ಲಿ ಬಿದ್ದು ಹೋದ ಸತ್ಯವನ್ನು ಹೊರತೆಗೆದು, ರಾವಣನು ಅಜ್ಞಾನಿ ಅಲ್ಲ ಜ್ಞಾನಿ ಎಂದೂ, ಆತನು ದುರ್ಮಾರ್ಗನಲ್ಲ ಸನ್ಮಾರ್ಗನೆಂದು, ಆತನು ಶೂದ್ರನಲ್ಲ ಸದ್ಬ್ರಾಹ್ಮಣನೆಂದೂ, ಆತನು ಸಾಮಾನ್ಯನಲ್ಲ ದೊಡ್ಡ ಯೋಗೀಶ್ವರನೆಂದೂ ತಿಳಿಸಬೇಕೆಂದುಕೊಂಡಿದ್ದೇನೆ, ತಿಳಿಸುತ್ತಿದ್ದೇನೆ. ಕೆಲವರಿಗೆ ಕೆಲವು ಪ್ರಶ್ನೆಗಳು ಬಂದು ಹೀಗೆ ಕೇಳಬಹುದು. ರಾಮಾಯಣ ಚರಿತ್ರೆಯಲ್ಲಿ ರಾವಣನನ್ನು ಪೂರ್ತಿ ದುರ್ಮಾರ್ಗನಾಗಿ ತೋರಿಸುವುದು ನಡೆಯಲಿಲ್ಲವೇ? ರಾವಣನು ಕಾಮಾಂಧಕಾರನಾಗಿ ಅರಣ್ಯದಲ್ಲಿ ಒಂಟಿಯಾಗಿದ್ದ ಸೀತೆಯನ್ನು ಅಪಹರಿಸಿಕೊಂಡು ಹೋಗಲಿಲ್ಲವೆ? ಆಂಜನೇಯನನ್ನು ದೂತನಾಗಿ ಕಳುಹಿಸಿದರೂ ಸೀತೆಯನ್ನು ಬಿಡದೆ ರಾವಣನು ಒಬ್ಬ ಸ್ತ್ರೀಗೋಸ್ಕರ ರಾಮನೊಂದಿಗೆ ಯುದ್ಧ ಮಾಡಲಿಲ್ಲವೆ? ಕೊನೆಗೆ ರಾಮನಕೈಯಲ್ಲಿ ಸಿಲುಕಿ ರಾಮನ ಬಾಣಕ್ಕೆ ಪ್ರಾಣಗಳನ್ನು ಬಿಡಲಿಲ್ಲವೆ? ಈ ವಿಧವಾಗಿ ಒಬ್ಬ ಸ್ತ್ರೀ ಸಾಂಗತ್ಯಕ್ಕೋಸ್ಕರ ಕೊನೆಗೆ ಪ್ರಾಣಗಳನ್ನು ಕಳೆದುಕೊಂಡ ತಿಳುವಳಿಕೆಯಿಲ್ಲದವ ನನ್ನು ಹಿಂದೆಹಾಕಿಕೊಂಡು ಮಾತನಾಡುವುದು, ನೀವು ಒಬ್ಬ ರಚಯಿತನಾಗಿ ಮಾಡಬೇಕಾದ ಕೆಲಸವೇನಾ? ಮೇಲಾಗಿ ತಾವೂಸಹ ಯೋಗೀಶ್ವರರೆನ್ನುವ ನಾಮಧೇಯವನ್ನು ಹೊಂದಿ ರಾಕ್ಷಸ ರಾಜನಾದ ಒಬ್ಬ ಅಸುರನಿಗೋಸ್ಕರ ಇಷ್ಟೊಂದು ಮಾತನಾಡುವುದು ನಿಮಗೆ ಸರಿಯೇನಾ ಎಂದು ಕೇಳುವುದಕ್ಕೆ ಅವಕಾಶವಿದೆ. ರಾಮಾಯಣ ಚರಿತ್ರೆ ಓದಿದವರು ಯಾರಾದರೂ ಹೀಗೇ ಪ್ರಶ್ನಿಸಬಲ್ಲರು. ಆದರೆ ಆ ಪ್ರಶ್ನೆಗಳೆಲ್ಲವುಗಳಿಗೂ ಉತ್ತರ ಹೇಳಬೇಕಾದ ಜವಾಬ್ದಾರಿ ನನ್ನದೇಯೆಂದು ಒಪ್ಪಿಕೊಳ್ಳುತ್ತಾ, ಉತ್ತರಕ್ಕಿಂತ ಮೊದಲು ನಿಮ್ಮ ಪ್ರಶ್ನೆಗಳೆಲ್ಲವೂ ಸಮಂಜಸವಾದವೇ, ನೀವು ಎಷ್ಟೋ ಜ್ಞಾಪಕಶಕ್ತಿಯಿಂದ, ವಿಚಕ್ಷಣಾಶಕ್ತಿಯಿಂದ ಈ ಪ್ರಶ್ನೆಗಳನ್ನು ಕೇಳಿದ್ದೀರ. ಹಾಗೇ ಅದೇ ವಿಮರ್ಶನಾ ಶಕ್ತಿಯಿಂದ, ಸ್ವಚ್ಛವಾದ ನ್ಯಾಯಪದ್ಧತಿಯಲ್ಲಿ ನನ್ನ ಉತ್ತರಗಳನ್ನು ಸಹ ನೋಡಬೇಕೆಂದು ತಿಳಿಸುತ್ತಿದ್ದೇನೆ.

ರಾಮಾಯಣ ಚರಿತ್ರೆ ಬರುವುದಕ್ಕಿಂತ ಮೊದಲೇ, ಅದೆಲ್ಲವೂ ನಡೆಯುವುದಕ್ಕೆ ಮೊದಲೇ, ರಾವಣಬ್ರಹ್ಮ ಆರ್ಯರಿಗೆ ಬದ್ಧ ಶತ್ರು ಎನ್ನುವ ಮಾತನ್ನು ಮರೆತುಹೋಗಬಾರದು. ಶ್ರೀರಾಮನಿಗೆ ಮದುವೆ ಆಗುವುದಕ್ಕಿಂತ ಮೊದಲಿನಿಂದ, ರಾಮನು ಹುಟ್ಟದ ಮೊದಲಿನಿಂದ ರಾವಣನು ಆರ್ಯರಿಗೆ ವಿರುದ್ಧವಾಗಿ ಬದಲಾಗಿದ್ದನು. ಆಗಾಗಲೇ ದಕ್ಷಿಣ ದೇಶದಲ್ಲಿ ಪ್ರವೇಶಿಸಿದ ಆರ್ಯರು ಕೆಲವರನ್ನು ಅಜ್ಞಾನಿಗಳನ್ನು ಮಾಡಿ, ಕೆಲವರನ್ನು ಶೂದ್ರರನ್ನು ಮಾಡಿ, ಉಳಿದ ಕೆಲವು ದ್ರಾವಿಡ ಬ್ರಾಹ್ಮಣರನ್ನು ಲಕ್ಷ್ಯವಾಗಿ ಮಾಡಿಕೊಂಡು, ಅವರ ಕೈಗೆ ರಾಜರಿಂದ ಭೂಮಾನ್ಯಗಳನ್ನು, ಧನರಾಶಿಗಳನ್ನು, ಕನಕ ಸ್ವತ್ತುಗಳನ್ನು ಕೊಡಿಸಿ, ರಾಜ್ಯಕ್ಕಾಗಿ, ರಾಜರಿಗಾಗಿ ಯಜ್ಞಗಳನ್ನು ಮಾಡಿಸಲು ಪ್ರಾರಂಭ ಮಾಡಿದ್ದಾರೆ. ಯಜ್ಞಯಾಗಾದಿಗಳಿಂದ ಸುಲಭ ಸಂಪಾದನೆ, ಅಮಿತ ಗೌರವ, ರಾಜರಹತ್ತಿರ ಸ್ಥಾನ ಲಭಿಸುವುದರಿಂದ ದ್ರಾವಿಡ ಬ್ರಾಹ್ಮಣರೆಲ್ಲರೂ ತಮ್ಮ ಜ್ಞಾನವನ್ನು ಬಿಟ್ಟು, ಆರ್ಯರ ಆಚರಣೆಗಳಲ್ಲಿ ಲಗ್ನವಾಗಿ ಹೋಗಿದ್ದಾರೆ. ಈ ವಿಧವಾಗಿ ಅನೇಕ ಕ್ರಿಯೆಗಳಿಂದ ಯಾವುದೋ ಒಂದು ಪದ್ಧತಿಯಲ್ಲಿ ದ್ರಾವಿಡರಲ್ಲಿ ಆರ್ಯರ ಸಾಂಪ್ರದಾಯಗಳನ್ನು ಸೇರಿಸಿ, ತಮ್ಮ ಬಲವನ್ನು ದಕ್ಷಿಣ ದೇಶ ದಲ್ಲಿಯೂ ಸಹ ಬೆಳೆಸಿಕೊಳ್ಳುವುದು ಶ್ರೀರಾಮನು ಹುಟ್ಟುವುದಕ್ಕಿಂತ ಮೊದಲೆ ನಡೆದುಹೋಗಿದೆ. ಶ್ರೀರಾಮನ ತಂದೆಯಾದ ದಶರಥನಿಗೆ ಮೂವರು ಹೆಂಡತಿಯರಿದ್ದರೂ ಸಂತಾನ ಇರಲಿಲ್ಲ. ಅದೇ ಸಮಯವೆಂದು ತಿಳಿದ ಆರ್ಯರು ದಶರಥನ ಹತ್ತಿರ ಸೇರಿ, ಯಜ್ಞಗಳು ಮಾಡುವುದರಿಂದ ದೇವತೆಗಳು ಸಂತೋಷ ಪಟ್ಟು ಫಲಿತವಾಗಿ ಸಂತತಿಯನ್ನು ಕೊಡುತ್ತಾರೆಂದು ಹೇಳಿ ಒಪ್ಪಿಸಿ, ದಶರಥನಿಂದ ಪುತ್ರಕಾಮೇಷ್ಠಿ ಯಜ್ಞವನ್ನು ಮಾಡಿಸುವುದು ನಡೆದಿದೆ. ಆಗಲೇ ನಾಲ್ವರು ಆರ್ಯರು ಅಲ್ಲೇ ಇದ್ದು ಅರವತ್ತು ಮಂದಿ ದ್ರಾವಿಡ ಬ್ರಾಹ್ಮಣರನ್ನು ಆ ಯಜ್ಞದಲ್ಲಿ ಪಾಲ್ಗೊಳ್ಳುವ ಹಾಗೆ ಮಾಡಿ, ಅಲ್ಲಿ ಯಜ್ಞಗಳನ್ನು ಮಾಡುವುದರಲ್ಲಿ ತರಭೇತಿ ಮಾಡಿಸಿದ್ದಾರೆ. ಈ ವಿಧವಾಗಿ ಶ್ರೀರಾಮನು ಹುಟ್ಟುವುದಕ್ಕಿಂತ ಮೊದಲಿನಿಂದ ಯಜ್ಞಗಳನ್ನು ಆರ್ಯರು ದ್ರಾವಿಡರಿಗೆ ಅಭ್ಯಾಸ ಮಾಡುವುದು ನಡೆದಿದೆ.

ಶ್ರೀರಾಮನು ಹುಟ್ಟಿದ ನಂತರ ರಾಮನಿಗೆ ಹದಿನಾರು ವರ್ಷಗಳ ವಯಸ್ಸಿನಲ್ಲಿ ವಿಶ್ವಾಮಿತ್ರ ಮಹರ್ಷಿ ಬಂದು, ತಾವು ಮಾಡುತ್ತಿರುವ ಯಜ್ಞಗಳನ್ನು ರಾವಣ ಸೈನ್ಯ ಭಂಗಮಾಡುತ್ತಿದೆಯೆಂದು, ಹಾಗೆ ಯಜ್ಞ ಭಂಗ ಆಗದೆ ಇರುವುದಕ್ಕೆ, ಯಜ್ಞ ರಕ್ಷಣೆಗೆ ಶ್ರೀರಾಮನನ್ನು ತಮ್ಮ ಹಿಂದೆ ಕಳುಹಿಸೆಂದು, ಕೆಲವು ದಿನಗಳು ನಡೆಯುವ ಯಜ್ಞ ಮುಗಿದ ಕೂಡಲೇ ಮರಳಿ ಬರುತ್ತೇವೆಂದು ದಶರಥನನ್ನು ಕೇಳಿ ಶ್ರೀರಾಮನನ್ನು, ಲಕ್ಷ್ಮಣನನ್ನು ತನ್ನ ಹಿಂದೆ ವಿಶ್ವಾಮಿತ್ರನು ಕರೆದುಕೊಂಡುಹೋದ ವಿಷಯ ಎಲ್ಲರಿಗೂ ತಿಳಿದಿದೆ. ಈ ವಿಧವಾಗಿ ತ್ರೇತಾಯುಗದಲ್ಲಿ ರಾಮನು ಹುಟ್ಟುವುದಕ್ಕಿಂತ ಮೊದಲು, ಹುಟ್ಟಿದ ನಂತರ ಯಜ್ಞಗಳ ಪ್ರಸ್ತಾವನೆಯನ್ನು ರಾಮಾಯಣದಲ್ಲಿ ಕೇಳಿರುತ್ತೇವೆ. ತ್ರೇತಾಯುಗದಲ್ಲಿ ಯಜ್ಞಗಳ ಪ್ರಸ್ತಾವನೆ ಆರಂಭವಾಗಿ ದ್ವಾಪರಯುಗವೆಲ್ಲವೂ ನಡೆದು, ಕಲಿಯುಗ ಪ್ರಾರಂಭದಲ್ಲೂ ಸಹ ಪರೀಕ್ಷಿತ್ತು ಕುಮಾರನು ಜನಮೇಜಯನು ಸರ್ಪಯಜ್ಞವನ್ನು ಮಾಡಿದಹಾಗೆ ಕೇಳಿದ್ದೇವೆ. ಅಷ್ಟೇ ಅಲ್ಲದೆ ಇಂದಿನ ಕಾಲದಲ್ಲಿಯೂ ಸಹ ಎಷ್ಟೋ ಜನ ಬ್ರಾಹ್ಮಣರು ಎಷ್ಟೋ ಹೆಸರುಗಳಿರುವ ಯಜ್ಞಗಳನ್ನು ಮಾಡುವುದು ನೋಡುತ್ತಲೇ ಇದ್ದೇವೆ. ಈ ನಡುವೆ ರಾಜ್ಯ ಪ್ರಭುತ್ವವನ್ನು ನಡೆಸುವ ಒಬ್ಬ ಮುಖ್ಯಮಂತ್ರಿ ಮಳೆಗೋಸ್ಕರ ವರುಣಯಜ್ಞವನ್ನು ನೂರು ಜನ ಋತ್ವಿಕರಿಂದ ವೇದಮಂತ್ರ ಉಚ್ಛಾರಣೆಗಳಿಂದ ಮಾಡುವುದು ನಡೆದಿದೆ. ಈ ವಿಧವಾಗಿ ತ್ರೇತಾಯುಗದ ಪ್ರಾರಂಭದಲ್ಲೆ ಆರಂಭವಾದ ಆರ್ಯರ ಪ್ರಭಾವ ಭಾರತದೇಶ ವೆಲ್ಲಾ ವ್ಯಾಪಿಸಿ ಇಂದಿಗೂ ಕೊನೆಸಾಗುತ್ತಲೆ ಇದೆ. ಜ್ಞಾನಕ್ಕಿಂತ ಅಜ್ಞಾನ ಸುಲಭವಾಗಿ ಅಂಟಿಕೊಳ್ಳುತ್ತದೆನ್ನುವ ಹಿರಿಯರ ಮಾತಿನ ಪ್ರಕಾರ ದೇವರು ಹೇಳಿದ ಜ್ಞಾನವನ್ನು ಧರ್ಮಗಳನ್ನು ಬಿಟ್ಟು, ಮನುಷ್ಯರು ಕಲ್ಪಿಸಿದ ಕಾರ್ಯಗಳಲ್ಲಿ ಎಲ್ಲರೂ ಆಲೋಚನೆ ಇಲ್ಲದೆ ಲಗ್ನವಾಗಿ ಹೋಗುವುದು ವಿಚಿತ್ರವಲ್ಲವೆ! ಜ್ಞಾನ ಮಾರ್ಗ ಇಕ್ಕಟ್ಟಾಗಿರುವುದು, ಅಜ್ಞಾನ ಮಾರ್ಗ ವಿಶಾಲವಾದದ್ದು ಎಂದು ಒಬ್ಬ ಪ್ರವಕ್ತ ಹೇಳಿದ ಮಾತಿನ ಪ್ರಕಾರ ಆದಾಯದಿಂದ ಕೂಡಿಕೊಂಡ ಪ್ರಪಂಚ ಕಾರ್ಯವನ್ನು ಆಶ್ರಯಿಸಿ, ಆದಾಯವಿಲ್ಲದ ದೈವಜ್ಞಾನವನ್ನು ಬಿಟ್ಟುಹಾಕುವುದು

ನಡೆದಿದೆ. ಆದರೂ ನಾವು ನಷ್ಟಹೋಗಿದ್ದೇವಾ ಅಥವಾ ಲಾಭಹೊಂದಿದ್ದೇವಾ ಎಂದು ಆಲೋಚಿಸದೆ, ಯಾವನೊ ಏನೊ ಮಾತನಾಡಿದರೆ ಅದು ಸತ್ಯವೆ, ಅಸತ್ಯವೆ ಎಂದು ಆಲೋಚಿಸದೆ, ಅವರ ಮಾತನ್ನೆ ನಾವು ಮಾತನಾಡಿದರೆ ನಮ್ಮ ತಿಳುವಳಿಕೆ ಏನಾದಂತೆ? ನಮ್ಮ ಬುದ್ಧಿಯನ್ನು ಇತರರಿಗೆ ಅಡವಿಟ್ಟಂತಲ್ಲವೆ?

ರಾಮಾಯಣ ಚರಿತ್ರೆಯನ್ನು ಗ್ರಂಥರೂಪವಾಗಿ ಬರೆದವರ್ಯಾರು? ಬರೆಯುವ ಪಾಂಡಿತ್ಯವನ್ನು ಹೊಂದಿದ ವಾಲ್ಮೀಕಿ ಆರ್ಯನಲ್ಲವೆ? ಆಗಾಗಲೇ ರಾವಣಬ್ರಹ್ಮನ ಮೇಲೆ ದ್ವೇಷವನ್ನು ಬೆಳೆಸಿಕೊಂಡಿರುವ ಆರ್ಯರು ಬರೆದ ಸಮಾಚಾರದಿಂದ ರಾವಣ ಬ್ರಹ್ಮನನ್ನು ದುರ್ಮಾರ್ಗನು, ಕಾಮಾಂಧನು ಅನ್ನುವುದು ಸಮಂಜಸವೇನಾ ಎಂದು ಕೇಳುತ್ತಿದ್ದೇನೆ. ಅ ದಿನ ರಾವಣನು ಸೀತೆಯನ್ನು ತೆಗೆದುಕೊಂಡು ಹೋಗಿರುವುದು ವಾಸ್ತವವೆ, ಆದರೂ ಆತನು ಯಾವ ಉದ್ದೇಶದಿಂದ ತೆಗೆದುಕೊಂಡು ಹೋಗಿದ್ದಾನೋ ತಿಳಿಯದಂತೆ ಮಾತನಾಡಿದರೆ ಅಲ್ಲಿ ನಮ್ಮ ವಿಚಕ್ಷಣ ಇಲ್ಲದಂತೇ ಅಲ್ಲವೆ! ರಾಮನ ಕೈಯಲ್ಲಿ ರಾವಣನು ಪ್ರಾಣಗಳು ಕಳೆದುಕೊಂಡಿರುವುದು ವಾಸ್ತವವೆ. ನಡೆಯಬೇಕಾಗಿರುವ ಭವಿಷ್ಯತ್ತನ್ನು ತಿಳಿದ ಕಾಲಜ್ಞಾನಿಗೆ ರಾಮನ ಕೈಯಲ್ಲಿ ತನ್ನ ಪ್ರಾಣಗಳು ಹೋಗುತ್ತವೆಂದು ತಿಳಿದಿರಲಿಲ್ಲವೆ! ರಾವಣನು ಮಹಾ ಜ್ಞಾನಿಯಾಗಿ ಬ್ರಹ್ಮ (ದೊಡ್ಡ) ಅನಿಸಿಕೊಂಡವನು ನೀಚ (ಚಿಕ್ಕ) ಕಾರ್ಯಗಳು ಮಾಡುವನಾ? ಹಾಗೆ ಮಾಡಬೇಕಾದ ಅವಶ್ಯವಿಲ್ಲ. ಆದರೂ ಮಾಡಿದ ಕಾರ್ಯದಲ್ಲಿ ಆತನ ಉದ್ದೇಶ ಏನೋ ತಿಳಿಯದಂತೆ, ನಮ್ಮ ಭಾವದ ಪ್ರಕಾರ ಆತನದು ತಪ್ಪು ಅನ್ನುವುದರಲ್ಲಿ ನಾವೇನಾದರೂ ತಪ್ಪಾಗಿ ಅರ್ಥೈಸಿಕೊಂಡಿದ್ದೇವೇನೊ ಆಲೋಚಿಸಿಕೊಳ್ಳಬೇಕಾದ ಅವಶ್ಯವಿದೆ. ಸೀತೆ ಸ್ವಯಂವರಕ್ಕೆ ರಾವಣನು ಬಂದಿದ್ದಾನೆಂದು ರಾಮಾಯಣ ಗ್ರಂಥದಲ್ಲಿ ಬರೆದಿದ್ದಾರೆ. ಸೀತೆ ಸ್ವಯಂವರ ಉತ್ತರ ಭಾರತದೇಶದಲ್ಲಿ ಆದರೂ, ರಾವಣನಿಗೆ ಆಹ್ವಾನವನ್ನು ಯಾರು ಕಳಿಸಿದ್ದಾರೆ? ಲಂಕೆಗೆ ಹೋಗುವುದಕ್ಕೆ ಸಮುದ್ರವನ್ನು ದಾಟುವುದಕ್ಕೆ ಹನುಮಂತನಿಗೆ ಹೊರತು ಯಾರಿಗೂ ಕೈಲಾಗಲಿಲ್ಲವೆಂದು ಹೇಳಿದವರು, ರಾವಣನನ್ನು ಲಂಕೆಗೆ ಹೋಗಿ

ಯಾರು ಕರೆದಿದ್ದಾರೋ ಹೇಳಲಿಲ್ಲ. ಒಂದು ಸಮಯದಲ್ಲಿ ಸೀತೆಹುಟ್ಟುವುದಕ್ಕಿಂತ ಮೊದಲೆ ಕೈಲಾಸ ಪರ್ವತಕ್ಕೆ ಹೋಗಿ ಶಿವನನ್ನು, ಶಿವ ಧನಸ್ಸನ್ನು, ಕೈಲಾಸ ಪರ್ವತವನ್ನು ಎತ್ತಿ ತಲೆಮೇಲೆ ಇಟ್ಟುಕೊಂಡ ಬಲಶಾಲಿ ಆದ ರಾವಣನು, ಸೀತೆ ಎತ್ತಿಟ್ಟ ಧನಸ್ಸನ್ನು ಎತ್ತಲಾರದೆ ಹೋಗಿದ್ದಾನೆಂದು, ಎತ್ತಲಾರದೆ ಅವಮಾನಪಟ್ಟಿದ್ದಾನೆಂದು ಬರೆದಿದ್ದಾರೆ. ಅದು ವಾಸ್ತವವೇನಾ ಎಂದು ಯಾರೂ ಆಲೋಚಿಸಲಿಲ್ಲ. ಅಷ್ಟೇ ಅಲ್ಲದೆ ರಾವಣನು ಸೀತೆ ಸ್ವಯಂವರಕ್ಕೆ ಹೋಗಿದ್ದಾನೆನ್ನುವ ಮಾತೇ ಶುದ್ಧ ಅಸತ್ಯ ಅನ್ನುವುದಕ್ಕೆ ಆಧಾರವಿದೆ.

ಸೀತೆ ಸ್ವಯಂವರಕ್ಕೆ ರಾವಣನು ತನ್ನ ಹೆಂಡತಿ ಮಂಡೋದರಿ ದೇವಿ, ತನ್ನ ಕುಮಾರ ಮೇಘನಾಥನೊಂದಿಗೆ ಸಹ ಲಂಕೆಯಲ್ಲಿ ಸುಮಾರು ಎಂಬತ್ತು (80) ವರ್ಷಗಳ ವಯಸ್ಸು ಹೊಂದಿದ್ದನು. ಎಂಬತ್ತು ವರ್ಷಗಳ ವಯಸ್ಸಿನಲ್ಲಿ ಆತನು ಸ್ವಯಂವರಕ್ಕೆ ಹೋಗುವನಾ ಎಂದು ಕೆಲವರಾದರೂ ಆಲೋಚಿಸದೆ ಹೋಗಿದ್ದಾರೆ. ಶ್ರೀರಾಮನು ಅರಣ್ಯವಾಸದ ಕಾಲದಲ್ಲಿ ವಿಂಧ್ಯ ಪರ್ವತಗಳ ಹತ್ತಿರ ಇರುವ ಅಡವಿಗಳಲ್ಲಿ ರಾಮನು ಸೀತೆ ಲಕ್ಷ್ಮಣನು ಇರುವಾಗ ರಾವಣನು ಸೀತೆಯನ್ನು ತಂದು ತನ್ನ ಲಂಕಾ ರಾಜ್ಯದಲ್ಲಿ ಇಟ್ಟಿರುವ ಮಾತು ವಾಸ್ತವವೇ ಆದರೂ, ಆದಿನ ಸೀತೆಯ ಮೇಲೆ ದುರುದ್ದೇಶದಿಂದ ರಾವಣನು ಸೀತೆಯನ್ನು ತೆಗೆದುಕೊಂಡು ಬರಲಿಲ್ಲ. ಆಗ ಆತನ ವಯಸ್ಸು ಎಂಬತ್ತರ ಮೇಲಿನ ಮಾತೆ. ಸೀತೆಯನ್ನು ತೆಗೆದುಕೊಂಡು ಬರುವ ವಿಷಯವನ್ನು ತನ್ನ ಹೆಂಡತಿ ಮಂಡೋದರಿ ದೇವಿಗೆ ಮೊದಲೆ ಹೇಳಿದ್ದಾನೆ. ರಾಮನ ಕೈಯಲ್ಲಿ ತನ್ನ ಸಾವು ಇದೆಯೆಂದು, ಹಾಗೆ ನಡೆಯುವುದಕ್ಕೆ ರಾಮನು ಬಂದು ತನ್ನನ್ನು ಸಾಯಿಸುವುದಕ್ಕೆ ಕಾರಣವಾಗಿ ಸೀತೆಯನ್ನು ಲಂಕೆಗೆ ತೆಗೆದುಕೊಂಡು ಬರಬೇಕೆಂದು ಮೊದಲೇ ಹೇಳಿದ್ದಾನೆ. ಆ ವಿಷಯವನ್ನು ಪಕ್ಕಕ್ಕಿಟ್ಟು ಸೀತೆಯನ್ನು ದುರುದ್ದೇಶದಿಂದ ರಾವಣನು ಲಂಕೆಗೆ ತೆಗೆದುಕೊಂಡು ಹೋಗಿದ್ದಾನೆಂದು ಆರ್ಯರು ಪ್ರಚಾರ ಮಾಡಿ ಬರೆದಿದ್ದಾರೆ. ಮೊದಲೇ ಆರ್ಯರಿಗೆ ರಾವಣನು ಶತ್ರುವಾಗಿ ಇದ್ದುದರಿಂದ, ಸೀತೆಯನ್ನು ತೆಗೆದುಕೊಂಡು ಹೋಗುವುದನ್ನು ನೆಪವಾಗಿ ತೋರಿಸಿ, ಆತನನ್ನು ಕುರಿತು

ಕೆಟ್ಟ ಪ್ರಚಾರವನ್ನು ಮಾಡಿದ್ದಾರೆ. ವೃದ್ಧಾಪ್ಯದಲ್ಲಿರುವ ರಾವಣನು ಎಷ್ಟೋ ಅನುಭವಶಾಲಿ, ಮೇಧಾವಿ ಆಗಿರುವುದರಿಂದ ಸುಮಾರು ಇಪ್ಪತ್ತು ಸಂಖ್ಯೆ ಮೇಲ್ಪಟ್ಟು ಸಂಖ್ಯೆಯಲ್ಲಿ ಸ್ತ್ರೀಯರನ್ನು ಸೀತೆಗೆ ಪರಿಚರ್ಯಗಳು ಮಾಡುವುದಕ್ಕೆ, ಜೊತೆಯಾಗಿರುವುದಕ್ಕೆ ಏರ್ಪಾಟು ಮಾಡಿ ಒಳ್ಳೆಯ ವಾತಾವರಣಕ್ಕಾಗಿ ಸೀತೆಯನ್ನು ಅಶೋಕವನ ಎನ್ನುವ ಉದ್ಯಾನವನದಲ್ಲಿ ಇಟ್ಟಿದ್ದಾನೆ. ತನ ನಿವಾಸಕ್ಕೆ ಸುಮಾರು ಐವತ್ತು (50) ಕಿಲೋಮೀಟರ್‌ಗಳ ದೂರದಲ್ಲಿರುವ ಉದ್ಯಾನವನದಲ್ಲಿ, ನೀರು ಹರಿಯುವ ಕಾರಂಜಿಗಳ ಮಧ್ಯದಲ್ಲಿ ಆಕೆಯ ನಿವಾಸವನ್ನು ಕಲ್ಪಿಸಿ, ವಾರಕ್ಕೆ ಒಂದುಬಾರಿ ಪತ್ನಿ ಸಮೇತನಾಗಿ ಅಶೋಕವನಕ್ಕೆ ಹೋಗಿ ಸೀತೆ ಆರೋಗ್ಯ ವಿಷಯವನ್ನು ತಿಳಿದುಕೊಂಡು ಆಕೆಗೆ ಯಾವ ಕೊರತೆ ಇಲ್ಲದ ಹಾಗೆ ನೋಡಿಕೊಳ್ಳಲು ತನ್ನವರಿಗೆ ಹೇಳಿ ಬರುತ್ತಿದ್ದನು. ಸೀತೆ ಹತ್ತಿರಕ್ಕೆ ಹೋದ ರಾವಣನು ನಡೆಯಬೇಕಾಗಿರುವ ವಿಷಯಗಳನ್ನು ಮೊದಲೇ ಹೇಳಿ ರಾಮನು ನನ್ನ ಕಾರಣದಿಂದ ಇಲ್ಲಿಗೆ ಬರಬೇಕಾಗಿದೆಯೆಂದು ಸಹ ತಿಳಿಸಿದ್ದಾನೆ. ರಾವಣ ಬ್ರಹ್ಮ ತಂದೆಯಂತೆ ಮಾತನಾಡಿಸಿ ತನಗೆ ಯಾವ ತೊಂದರೆ ಇಲ್ಲದಂತೆ ನೋಡಿಕೊಂಡಿರುವುದಕ್ಕೆ ಸೀತೆ ಅಯೋಧ್ಯಕ್ಕೆ ಬಂದನಂತರವಾಗಲೀ, ಬಾರದ ಮುನ್ನವಾಗಲಿ ರಾವಣನನ್ನು ಕುರಿತು ಎಂತಹ ಆರೋಪಣೆಗಳು ಮಾಡಲಿಲ್ಲ. ಎಂದೂ ರಾವಣಬ್ರಹ್ಮನನ್ನು ಕುರಿತು ಸೀತೆ ಹೇಳಿದ ಆಧಾರವಿಲ್ಲ. ಸುಮಾರು ಹತ್ತು ತಿಂಗಳ ಕಾಲ ರಾವಣನ ಆಧ್ವರ್ಯದಲ್ಲಿದ್ದ ಸೀತೆ, ಅಯೋಧ್ಯಕ್ಕೆ ಬಂದ ನಂತರ ಎಷ್ಟೋ ಕಷ್ಟಗಳನ್ನು ರಾಮನಿಂದ ಎದುರಿಸಿದ್ದಾಳೆ. ಕೊನೆಗೆ ಗರ್ಭಿಣಿಯಾಗಿದ್ದ ಸೀತೆ ಅರಣ್ಯದಲ್ಲಿ ಅನೇಕ ಬಾಧೆಗಳು ಪಡಬೇಕಾಗಿ ಬಂದಿದೆ. ಸುಮಾರು ಹನ್ನೊಂದು ವರ್ಷಗಳು ವಾಲ್ಮೀಕಿ ಆಶ್ರಮದಲ್ಲಿದ್ದ ಯಾವ ಸೌಕರ್ಯಗಳಿಲ್ಲದ ಕುಟೀರಗಳಲ್ಲಿ ಅನೇಕ ಬಾಧೆಗಳು ಪಟ್ಟಿದ್ದಾಳೆ. ಹತ್ತು ತಿಂಗಳುಗಳು ರಾವಣ ಕಾಲದಲ್ಲಿ ಲಂಕೆಯಲ್ಲಿರುವಾಗಲೇ ಯಾವ ಕಷ್ಟ ಇಲ್ಲದಂತೆ ನಡೆದದ್ದನ್ನು ಎಷ್ಟೋ ಬಾರಿ ಅಂದುಕೊಂಡಿದ್ದಾಳೆ. ಸೀತೆ ಎಂದಿಗೂ ರಾವಣನು ಕೆಟ್ಟವನೆಂದು ಹೇಳದೇ ಹೋದರೂ, ರಾಮಾಯಣವನ್ನು ಬರೆದವರು

ಆರ್ಯರಾಗಿರುವುದರಿಂದ, ರಾವಣಬ್ರಹ್ಮನನ್ನು ದುಷ್ಟನಾಗಿ ಚಿತ್ರಿಸಿ ತೋರಿಸಿದ್ದಾರೆ. ಅಷ್ಟೇ ಹೊರತು ರಾವಣನು ಯಾವ ಮಚ್ಚೆ ಇಲ್ಲದ ಜೀವನವನ್ನು ಕಳೆದ ಬ್ರಹ್ಮಜ್ಞಾನಿ.

ದೈವಜ್ಞಾನವನ್ನು ಸಂಪೂರ್ಣವಾಗಿ ತಿಳಿದು ಯೋಗಿಯಾಗಿದ್ದ ರಾವಣಬ್ರಹ್ಮನನ್ನು ಆರ್ಯರು ರಾಕ್ಷಸ ಜಾತಿ ರಾಜನಾಗಿ ವರ್ಣಿಸಿ ಹೇಳಿದ್ದಾರೆ. ಲಂಕೆಯಲ್ಲಾಗಲೀ, ಲಂಕೆ ಪರಿಸರ ಪ್ರಾಂತಗಳಲ್ಲಾಗಲೀ, ಲಂಕಾ ರಾಜ್ಯದಲ್ಲಿ ಎಲ್ಲಾಗಲೀ, ರಾಕ್ಷಸ ಸ್ವಭಾವವಿರುವ ಮನುಷ್ಯರು ಇಲ್ಲವೇ ಇಲ್ಲ. ಶ್ರೀಲಂಕೆಯಲ್ಲಿರುವವರೆಲ್ಲರೂ ದೈವಜ್ಞಾನವನ್ನು ತಿಳಿದವರೇ ಆಗಲಿ, ದೈವ ಜ್ಞಾನವಿಲ್ಲದ ರಾಕ್ಷಸ ಸ್ವಭಾವವಿರುವವರು ಯಾರೂ ಇಲ್ಲ. ಅಲ್ಲಿರುವ ವರೆಲ್ಲರೂ ಜ್ಞಾನಿಗಳಾಗಿರುವುದರಿಂದ ಆ ದೇಶಕ್ಕೆ 'ಶ್ರೀ' ಅನ್ನುವ ಶುಭಕರವಾದ ಅಕ್ಷರವನ್ನು ಸೇರಿಸಿ, ಶ್ರೀಲಂಕ ಎಂದು ಕರೆಯುತ್ತಿದ್ದೇವೆ. ಶ್ರೀ ಅನ್ನುವ ಶಬ್ಧ ಪ್ರಪಂಚದಲ್ಲಿ ಯಾವ ದೇಶಕ್ಕೂ ಇಲ್ಲವೆಂದು ಎಲ್ಲರೂ ಗಮನಿಸಬೇಕು. ಶ್ರೀಲಂಕೆಯಲ್ಲಿ ರಾವಣನು ಪ್ರಪಂಚಕ್ಕೆಲ್ಲಾ ದೊಡ್ಡ ಯೋಗಿಯಾಗಿ ಇರುವುದರಿಂದ, ಬ್ರಹ್ಮ ಅನ್ನುವ ಹೆಸರನ್ನು ಆತನಿಗೆ ಹೇಳುವುದು ನಡೆದಿದೆ. ಬ್ರಹ್ಮ ಅನ್ನುವ ಶಬ್ದ ಬಿರುದಾಂಕಿತನಾದವನನ್ನು ಆರ್ಯರು ತಮ್ಮ ಶತ್ರುವೆನ್ನುವ ಉದ್ದೇಶದಿಂದ, ಅದೇ ಕೆಲಸದಂತೆ ದುಷ್ಟನಾಗಿ ಚಿತ್ರಿಸಿದರೆ, ನಾವು ವಿಚಕ್ಷಣೆ ಇಲ್ಲದೆ ಕುರುಡಾಗಿ ಅವರಮಾತನ್ನು ಕೇಳಬೇಕಾದ ಕೆಲಸ ಏನಿದೆಯೆಂದು? ಕೇಳುತ್ತಿದ್ದೇನೆ.

ಆದಿನ ಲಂಕೆಯಲ್ಲಿರುವವರೆಲ್ಲರನ್ನೂ ರಾಕ್ಷಸರೆಂದು, ರಾವಣನು ಸಹ ರಾಕ್ಷಸನೇ ಎಂದು ಹೇಳಿದವರು, ಉತ್ತರ ಭಾರತದೇಶದಲ್ಲಿ ಹುಟ್ಟಿದವರನ್ನು ದೇವತೆಗಳಾಗಿ ಹೇಳಿಕೊಳ್ಳುವುದು ನಡೆದಿದೆ. ದಕ್ಷಿಣ ಭಾರತದೇಶದಲ್ಲಿ ಸ್ವಲ್ಪ ಭಾಗವನ್ನು ತಮ್ಮ ಅಧೀನದೊಳಗೆ ತಂದುಕೊಂಡ ಆರ್ಯರು ಪೂರ್ತಿಯಾಗಿ ಆಕ್ರಮಿಸಿಕೊಳ್ಳಲಾರದೆ ಹೋಗಿದ್ದಾರೆ. ಅಂತಹ ಸ್ಥಳಗಳು ದ್ರಾವಿಡ ರಾಜ್ಯವಾಗಿಯೇ ಇಂದಿಗೂ ಕರೆಯಲಾಗುತ್ತಿವೆ. ತಮಗೆ ವಶವಾಗದ ಚೆನ್ನೈ ಮೊದಲಾದ ಪ್ರಾಂತದವರಿಗೆ (ತಮಿಳನಾಡು ಅವರಿಗೆ) ಇಂದಿಗೂ ದ್ರಾವಿಡರನ್ನುವ ಹೆಸರು

ಇದೆ. ಲಂಕೆಗೆ ಸಮೀಪದಲ್ಲಿರುವ ಪ್ರಜೆಗಳೆಲ್ಲರೂ ಸ್ವಲ್ಪ ದೈವಜ್ಞಾನವನ್ನು ಹೊಂದಿ, ಸಾಂಪ್ರದಾಯಬದ್ಧವಾದ ದೇವಾಲಯಗಳನ್ನು ನಿರ್ಮಿಸಿಕೊಂಡು, ಪೂರ್ತಿ ದ್ರಾವಿಡರಾಗಿಯೇ ಇರುತ್ತಿದ್ದರು. ಅಂಥವರನ್ನು ಆರ್ಯರು ರಾಕ್ಷಸರೆಂದು ಹೇಳುವುದು ನಡೆದಿದೆ. ಹಾಗೇ ಪೂರ್ವ ಪರ್ವತಗಳೆಂದು ಹೆಸರುಹೊಂದಿದ ಸುದೂರವಾಗಿ ವ್ಯಾಪಿಸಿರುವ ನಲ್ಲಮಲ ಅಡವಿಗಳಲ್ಲಿ ನಿವಾಸಿಸುವ ಪ್ರಜೆಗಳನ್ನು ಮನುಷ್ಯ ಜಾತಿಯೇ ಅಲ್ಲ ಎನ್ನುವ ಹಾಗೆ ಅವರನ್ನು ಕೋತಿಗಳೆಂದು ಹೇಳಿದ್ದಾರೆ. ಶ್ರೀರಾಮನು ಸೀತೆಯನ್ನು ಹುಡುಕುತ್ತಾ ನಲ್ಲಮಲ ಅಡವಿಗಳೊಳಗೆ ಬಂದಾಗ ಅಲ್ಲಿ ಕಿಷ್ಕಿಂದ ಅನ್ನುವ ಅರಣ್ಯ ಪ್ರಾಂತಗಳಲ್ಲಿ ವಾಲಿ, ಸುಗ್ರೀವರು ಎನ್ನುವ ಗುಡ್ಡದ ರಾಜರು ಕಂಡಿದ್ದಾರೆ. ಆಗ ಶ್ರೀರಾಮನು ಅವರೊಂದಿಗೆ ಪರಿಚಯ ಏರ್ಪಡಿಸಿಕೊಂಡು ಅವರ ಸಹಾಯದಿಂದ ಸೀತೆಯನ್ನು ಹುಡುಕುವುದು, ಅವರ ಸಹಾಯದಿಂದಲೇ ಲಂಕೆಗೆಹೋಗಿ ಸೀತೆಯನ್ನು ತಂದುಕೊಳ್ಳುವುದು ನಡೆದಿದೆ. ಆ ದಿನ ಗುಡ್ಡದ ರಾಜರಾಗಿ ಇದ್ದು ಅಡವಿ ಪ್ರಾಂತವನ್ನು ಪಾಲಿಸುವ ವಾಲಿಯನ್ನು, ಸುಗ್ರೀವನನ್ನು, ಅವರ ಅನುಚರನು ಸೇನಾಧಿಪತಿಯಾದ ಹನುಮಂತನನ್ನು, ಮಂತ್ರಿಯಾಗಿದ್ದ ವೃದ್ಧನಾದ ಜಾಂಬವಂತನನ್ನು ಜಂತುಗಳಾಗಿ ಹೋಲಿಸಿ ಆರ್ಯರು ಹೇಳಿದ್ದಾರೆಂದರೆ ದ್ರಾವಿಡರ ಮೇಲೆ ಅವರಿಗೆ ಎಷ್ಟು ಅಸೂಯೆ ಇದೆಯೋ ಹೀಗೇ ಅರ್ಥವಾಗುತ್ತದೆ. ಅಡವಿ ಪ್ರಾಂತದಲ್ಲಿ ಶ್ರೀರಾಮನಿಗೆ ಎಷ್ಟೋ ಸಹಾಯಮಾಡಿದವರನ್ನು ಸಹಿತ ಬಿಡದೆ ಜಾಂಬ ವಂತನನ್ನು ಭಲ್ಲೂಕವೆಂದೂ, ವಾಲಿ, ಸುಗ್ರೀವರನ್ನು, ಆಂಜನೇಯನನ್ನು ಅಲ್ಲಿರುವ ಗಿರಿಜನ ಪ್ರಜೆಗಳೆಲ್ಲರನ್ನೂ ಕೋತಿಗಳಾಗಿ ಹೇಳುವುದು ನಡೆದಿದೆ. ಪೂರ್ವ ಪರ್ವತಗಳಲ್ಲಿರುವವರೆಲ್ಲರೂ ಕೋತಿಗಳೆಂದು ಹೇಳಿ, ಅಂತಹ ಕೋತಿಗಳಲ್ಲಿ ಸೇನಾಧಿಪತಿಯಾದ ಹನುಮಂತನೆನ್ನುವ ಕೋತಿ ಲಂಕವರೆಗು ಸಮುದ್ರವನ್ನು ಹಾರಿದೆ ಎಂದು ಹೇಳುವುದು ವಿಚಿತ್ರವಲ್ಲವೆ? ಅವರು ಹೇಗಾದರೂ ಹೇಳಬಲ್ಲರು. ಅವರಿಗೆ ದ್ರಾವಿಡರ ಮೇಲೆ ಇರುವ ಕೋಪ, ಅಸೂಯೆ ಅಂತಹವು. ಆದರೆ ಆ ಮಾತುಗಳನ್ನು ಕೇಳಿ ತಲೆ ಅಲ್ಲಾಡಿಸುವವರನ್ನು ಏನನ್ನಬೇಕು? ಕನಿಷ್ಟ

ಅವರು ಹೇಳಿದ ವಿಷಯವನ್ನು ಕುರಿತು ಸಣ್ಣ ಪ್ರಶ್ನೆಯಾದರೂ ತಿರುಗಿ ಕೇಳದಂತೆ ಕುರುಡರಂತೆ ಕೇಳಿ ತಲೆ ಅಲ್ಲಾಡಿಸುವುದರಿಂದ ನಮ್ಮ ವಿಚಕ್ಷಣಾ ಜ್ಞಾನ ಏನಾದಹಾಗೆ ಎಂದು ಯಾರಿಗೂ ಅನಿಸುತ್ತಿಲ್ಲವೆ?

ಎಲ್ಲಾದರೂ ಭೂಮಿಮೇಲೆ ಮಾತನಾಡುವ ಕೋತಿಗಳು ಇರುವುದು ನಡೆದ ಕೆಲಸವೇನಾ, ಅದೂ ನಲ್ಲಮಲ ಅಡವಿಗಳಲ್ಲಿ ಇಂದಿಗೂ ಗಿರಿಜನರಾದ ಗುಡ್ಡದ ರಾಜರು ಗುಡ್ಡದ ಸಂಚರು ಅಲ್ಲಲ್ಲಿ ನಿವಾಸಿಸುತ್ತಿದ್ದಾರೆ. ಒಂದುವೇಳೆ ಗಿರಿಜನರು ಅಂದವಾಗಿ ಇಲ್ಲದೆ ಹೋಗಿರಬಹುದು, ಅಷ್ಟುಮಾತ್ರಕ್ಕೆ ಅವರು ಕೋತಿಗಳು ಅಲ್ಲವಲ್ಲ! ಆದಿನ ಉತ್ತರದೇಶದವನಾದ ಅಯೋಧ್ಯ ರಾಮನನ್ನು ದೇವರು ಎಂದು ಅಂದಿದ್ದಾರೆ. ಅದೇ ದೇವರನ್ನು ದೊಡ್ಡದಾಗಿ ಇಟ್ಟುಕೊಂಡು ಭಕ್ತಿಯಿಂದಿರುವ ಕಾಡಿನ ಮಗನಾದ ಆಂಜನೇಯನನ್ನು ಕೋತಿ ಎಂದು ಹೇಳಿದ್ದಾರೆ. ಅಷ್ಟೇ ಅಲ್ಲದೆ ಆ ಕೋತಿಗೆ ಬಾಲವೂ ಸಹ ಇದೆಯೆಂದು ಎಲ್ಲರು ನಂಬುವಹಾಗೆ ಹೇಳುತ್ತಾ, ಲಂಕೆಯಲ್ಲಿ ರಾವಣ ಸೈನ್ಯ ಆಂಜನೇಯನ ಬಾಲಕ್ಕೆ ಬೆಂಕಿ ಹಚ್ಚಿದಾಗ, ಆಂಜನೇಯನು ಉರಿಯುತ್ತಿರುವ ತನ್ನ ಬಾಲದಿಂದ ಲಂಕಾರಾಜ್ಯದಲ್ಲಿ ಸ್ವಲ್ಪ ಹಚ್ಚಿ ಸುಟ್ಟುಹಾಕಿದ್ದಾನೆಂದು ಹೇಳುತ್ತಿರುವರು. ಈ ವಿಧವಾಗಿ ಆರ್ಯರು ತಮ್ಮ ಇಷ್ಟ ಬಂದಹಾಗೆ ಲಂಕೆಯಲ್ಲಿನವರಿಗೆ ಕೋಡುಗಳು ಕೋರೆಗಳಿರುವ ರಾಕ್ಷಸರಾಗಿ ವರ್ಣಿಸಿ, ಪೂರ್ವ ಪರ್ವತಗಳು ಎಂದು ಹೆಸರುವಾಸಿಯಾದ ಅಡವಿಗಳಲ್ಲಿ ನಿವಾಸಿಸುವವರನ್ನು ಕೋತಿಗಳಾಗಿ ಮಾಡಿ ಹೇಳಿದ್ದಾರೆ. ಮಾತನಾಡುವ ಕೋತಿಗಳು ಇಲ್ಲಿಯವರೆಗೂ ಭೂಮಿ ಮೇಲೆ ಹುಟ್ಟಲಿಲ್ಲ. ಆದ್ದರಿಂದ ಆರ್ಯರು ಹೇಳಿದ ಮಾತುಗಳನ್ನು ನಂಬಬೇಕಾದ ಕೆಲಸವಿಲ್ಲ. ನನಗಿರುವ ವಿಚಕ್ಷಣಾ ಜ್ಞಾನದಿಂದ ನೋಡಿದರೆ ಲಂಕೆಯಲ್ಲಿರುವವರು ರಾಕ್ಷಸರಲ್ಲ, ಲಂಕೆ ಸಮೀಪ ಅಡವಿಗಳಲ್ಲಿರುವವರು ಕೋತಿಗಳಲ್ಲವೆಂದು ತಿಳಿಯಬೇಕು. ಆರ್ಯರು ತಮ್ಮನ್ನು ತಾವು ದೇವತೆಗಳಾಗಿ ಹೇಳಿಕೊಂಡು, ದಕ್ಷಿಣ ದೇಶದವರನ್ನು ರಾಕ್ಷಸರಾಗಿ ಹೇಳಿದ್ದಾರೆ. ಅದಾದರೂ ಒಂದು ವಿಧವಾಗಿ ಸ್ವಲ್ಪ ಮರ್ಯಾದೆಯಿಂದಿದ್ದರೂ, ದಕ್ಷಿಣ ಭಾರತದೇಶ ಅಡವಿಗಳಲ್ಲಿ ನಿವಾಸಿಸುವ

ವರನ್ನು ಕೋತಿಗಳೆನ್ನುವುದು ಪೂರ್ತಿ ಅಸೂಯದಿಂದ ಮಾತನಾಡುವುದೇ ಎಂದು ನಮಗೇ ಅಲ್ಲ, ನಿಮಗೂ ಸಹ ಚೆನ್ನಾಗಿ ಅರ್ಥವಾಗಬಲ್ಲದು. ಸೀತೆ ಲಂಕೆಯಲ್ಲಿರುವ ವಿಷಯವನ್ನು ಕಂಡುಹಿಡಿದು ತಿಳಿಸಿದ ಆಂಜನೇಯನು ಕೋತಿಯಾದರೆ, ಕೋತಿಗಳ ಸಹಾಯ ವಿನಃ ಮನುಷ್ಯರ ಸಹಾಯ ಸಿಗದವನು ರಾಮನೆಂದು ಅವರೇ ಹೇಳಿದಂತಿದೆ. ಮನುಷ್ಯರು ಯಾರೂ ಸಹಾಯ ಮಾಡಲಿಲ್ಲವೆಂದರೆ ಆಗ ಮನುಷ್ಯರಲ್ಲಿ ಶ್ರೀರಾಮನಿಗೆ ಸ್ವಲ್ಪವೂ ಸಹ ಮರ್ಯಾದೆ ಇಲ್ಲವೆಂದು, ಗೌರವ ಇಲ್ಲವೆಂದು ತಿಳಿಯುತ್ತಿದೆ.

ಶ್ರೀರಾಮನು ಸೀತೆಗೋಸ್ಕರ ಹುಡುಕುತ್ತಾ ವಿಂಧ್ಯ ಪರ್ವತ ಅಡವಿ ಗಳಿಂದ ಪೂರ್ತಿ ದಕ್ಷಿಣ ದೇಶಕ್ಕೆ ಬಂದಿದ್ದಾನೆ. ದಕ್ಷಿಣ ದೇಶದಲ್ಲಿರುವ ವರೆಲ್ಲರೂ ದ್ರಾವಿಡರೇ ಆದ್ದರಿಂದ ಅವರು ಯಾರು ರಾಮನನ್ನು ಕುರಿತು ಕಾಳಜಿವಹಿಸಲಿಲ್ಲ. ರಾಮನು ಆರ್ಯನೆಂದು ತಿಳಿದು, ರಾವಣ ಬ್ರಹ್ಮನ ಮೇಲೆ ಗೌರವವಿರುವ ದ್ರಾವಿಡರೆಲ್ಲರೂ ರಾಮನನ್ನು ಗೌರವಿಸಬೇಕೆಂದಾಗಲೀ, ಸಹಾಯ ಮಾಡಬೇ ಕೆಂದಾಗಲೀ ಯಾರು ಅಂದುಕೊಂಡಿಲ್ಲ. ಕೊನೆಗೆ ನಲ್ಲಮಲ ಅಡವಿಗಳಲ್ಲಿ ಪ್ರವೇಶಿಸಿದ ನಂತರ ಕಿಷ್ಕಿಂಥ ಪರ್ವತ ಪಾಂತಗಳಲ್ಲಿರುವ ಗಿರಿಜನರು, ಅವರನ್ನು ಪಾಲಿಸುವ ಗುಡ್ಡದ ರಾಜರಾದ ವಾಲಿ ಸುಗ್ರೀವರು ಪರಿಚಯವಾದರು. ಅವರೂ ಸಹ ದ್ರಾವಿಡರೇ ಆದರೂ ಅವರು ಅಡವಿಯಲ್ಲಿರುವುದರಿಂದ, ಆರ್ಯರ ವಿಷಯ ಅವರಿಗೆ ಸರಿಯಾಗಿ ತಿಳಿಯದೆ ಇರುವುದರಿಂದ, ಅಡವಿಯೊಳಗೆ ಬಂದಿರುವವರನ್ನು ರಕ್ಷಿಸುವ ಸ್ವಭಾವವಿರುವುದರಿಂದ, ರಾಮನಿಗೆ ಅವರು ಸಹಾಯ ಮಾಡುವುದಕ್ಕೆ ಮುಂದಾದರು. ಅವರು ಎಷ್ಟೋ ದೊಡ್ಡ ಮನಸ್ಸಿನಿಂದ ರಾಮನಿಗೆ ಸಹಾಯದಿಂದಿದ್ದು, ಅರ್ಧಕಿಲೋಮೀಟರ್ ಸಮುದ್ರವನ್ನು ದಾಟಿ ಲಂಕೆವರೆಗು ಹೋಗಿ ರಾವಣ ಸೈನ್ಯದಿಂದ ಯುದ್ಧವನ್ನು ಮಾಡಿ, ಕೊನೆಗೆ ರಾಮನಿಗೆ ವಿಜಯವನ್ನು ಸಾಧಿಸಿ ಕೊಟ್ಟಿದ್ದಾರೆ. ಅಲ್ಲಿಯವರೆಗು ರಾಮನು ಲಕ್ಷ್ಮಣನು ಇಬ್ಬರು ಹೊರತು ಅವರ ಜೊತೆ ಯಾರೂ ಇಲ್ಲ. ಗುಡ್ಡದ ರಾಜರಾದ ವಾಲಿ, ಸುಗ್ರೀವರು ತಮ್ಮ ಅಧೀನದಲ್ಲಿರುವ ಜನರನ್ನು ಹಿಂದೆ ಕರೆದುಕೊಂಡು

ಬಂದು ರಾಮನಿಗೆ ಸಹಾಯ ಮಾಡಿದರೆ, ಸ್ವಲ್ಪವಾದರೂ ಅವರ ಬಗ್ಗೆ ಗೌರವ ಭಾವವಿಲ್ಲದ ಆರ್ಯರು, ಅವರನ್ನು ಬಾಲವಿರುವ ಕೋತಿಗಳಹಾಗೆ ವರ್ಣಿಸಿ ಪ್ರಜೆಗಳೆಲ್ಲರನ್ನೂ ನಂಬಿಸಿದ್ದಾರೆ.

ರಾಮನ ಭಕ್ತನು ಆಂಜನೇಯನೆಂದು ರಾಮನ ಗುಡಿಯಲ್ಲಿ ಕೋತಿ ಗೊಂಬೆಯನ್ನು ಆಂಜನೇಯನಾಗಿ ತೋರಿಸುವುದರಿಂದ, ಅದನ್ನು ನೋಡಿದ ಪ್ರಜೆಗಳೆಲ್ಲರೂ ವಾನರ ಸೈನ್ಯ ಇದ್ದಿತ್ತೇನೊಯೆಂದು ಪೂರ್ತಿಯಾಗಿ ನಂಬುವುದು ನಡೆದಿದೆ. ವಾಲಿಯನ್ನು, ಆಂಜನೇಯನನ್ನು ಅವರ ಹಿಂದಿರುವವರನ್ನು ಕೋತಿಗಳಾಗಿ ಚಿತ್ರಿಸಿರುವುದಕ್ಕೆ, ಅವರೇ ಸಜೀವವಾಗಿ ಈದಿನ ಇದ್ದರೆ ನಾವು ಕೋತಿಗಳಾ ಎಂದು ನಿಲ್ಲಿಸಿ ಕೇಳುತ್ತಿದ್ದರು. ಪ್ರಸ್ತುತಕ್ಕೆ ಆಂಜನೇಯನೂ ಇಲ್ಲ, ರಾಮನೂ ಇಲ್ಲ ಆದ್ದರಿಂದ ಏನು ಹೇಳಿದರೂ ಸರಿಹೋಗುತ್ತದೆನ್ನುವ ಭಾವದಿಂದ ಇಷ್ಟ ಬಂದಹಾಗೆ ಆರ್ಯರು ಬರೆಯುವುದು ನಡೆದಿದೆ. ಪೂರ್ವ ಪರ್ವತಗಳಲ್ಲಿ ನಿವಾಸಿಸುವವರು ದ್ರಾವಿಡ ಜಾತಿಯೆಂಬ ಒಂದು ಕಾರಣದಿಂದಲೇ ಅಡವಿಯಲ್ಲಿರುವವರನ್ನು ಕೋತಿಗಳಾಗಿ, ಊರಲ್ಲಿರುವವರನ್ನು ರಾಕ್ಷಸರಾಗಿ ಪ್ರಚಾರ ಮಾಡಿದ್ದಾರೆ. ಅಂದಿನ ರಾಕ್ಷಸರಿಗೆ ಕೋಡುಗಳು ಕೋರೆಗಳು ಇರುವಹಾಗೆ, ಕೋತಿಗಳಾಗಿ ಇರುವವರಿಗೆ ಉದ್ದವಾದ ಬಾಲಗಳಿರುವಹಾಗೆ ಹೇಳುವುದು ನಡೆದಿದೆ. ವಾಸ್ತವಕ್ಕೆ ಆರ್ಯರು ಹೇಳಿದಹಾಗೆ ಆ ದಿನಗಳಲ್ಲಿ ರಾಕ್ಷಸರಾಗಿ ಚಿತ್ರಿಸಿದ ದ್ರಾವಿಡರಿಗೆ ಕೋಡುಗಳು ಕೋರೆಗಳು ಇಲ್ಲ, ಕೋತಿಗಳಾಗಿ ಚಿತ್ರಿಸಿ ಹೇಳಿದವರಿಗೆ ಬಾಲಗಳಿಲ್ಲ. ಆದಿನ ಅವರು ನಮ್ಮಂತೆ ಮನುಷ್ಯರ ಹಾಗೇ ಇರುತ್ತಿದ್ದರು. ನಮ್ಮ ಹಾಗೇ ಮಾತನಾಡುತ್ತಿದ್ದರು. ದ್ರಾವಿಡರನ್ನು ಕುರಿತು ಆರ್ಯರು ಅವರ ಇಷ್ಟ ಬಂದಹಾಗೆ ಕೆಟ್ಟದಾಗಿ ಹೇಳಬೇಕೆಂದೇ ಹೇಳಿದ್ದಾರೆ. ಆದರೇ ಅದನ್ನು ಕೇಳಿದ ನಾವು ಸ್ವಲ್ಪವಾದರೂ ಆಲೋಚಿಸದೆ ಹೋಗುವುದು, ಇದು ಸತ್ಯವಾ, ಅಸತ್ಯವಾ ಎಂದು ಲೆಕ್ಕಿಸಿ ನೋಡಲಾರದೆ ಹೋಗುವುದು ನಮ್ಮ ತಪ್ಪೇ ಎಂದು ಹೇಳಬೇಕು.

ಪೂರ್ವ ಕಾಲದಲ್ಲಿ ಹನುಮಂತನು ಅಥವಾ ಆಂಜನೇಯನೆನ್ನುವ ವ್ಯಕ್ತಿ ಕೋತಿ ಆಕಾರದಲ್ಲಿರುವ ಬಲಾಢ್ಯನು ಎಂದೂ, ಆತನು ಪೂರ್ತಿಯಾಗಿ ರಾಮನ ಭಕ್ತನೆಂದೂ ಹೇಳುವುದಲ್ಲದೇ, ರಾಮನ ಗುಡಿಯಲ್ಲಿ ರಾಮನ ಪಾದಗಳ ಹತ್ತಿರ ದಾಸನಾಗಿ ಆಂಜನೇಯನನ್ನು ಇಡುವುದು ನಡೆದಿದೆ. ಮೊದಲು ಆರ್ಯರು ರಾಮನ ಗುಡಿಯನ್ನೇ ಕಟ್ಟಿಸಿ ಅದರಲ್ಲಿ ರಾಮನನ್ನು ಪ್ರತಿಷ್ಠಿಸಿ ರಾಮನ ವಿಗ್ರಹದ ಕಾಲಿನ ಹತ್ತಿರ ಆಂಜನೇಯನ ಪ್ರತಿಮೆಯನ್ನು ಇಡುತ್ತಿದ್ದರು. ಅದರಿಂದ ರಾಮನ ಭಕ್ತನು ಆಂಜನೇಯನೆಂದು ಎಲ್ಲರೂ ಅಂದುಕೊಳ್ಳುವುದು ನಡೆದಿದೆ. ಆದರೇ ಆ ವಿಧವಾಗಿ ಪ್ರತಿಷ್ಠಿಸಿದ ಆರ್ಯರ ಉದ್ದೇಶ ರಾಮನ ಭಕ್ತನು ಆಂಜನೇಯನೆಂದೇ ಅಲ್ಲದೆ, ಆರ್ಯರ ಪಾದಗಳ ಹತ್ತಿರ ದ್ರಾವಿಡರು ಇರಬೇಕಾಗಿರುವುದೇ ಎಂದು ತೋರಿಸುವುದು ಅವರ ಮುಖ್ಯ ಉದ್ದೇಶವಾಗಿ ಇರುತ್ತಿತ್ತು. ಆ ಉದ್ದೇಶವನ್ನು ತಿಳಿಸುವ ಸಲುವಾಗಿ ರಾಮನ ಗುಡಿಯನ್ನು ಪ್ರತಿ ಊರಿನಲ್ಲೂ ಪ್ರತಿಷ್ಠಿಸಿದ್ದಾರೆ. ಎಲ್ಲಾದರೂ ಹೊಸದಾಗಿ ಊರು ಕಟ್ಟಿಕೊಂಡರೆ ಅಲ್ಲಿ ರಾಮನ ಗುಡಿಯನ್ನು ಊರಿನೊಂದಿಗೆ ಕಟ್ಟಿಕೊಳ್ಳಬೇಕೆನ್ನುವ ನಿಯಮವನ್ನು ಸಹ ಆರ್ಯರೇ ಪ್ರಚಾರ ಮಾಡಿದ್ದಾರೆ. ಆದ್ದರಿಂದ ಪ್ರತಿ ಊರಲ್ಲೂ ರಾಮನ ಗುಡಿ ತಪ್ಪದೇ ಇರುವಹಾಗೆ, ಊರಿನ ಹಿರಿಯರು ನಿರ್ಣಯಿಸಿಕೊಳ್ಳುವುದು ನಡೆಯುತ್ತಿದೆ. ರಾಮನ ಗುಡಿ ಇಲ್ಲದ ಊರು ಊರೇ ಅಲ್ಲ, ಸ್ಮಶಾನದೊಂದಿಗೆ ಸಮಾನವೆಂದು ಪ್ರಚಾರ ಮಾಡಿದ್ದಾರೆ. ಆದ್ದರಿಂದ ಚಿಕ್ಕ ಹಳ್ಳಿಯಲ್ಲಿ ಸಹ ಇಂದಿಗೂ ಚಿಕ್ಕ ರಾಮನ ಗುಡಿಯಾದರೂ ಇರುತ್ತದೆ. ಆರ್ಯರು ಆ ವಿಧವಾಗಿಯೇ ಹೇಳಿದ್ದಾರೆ ಮಾಡಿಸಿದ್ದಾರೆ. ಈಗ ಪ್ರಸ್ತುತ ನೂರು ವರ್ಷಗಳಿಂದ ಆಂಜನೇಯನ ಗುಡಿಯನ್ನು ಸಹ ಕಟ್ಟುತ್ತಿದ್ದಾರೆ. ಆಂಜನೇಯನ ಗುಡಿಯಲ್ಲಿ ಆಂಜನೇಯನು ಒಬ್ಬನೇ ಇರುತ್ತಾನೆ. ಆದ್ದರಿಂದ ಆಂಜನೇಯನಿಗೆ ಮಾತ್ರ ಗುಡಿ ಕಟ್ಟಬಾರದೆಂದು ಅರ್ಯರು ನಿರ್ಣಯಿಸಿದ್ದಾರೆ. ಆದರೆ ಆ ವಿಷಯ ಎಲ್ಲರಿಗೂ ತಿಳಿಯದು ಆದ್ದರಿಂದ ಈ ಮಧ್ಯ ಕಾಲದಲ್ಲಿ ಪ್ರತ್ಯೇಕಿಸಿ ಆಂಜನೇಯನ ಗುಡಿಗಳು ಸಹ ತಯಾರಾಗುತ್ತಿವೆ. ಅದರೆ ಆಂಜನೇಯನ ಗುಡಿಯಲ್ಲಿನ

ಪ್ರತಿಮೆಗೆ ಕೋತಿಮೂತಿ ಇಡುವುದು, ಬಾಲ ಇಡುವುದು ನಿಜವಾಗಿ ಆದಿನದ ಆಂಜನೇಯನೇ ಬಂದು ನೋಡಿದರೆ, ಆ ವಿಧವಾಗಿ ಆತನ ರೂಪವನ್ನು ತಯಾರು ಮಾಡಿರುವುದಕ್ಕೆ ಮಾಡಿದವನನ್ನು ಸುಮ್ಮನೆ ಬಿಡುವುದಿಲ್ಲ.

ವಾಸ್ತವವಾಗಿ ಆಂಜನೇಯನು ದೃಢ ಶರೀರವಿರುವ ಅಂದವಾದ ಮನುಷ್ಯ. ಸೀತೆವರೆಗು ಹೋಗಿ ಶ್ರೀರಾಮನ ಸಮಾಚಾರವನ್ನು ಮೊದಲು ಸೀತೆಗೆ ತಿಳಿಸಿದವನು. ಹಾಗೇ ಲಂಕೆಯಲ್ಲಿ ಸೀತೆ ಸಮಾಚಾರವನ್ನು ಶ್ರೀರಾಮನಿಗೆ ಮೊದಲು ತಿಳಿಸಿದವನು ಆಂಜನೇಯನು. ಸೀತೆ ಸಮಾಚಾರವನ್ನು ರಾಮನ ವರೆಗು ತಂದ ವ್ಯಕ್ತಿ ಆಂಜನೇಯನಾಗಿರುವಾಗ, ಆತನಿಗೆ ಎಂತಹ ಗೌರವಪ್ರಧಾನವಾದ ಸ್ಥಾನವನ್ನಾದರೂ ಕೊಡಬಹುದು. ಆದರೆ ಆರ್ಯರು ಆಂಜನೇಯನು ದ್ರಾವಿಡ ಜಾತಿಯವನೆನ್ನುವ ಉದ್ದೇಶದಿಂದ ದ್ರಾವಿಡರನ್ನು ಎಂದಿಗೂ ಆರ್ಯರ ಕಾಲುಗಳ ಹತ್ತಿರ ಇರಬೇಕಾಗಿರುವುದೇ ಎನ್ನುವ ಭಾವವನ್ನು ತಿಳಿಸುವಹಾಗೆ ರಾಮನ ಕಾಲುಗಳ ಹತ್ತಿರ ಆಂಜನೇಯನನ್ನು ಕೂರಿಸಿದ್ದಾರೆ. ಆ ದೃಶ್ಯವನ್ನು ನೋಡಿದ ಈಗಿನ ಕಾಲದ ಪ್ರಜೆಗಳೆಲ್ಲರೂ ಆಂಜನೇಯನು ರಾಮನ ಭಕ್ತನೆಂದು ಅಂದುಕೊಳ್ಳುವುದು ನಡೆದಿದೆ. ಸರಿ ಆ ವಿಧವಾಗಿ ಆಂಜನೇಯನು ತನ್ನ ಭಕ್ತಿಯನ್ನು ತೋರಿಸಿಕೊಳ್ಳುವುದಕ್ಕೆ ರಾಮನ ಪಾದಗಳ ಹತ್ತಿರ ಕುಳಿತುಕೊಂಡಿದ್ದಾನೆನ್ನುವುದಕ್ಕೆ ರಾಮನು ಆಂಜನೇಯನನ್ನು ತನ್ನ ಭಕ್ತನಾಗಿ ಯಾವಾಗ ಬದಲಾಯಿಸಿಕೊಂಡಿದ್ದಾನೆನ್ನುವ ಪ್ರಶ್ನೆಗಾಗಲೀ ಅಥವಾ ಆಂಜನೇಯನೇ ರಾಮನ ಭಕ್ತನಾಗಿ ಯಾವಾಗ ಬದಲಾಗಿದ್ದಾನೆಂದು ಕೇಳಿದ ಪ್ರಶ್ನೆಗಾಗಲಿ ಉತ್ತರ ಯಾರ ಹತ್ತಿರ ಇಲ್ಲ. ವಾಸ್ತವವಾಗಿ ಆಂಜನೇಯನಿಗೆ ಶ್ರೀ ರಾಮನ ಮೇಲೆ ಭಕ್ತಿ ಭಾವ ಏರ್ಪಡುವುದಕ್ಕೆ ಸಮಯವೂ ಇಲ್ಲ, ಅವಕಾಶವೂ ಬರಲಿಲ್ಲ. ಗಿರಿಜನ ಪುತ್ರರಾದ ವಾಲಿ, ಸುಗ್ರೀವರೆನ್ನುವ ಇಬ್ಬರು ಅಣ್ಣತಮ್ಮಂದಿರು, ಪೂರ್ವ ಪರ್ವತಗಳ ಅಡವಿಗಳಲ್ಲಿರುವ ಗಿರಿಜನ ಪ್ರಜೆಗಳಿಗೆ ರಾಜರಾಗಿ ಇರುವ ಕಾಲದಲ್ಲಿ ರಾಮನು, ಲಕ್ಷ್ಮಣನು ಇಬ್ಬರೂ ಅಡವಿಯೊಳಗೆ ಪ್ರವೇಶಿಸಿ ಸೀತೆಯನ್ನು ಹುಡುಕುತ್ತಾ ಆ ಪ್ರಾಂತದಲ್ಲಿರುವ ಗಿರಿಜನರೆಲ್ಲರಿಗೂ ಸೀತೆಯನ್ನು

ಕುರಿತು ವಿಚಾರಿಸುತ್ತಾ ಹೋಗುತ್ತಿದ್ದರು. ಆಗ ಅಲ್ಲಿನ ಗಿರಿಜನರು ಶ್ರೀರಾಮನನ್ನು ತಮ್ಮ ನಾಯಕನಾದ ಸುಗ್ರೀವನೊಂದಿಗೂ, ತಮ್ಮ ರಾಜನಾದ ವಾಲಿಯೊಂದಿಗೂ ಪರಿಚಯ ಮಾಡಿಸುವುದು ನಡೆದಿದೆ. ಶ್ರೀರಾಮನು ಮೊದಲು ಬೇಟಿಯಾದ ಸುಗ್ರೀವನೊಂದಿಗೂ, ನಂತರ ಬೇಟಿ ಮಾಡಿದ ವಾಲಿಯೊಂದಿಗೂ ಸೀತೆ ವಿಷಯವನ್ನು ತಿಳಿಸಿದ್ದಾರೆ. ಆಗ ಅವರು ಸ್ವಲ್ಪ ಕಾಲ ಇಲ್ಲೇ ಇರು ಎಂದು, ಅಷ್ಟರಲ್ಲಿ ನಮ್ಮ ಮನುಷ್ಯರೊಂದಿಗೆ ಹುಡುಕಿಸುತ್ತೇವೆಂದು, ನೀವು ಸ್ವತಹವಾಗಿ ಈ ಅಡವಿಯಲ್ಲಿ ಹುಡುಕಲಾರರೆಂದು ಹೇಳಿದ್ದಾರೆ. ಅವರು ಹೇಳಿದ ಮಾತಿಗೆ ರಾಮನು, ಲಕ್ಷ್ಮಣನು ಇಬ್ಬರೂ ಸಂತೋಷಪಟ್ಟು ಸ್ವಲ್ಪ ಕಾಲ ಅಲ್ಲೇ ಇದ್ದರು. ಸುಮಾರು ತಿಂಗಳು ಅಥವಾ ಅದಕ್ಕೂ ಹೆಚ್ಚಿನ ದಿನಗಳು ಅಲ್ಲಿದ್ದ ರಾಮನು ವಾಲಿ, ಸುಗ್ರೀವರ ಮಧ್ಯ ಇರುವ ಜಗಳವನ್ನು ಗುರುತಿಸಿ, ನನಗೆ ಸೀತೆಯನ್ನು ಹುಡುಕಿ ತಂದುಕೊಟ್ಟರೆ ನಿಮಗಿರುವ ಜಗಳವನ್ನು ಪೂರ್ತಿಯಾಗಿ ಪರಿಷ್ಕಾರ ಮಾಡುತ್ತೇನೆಂದು ಅವರಿಬ್ಬರಿಗೂ ಬಿಡಿಬಿಡಿಯಾಗಿ ಹೇಳುವುದು ನಡೆದಿದೆ.

ಗಿರಿಜನ ಪ್ರಾಂತಕ್ಕೆ ರಾಜನು ನಾನೆಂದರೆ ನಾನೆನ್ನುವ ವೈಷಮ್ಯಗಳು ಅಣ್ಣತಮ್ಮಂದಿರಾದ ವಾಲಿ, ಸುಗ್ರೀವರಲ್ಲಿ ಸ್ವಲ್ಪಕಾಲದಿಂದ ಬೆಳೆಯುತ್ತಲೇ ಇದ್ದವು. ಆದರೆ ಚರಿತ್ರೆಯಲ್ಲಿ ಆರ್ಯರು ಹಾಗೆ ಬರೆಯಲಿಲ್ಲ. ಅವರಿಬ್ಬರಿಗೂ ಒಬ್ಬಳೆ ಹೆಂಡತಿ ಇದ್ದಳೆಂದು, ಹೆಂಡತಿಗೋಸ್ಕರ ಇಬ್ಬರೂ ಹೋಡೆದಾಡುತ್ತಿದ್ದರೆಂದು ತಪ್ಪು ಸಮಾಚಾರವನ್ನು ಬರೆದಿದ್ದಾರೆ. ಹಾಗೆ ಬರೆದರೆ ಒಬ್ಬಳೇ ಹೆಂಡತಿಗೋಸ್ಕರ ಘರ್ಷಣೆ ಮಾಡುವುದು ನೀಚವಾಗಿ ಕಾಣಿಸುತ್ತದೆಂದು, ಅವರಿಗಿರುವ ಗೌರವವನ್ನು ಇಲ್ಲದಂತೆ ಮಾಡಬೇಕೆನ್ನುವ ಉದ್ದೇಶದಿಂದಲೇ ಹಾಗೆ ಬರೆಯುವುದು ನಡೆದಿದೆ. ಈ ವಿಧವಾಗಿ ಅವರ ನಡುವೆ ಇರುವ ನಾಯಕತ್ವ ಜಗಳವನ್ನು ತಮಗೆ ಅನುಕೂಲ ಮಾಡಿಕೊಂಡು, ಎರಡೂ ಕಡೆ ಸಹಾಯ ಮಾಡುತ್ತೇನೆಂದು ಇಬ್ಬರಿಗೂ ಬಿಡಿಬಿಡಿಯಾಗಿ ಒಬ್ಬರಿಗೆ ತಿಳಿಯದಂತೆ ಒಬ್ಬರಿಗೆ ರಾಮನು ಹಾಮೀ ಕೊಡುವುದು ನಡೆದಿದೆ. ರಾಮನು ಹಾಮೀ ಕೊಡುವುದರಿಂದ ವಾಲಿ, ಸುಗ್ರೀವರು ಇಬ್ಬರು ಸೀತೆ ವಿಷಯದಲ್ಲಿ ಶ್ರದ್ಧೆ ತೆಗೆದುಕೊಂಡು, ತಮಗೆ

ಈ ಸಮಸ್ಯೆ ಪರಿಷ್ಕಾರವಾದರೆ ಸೀತೆಯನ್ನು ಹುಡುಕಿ ನಿನಗೆ ಒಪ್ಪಿಸುವುದರಲ್ಲಿ ಹಿಂದೆಜ್ಜೆ ಹಾಕುವುದಿಲ್ಲವೆಂದು ಪ್ರಮಾಣ ಮಾಡಿ ಹೇಳಿದ್ದಾರೆ. ಆ ವಿಧವಾಗಿ ರಾಮನು ಬುದ್ಧಿವಂತಿಕೆಯಿಂದ ವಾಲಿ ಸುಗ್ರೀವರನ್ನು ಇಬ್ಬರನ್ನೂ ತನ್ನ ಮಾತನ್ನು ಕೇಳುವಹಾಗೆ ಮಾಡಿಕೊಂಡಿದ್ದಾನೆ.

ಶ್ರೀರಾಮನಿಗೆ ಮಾತು ಕೊಟ್ಟಿರುವುದರಿಂದ ಸೀತೆಯನ್ನು ಹುಡುಕುವ ಪ್ರಯತ್ನದಲ್ಲಿ ಯಾರಾದರೆ ಸರಿಹೋಗುತ್ತಾರೆಂದು ಯೋಚಿಸಿ, ತಮ್ಮ ಅಡವಿಯಲ್ಲೇ ಅಲ್ಲದೆ ಹೊರಗಿನ ಪ್ರಾಂತಗಳನ್ನು ಸಹ ಚೆನ್ನಾಗಿ ತಿಳಿದ ಆಂಜನೇಯನಿಗೆ ಸೀತೆ ವಿಷಯವೆಲ್ಲಾ ಹೇಳಿ ರಾಮನನ್ನು ಪರಿಚಯ ಮಾಡಿದ್ದಾರೆ. ಆಗ ಮೊದಲಬಾರಿ ಆಂಜನೇಯನು ರಾಮನನ್ನು ನೋಡುವುದು ನಡೆದಿದೆ. ಆಗ ವಾಲಿ ಸುಗ್ರೀವರ ಹತ್ತಿರ ಆಂಜನೇಯನು ರಾಮನನ್ನು ನೋಡುವುದು ನಡೆದಿದೆ. ಆಗ ವಾಲಿ ಸುಗ್ರೀವರ ಹತ್ತಿರ ಆಂಜನೇಯನು ದಳಪತಿಯಾಗಿ (ಸೇನಾಧಿಪತಿಯಾಗಿ) ಕೆಲಸ ಮಾಡುತ್ತಿದ್ದನು. ಗಿರಿಜನ ಸೇನಾಧಿಪತಿಯನ್ನು ದಳಪತಿ ಎಂದು ಅನ್ನುತ್ತಿದ್ದರು. ಆಂಜನೇಯನು ಅವರ ದಳಪತಿಯಾಗಿರುವುದರಿಂದ ತನ್ನ ಹಿಂದೆ ಹತ್ತು ಜನ ಗಿರಿಜನರನ್ನು ಕರೆದುಕೊಂಡು ಅಡವಿಯನ್ನು ಹುಡುಕುತ್ತಾ ಪೂರ್ತಿ ದಕ್ಷಿಣ ಭಾಗದ ಕಡೆ ಹೋಗಿದ್ದಾನೆ. ಆ ವಿಧವಾಗಿ ಆಂಜನೇಯನು ತನ್ನ ಕೆಲಸದಲ್ಲಿ ಮಗ್ನವಾಗಿರುವುದರಿಂದ ಶ್ರೀರಾಮನು ವಾಲಿ, ಸುಗ್ರೀವರ ಜಗಳಕ್ಕೂ ಸಹ ಪರಿಷ್ಕಾರ ಕಂಡುಕೊಳ್ಳಬೇಕೆಂದು ಆಲೋಚಿಸಿದ್ದಾನೆ. ಆಗ ಆತನ ಮೆದಳಿನಲ್ಲಿ ವಾಲಿ, ಸುಗ್ರೀವರಲ್ಲಿ ಒಬ್ಬರನ್ನು ಇಲ್ಲದಂತೆ ಮಾಡಿದರೆ ಸಮಸ್ಯೆ ಇಲ್ಲದಂತಾ ಗುತ್ತದೆಂದು ನಿರ್ಣಯಿಸಿಕೊಂಡಿದ್ದಾನೆ. ಅದಕ್ಕಾಗಿ ಸುಗ್ರೀವನ ಮೇಲೆ ಪೂರ್ತಿ ದ್ವೇಷದಿಂದಿರುವ ವಾಲಿಯೊಂದಿಗೆ ಸೇರಿ, ತನ್ನ ಪ್ರಯತ್ನದಲ್ಲಿ ಸುಗ್ರೀವನು ಪ್ರಾಣಗಳನ್ನು ಕಳೆದುಕೊಂಡರೆ ನಿನಗೇನಾದರೂ ಬಾಧೆ ಉಂಟಾಗುತ್ತದಾ? ಎಂದು ಕೇಳಿದನು. ಆ ಮಾತಿಗೆ ಸಮಾಧಾನವಾಗಿ ವಾಲಿ "ಸುಗ್ರೀವನು ಹೋದರೆ ಮೊದಲು ಸಂತೋಷಪಡುವವನು ನಾನೇ, ಹಾಗೆ ನಡೆಯುವುದು ನನಗೆ

ಇಷ್ಟವೇ" ಅಂದನು. ಅದೇ ಧೋರಣೆಯಲ್ಲಿರುವ ಸುಗ್ರೀವನೊಂದಿಗೆ ರಾಮನು ಸೇರಿ, ನನ್ನ ಪ್ರಯತ್ನದಲ್ಲಿ ವಾಲಿ ಪ್ರಾಣಗಳು ಹೋದರೆ ನಿನಗೇನಾದರೂ ಬಾಧೆಯಾಗುತ್ತದಾ? ಎಂದು ಕೇಳಿದನು. ಸುಗ್ರೀವನು ಸಹ ತನ್ನ ಅಣ್ಣನಾದ ವಾಲಿ ಸತ್ತುಹೋದರೆ ತನ್ನ ಸಮಸ್ಯೆ ಶಾಶ್ವತವಾಗಿ ಪರಿಷ್ಕಾರ ಆಗುತ್ತದೆಂದು, ವಾಲಿ ಸತ್ತುಹೋಗುವುದೇ ಒಳ್ಳೆಯದೆಂದು ಹೇಳಿದ್ದಾನೆ. ಈ ವಿಧವಾಗಿ ಎರಡು ಕಡೆ ಬೇರೆಬೇರೆಯಾಗಿ ಭೇಟಿಯಾಗಿದ್ದ ರಾಮನು, ಅವರ ಒಬ್ಬರ ಉದ್ದೇಶ ಮತ್ತೊಬ್ಬರಿಗೆ ತಿಳಿಯದಂತೆ ತನ್ನ ಮನಸ್ಸಿನಲ್ಲೇ ಇಟ್ಟುಕೊಂಡು, ಅವರಿಬ್ಬರಲ್ಲಿ ಒಬ್ಬರನ್ನು ಸಾಯಿಸುವುದಕ್ಕೆ ರಾಮನು ನಿರ್ಣಯಿಸಿಕೊಂಡಿದ್ದಾನೆ. ಅದಕ್ಕೆ ಸರಿಯಾದ ಪಥಕವನ್ನು ತಯಾರು ಮಾಡಿಕೊಂಡು ಆ ಪಥಕವನ್ನು ಮೊದಲು ವಾಲಿಗೆ ಹೇಳಿದ್ದಾನೆ. ತನ್ನ ಪಥಕದ ಪ್ರಕಾರ ಸುಗ್ರೀವನನ್ನು ಸಾಯಿಸುತ್ತೇನೆಂದು ಹೇಳುವುದು ನಡೆದಿದೆ. ಅದಕ್ಕೆ ವಾಲಿ ಸಮ್ಮತಿಸಿದನು. ಆ ವಿಧವಾಗಿ ಇಬ್ಬರೊಂದಿಗೆ ಬೇರೆ ಬೇರೆಯಾಗಿ ರಾಮನು ಸಂಪರ್ಕಿಸಿದ ನಂತರ, ತನ್ನ ಪಥಕದ ಪ್ರಕಾರ ಇಬ್ಬರೂ ಘರ್ಷಣೆ ಪಡುತ್ತಾ ಒಂದು ಕಡೆ ಇರುವ ಸಮಯದಲ್ಲಿ, ಮರೆಯಲ್ಲಿ ಬಾಣದಿಂದ ಹೊಡೆದು ಸಾಯಿಸುತ್ತೇನೆಂದು ಹೇಳುವುದು ನಡೆದಿದೆ. ತನ್ನ ಮಾತು ನಿಜವೇ ಎಂದು ನಂಬಿಸುವುದಕ್ಕೆ ದೂರದಿಂದ ಅನುಮಾನ ಪಡದಂತಿರುವುದಕ್ಕೆ ಒಬ್ಬರ ಕೊರಳಲ್ಲಿ ಹಾರವನ್ನು ಹಾಕಿ, ಒಬ್ಬರಿಗೆ ಹಾರವಿಲ್ಲದಂತೆ ಮಾಡಿ, ಇಬ್ಬರನ್ನು ಯಾರೂ ಇಲ್ಲದ ಅಡವಿಯಲ್ಲಿ ಹೋರಾಟ ಮಾಡಿರೆಂದು ಇಬ್ಬರಿಗೂ ಹೇಳಿದ್ದಾನೆ. ಅಷ್ಟೇ ಅಲ್ಲದೆ ಸುಗ್ರೀವನಿಗೆ ಹಾರ ಹಾಕಿ, ವಾಲಿಯನ್ನು ಖಾಲಿ ಕೊರಳಿಂದ ಇಟ್ಟು, ಹಾರ ಹಾಕಿದ ವ್ಯಕ್ತಿಯನ್ನು ಗುರಿಇಟ್ಟು ಬಾಣದಿಂದ ಹೊಡೆಯುತ್ತೇನೆಂದು ವಾಲಿಗೆ ಹೇಳಿದ್ದಾನೆ. ಹಾಗೇ ಸುಗ್ರೀವನೊಂದಿಗೆ ಹಾರ ಇಲ್ಲದ ವ್ಯಕ್ತಿಯನ್ನು ಗುರಿ ಇಟ್ಟು ಹೊಡೆಯುತ್ತೇನೆಂದು ಹೇಳಿದ್ದಾನೆ. ಈ ವಿಧವಾಗಿ ಎರಡೂ ಕಡೆ ಹೇಳಿದ ರಾಮನು ಕೊನೆಗೆ ಯಾರನ್ನು ಸಾಯಿಸಬೇಕೆಂದುಕೊಂಡಿದ್ದಾನೆ? ಎಂದು ಪ್ರಶ್ನಿಸಿಕೊಂಡರೆ ಆ ನಿರ್ಣಯ ರಾಮನಿಗೇ ತಿಳಿಯದು. ರಾಮನು ಬಾಣ ಹೊಡೆದರೆ ಯಾರು ಸತ್ತರೂ

ಎರಡನೆಯವನ ಹತ್ತಿರ ಹೇಳಿದ ತನ್ನ ಮಾತು ನೆರವೇರುತ್ತದೆ ಆದ್ದರಿಂದ ಮೊದಲೇ ಯಾವ ನಿರ್ಣಯವೂ ತೆಗೆದುಕೊಂಡಿಲ್ಲ.

ರಾಮನ ಪಥಕದ ಪ್ರಕಾರ ಯಾರೂ ಇಲ್ಲದ ಕಡೆ ವಾಲಿ, ಸುಗ್ರೀವರು ನಿಂತು ಮಾತುಗಳಿಂದ ಘರ್ಷಣೆ ಮಾಡುತ್ತಿರುವಾಗ ರಾಮನು ಅವರಿಗೆ ಕಾಣಿಸದೆ ಹತ್ತಿರವಾಗಿದ್ದು ಬಾಣ ಬಿಟ್ಟಾಗ, ಅದು ವಾಲಿಗೆ ತಾಕಿ ಆತನು ಸತ್ತುಹೋಗುವುದು ನಡೆದಿದೆ. ಅದರಿಂದ ರಾಮನು ತನಗೆ ಕೊಟ್ಟಿರುವ ಮಾತು ನೆರವೇರಿದೆಯೆಂದು ಸುಗ್ರೀವನು ಅಂದುಕೊಳ್ಳುವುದು ನಡೆದಿದೆ. ಒಂದುವೇಳೆ ಆ ಬಾಣ ಸುಗ್ರೀವನಿಗೇ ತಾಕಿದ್ದರೇ ಸುಗ್ರೀವನು ಸತ್ತುಹೋಗಿರುತ್ತಿದ್ದನು. ಆಗ ವಾಲಿ ರಾಮನು ತನಗೆ ಕೊಟ್ಟಿರುವ ಮಾತು ನೆರವೇರಿಸಿದ್ದಾನೆಂದು ಅಂದುಕೊಳ್ಳುತ್ತಿದ್ದನು. ಅದೃಷ್ಟವಶಾತ್ತು ಸುಗ್ರೀವನಿಗೆ ತಾಕದೆ ರಾಮನ ಬಾಣ ನೇರವಾಗಿ ವಾಲಿಗೆ ತಾಕುವುದು ವಾಲಿ ದುರದೃಷ್ಟವೆಂದುಕೊಳ್ಳುತ್ತೇವೆ. ಬಾಣ ತಾಕಿದ ಕೂಡಲೇ ಮನುಷ್ಯ ಸತ್ತುಹೋಗುವನು ಆದ್ದರಿಂದ ನನ್ನನ್ನು ಏಕೆ ಹೊಡೆದಿದ್ದೀಯೆಂದು ಕೇಳುವುದಕ್ಕೂ ಸಹ ಅವಕಾಶವಿರುವುದಿಲ್ಲ. ಹಾಗೆ ತಕ್ಷಣವೇ ಸತ್ತುಹೋಗುವುದಕ್ಕೆ ವಿಷಪೂರಿತವಾದ ಬಾಣವನ್ನು ರಾಮನು ಪ್ರಯೋಗಿಸಿದ್ದಾನೆ. ರಾಮನು ಪ್ರಯೋಗಿಸಿದ ಬಾಣಕ್ಕೆ ಕಲ್ಲಿನಕಪ್ಪೆ ಚರ್ಮದ ಬುಡಿಪೆಗಳ ಎಣ್ಣೆಯನ್ನೂ, ಹಾಗೇ ಕಲ್ಲಿನಹಲ್ಲಿಯ ಚರ್ಮ ಬುಡಿಪೆಗಳಲ್ಲಿನ ಜಿಗುರನ್ನೂ ಹಚ್ಚಿ ಇಡುವುದು ನಡೆದಿದೆ. ಕಲ್ಲಿನ ಚರ್ಮದಲ್ಲಿನ ಎಣ್ಣೆ, ಕಲ್ಲಿನ ಹಲ್ಲಿಯ ಚರ್ಮದಲ್ಲಿನ ಬುಡಿಪೆಗಳ ಜಿಗುರು ಎರಡೂ ಅಧಿಕ ವಿಷಪ್ರಭಾವ ಇರುವವು. ಅವು ಚರ್ಮದೊಳಗೆ ಚುಚ್ಚಿಕೊಂಡು ಹೋದರೆ ಮನುಷ್ಯ ಅರ್ಧ ನಿಮಿಷದಲ್ಲಿ ಅಪಸ್ಮಾರಕ ಸ್ಥಿತಿಯೊಳಗೆ ಹೋಗಿ, ಐದಾರು ನಿಮಿಷಗಳಲ್ಲಿ ಸತ್ತುಹೋಗುವನು. ಬಾಣ ತಾಕಿದ ನಂತರ ಎರಡನೆಯ ಮಾತು ಮಾತನಾಡುವ ಅವಕಾಶವೂ ಸಹ ಇರುವುದಿಲ್ಲ. ಅಂತಹ ವಿಷವನ್ನು ರಾಮನು ತನ್ನ ಬಾಣಕ್ಕೆ ಹಚ್ಚಿ ಹೊಡೆಯುವುದರಿಂದ, ಬಾಣ ತಾಕಿದ ವಾಲಿ ಕೂಡಲೆ ಮರು ಮಾತನಾಡದಂತೆ ಸತ್ತುಹೋಗುವುದು ನಡೆದಿದೆ.

ಆ ಸಂಘಟನೆಯಿಂದ ಸುಗ್ರೀವನು ಸಂತೋಷಪಟ್ಟು, ಆ ವಿಷಯವನ್ನು ಯಾರಿಗೂ ತಿಳಿಯದಂತೆ ಮಾಡಿ, ಯಾರೋ ಹಾಕಿದ ಬಾಣದಿಂದ ಸತ್ತುಹೋದಹಾಗೆ ಚಿತ್ರಿಸುವುದು ನಡೆದಿದೆ. ರಾಮನು ಸಾಯಿಸಿದಹಾಗೆ ತಿಳಿಯದಂತೆ ಮಾಡಿದ್ದಾನೆ. ವಾಲಿ ಸತ್ತುಹೋದ ವಿಷಯ ಸೀತೆಯನ್ನು ಹುಡುಕುವುದಕ್ಕೆ ಹೋದ ಆಂಜನೇಯನಿಗು ಸಹ ತಿಳಿಯದು. ಒಪ್ಪಿಸಿದ ಕೆಲಸವನ್ನು ಮಾಡಬೇಕೆನ್ನುವ ದೀಕ್ಷೆಯಿಂದಿರುವ ಆಂಜನೇಯನು ಸುಮಾರು ಮೂರು ತಿಂಗಳ ಕಾಲ ಸೀತೆಯನ್ನು ಅನ್ವೇಷಿಸಿ ಭಾರತ ಭೂಭಾಗದಲ್ಲಿ ಸೀತೆ ಇಲ್ಲವೆಂದು ತಿಳಿದು, ಕೊನೆಗೆ ಹತ್ತಿರದಲ್ಲಿರುವ ಲಂಕೆಯಲ್ಲಿ ನೋಡಬೇಕೆಂದುಕೊಂಡಿದ್ದಾನೆ. ಆಗ ತನ್ನಹಿಂದೆ ಬಂದಿರುವವರನ್ನು, ಅವರ ಪ್ರಾಂತಗಳಿಗೆ ಕಳುಹಿಸಿ, ತಾನು ಒಬ್ಬನು ಲಂಕೆ ಕಡೆಗೆ ಹೋಗಿದ್ದಾನೆ. ಅಂದಿನ ಕಾಲದಲ್ಲಿ ಭಾರತದೇಶಕ್ಕು ಲಂಕೆಗೂ ಮಧ್ಯೆ ಸುಮಾರು ಅರ್ಧಕಿಲೋಮೀಟರ್ ದೂರವಿತ್ತು. ಅದೂ ಸಹ ಪೂರ್ತಿ ನೀರಿನಿಂದ ಇಲ್ಲದೆ ಅಲ್ಲಲ್ಲಿ ಕೆಲವು ಮರಳಿನ ದಿನ್ನೆಗಳು ನೀರಿನಲ್ಲಿ ತೇಲಿದ್ದವು. ಮರಳಿನ ದಿನ್ನೆಗಳ ಮಧ್ಯೆ ನೀರಿನ ಆಳ ಕಡಿಮೆಯಾಗಿರುವುದರಿಂದ ಈಜುವ ಅವಶ್ಯವೂ ಸಹ ಇಲ್ಲದೆ ಕಾಲಿನ ವರೆಗು, ಸೊಂಟದವರೆಗು, ಕುತ್ತಿಗೆವರೆಗು ಇರುವ ನೀರಿನಲ್ಲಿ ನಡೆದುಹೋಗುತ್ತಿದ್ದರು. ಆಂಜನೇಯನು ಸುಮಾರು ಏಳು ಅಡಿಗಳ ಎತ್ತರವಿರುವ ಆಜಾನುಬಾಹನು ಆಗಿರುವುದರಿಂದ, ಸ್ವಲ್ಪವಿರುವ ಸಮುದ್ರವನ್ನು ನಡೆದು ದಾಟಿಹೋಗಿದ್ದಾನೆ. ಆ ಕಾಲದಲ್ಲಿ ಈಗಿನಂತೆ ದೇಶ ಸರಹದ್ದು ಸಮಸ್ಯೆಗಳು ಇಲ್ಲ. ಆದ್ದರಿಂದ ಈಕಡೆ ಪ್ರಜೆಗಳು ಆ ಕಡೆ, ಆಕಡೆ ಇರುವ ಪ್ರಜೆಗಳು ಈಕಡೆ ಅವಶ್ಯ ಸಲುವಾಗಿ, ವ್ಯಾಪಾರ ಸಲುವಾಗಿ ಬಂದು ಹೋಗುತ್ತಿದ್ದರು. ಹಾಗೇ ಆಂಜನೇಯನು ಲಂಕೆಯೊಳಗೆ ಹೋದರೂ, ಯಾರೂ ಆತನನ್ನು ಗಮನಿಸಲಿಲ್ಲ. ಆಂಜನೇಯನು ಲಂಕೆಯೊಳಗೆ ಹೋದ ನಂತರ ಸೀತೆಯನ್ನು ತಂದು ರಾವಣನು ಅಶೋಕವನದಲ್ಲಿ ಇಟ್ಟಿದ್ದಾನೆನ್ನುವ ವಿಷಯವನ್ನು, ಅಲ್ಲಿನ ಪ್ರಜೆಗಳಿಂದ ಆಂಜನೇಯನು ತಿಳಿದುಕೊಳ್ಳುವುದು ನಡೆದಿದೆ.

ಅಲ್ಲಿಯವರೆಗು ನಿರ್ಭಯವಾಗಿ ಸಾಗಿದ ಸೀತೆ ಅನ್ವೇಷಣೆ, ಸೀತೆ ಜಾಡು ತಿಳಿದ ನಂತರ ಆಂಜನೇಯನಿಗೆ ಸೀತೆಯನ್ನು ಬೇಟಿ ಮಾಡುವುದು ಸ್ವಲ್ಪ ಕಷ್ಟವೆನಿಸಿತು. ಏಕೆಂದರೆ ಒಬ್ಬ ರಾಜನ ಅಧೀನದಲ್ಲಿರುವವರೊಂದಿಗೆ ಮರೆಯಿಂದ ಯಾರೂ ಮಾತನಾಡುವ ಅವಕಾಶವಿರುವುದಿಲ್ಲ. ರಾಜರ ಅನುಮತಿಯಿಂದಲೆ ಸೀತೆಯನ್ನು ಭೇಟಿ ಮಾಡುವುದಕ್ಕೆ ಅವಕಾಶವಿರುತ್ತದೆ. ಆದರೆ ಸೀತೆ ಕುರುಹುಗೋಸ್ಕರ ಬಂದಿದ್ದೇನೆಂದು ರಾವಣನಿಗೆ ತಿಳಿದರೆ, ತನ್ನನ್ನು ಬಂದಿಸುವನೆಂದು ಒಂದು ಕಡೆ ಆಂಜನೇಯನಿಗೆ ಅನಿಸುತ್ತಿದ್ದರೂ, ಸ್ವಲ್ಪ ತಡವಾದರೂ ಫರವಾಗಿಲ್ಲ, ರಾಮನ ವಿಷಯವನ್ನು ಸೀತೆಗೆ ತಿಳಿಸಬೇಕೆಂದು ಆಂಜನೇಯನು ನಿರ್ಣಯಿಸಿಕೊಂಡಿದ್ದಾನೆ. ಒಂದು ದಿನ ಮಧ್ಯಾಹ್ನ ಸಮಯದಲ್ಲಿ ಪ್ರಾಕಾರವಿಲ್ಲದ ಅಶೋಕವನದೊಳಗೆ ಆಂಜನೇಯನು ಪ್ರವೇಶಿಸಿ, ಆಕಡೆ ಈಕಡೆ ತಿರುಗಾಡುತ್ತಾ ಕೊನೆಗೆ ಸೀತೆಯಿರುವ ಸ್ಥಳವನ್ನು ನೋಡಿದ್ದಾನೆ. ಸೀತೆ ಸಮೀಪದಲ್ಲಿ ಇಬ್ಬರು ಸ್ತ್ರೀಯರು ಇರುವಾಗ ನೇರವಾಗಿ ಅವರ ಹತ್ತಿರಕ್ಕೆ ಹೋಗಿ ದಾಹವಾಗಿದೆಯೆಂದು, ದಾರಿತಪ್ಪಿ ಬಂದಿದ್ದೇನೆಂದು, ನೀರು ಕೊಟ್ಟು ದಾಹವನ್ನು ತೀರಿಸಬೇಕೆಂದು, ಹೊರಗೆ ಹೋಗುವ ದಾರಿ ತೋರಿಸೆಂದು ಕೇಳಿದ್ದಾನೆ. ಆಗ ಅಲ್ಲಿರುವ ಸ್ತ್ರೀಯರು ಇದು ನಿಷಿದ್ಧ ಪ್ರದೇಶ. ಯಾರೂ ಅನುಮತಿ ಇಲ್ಲದೆ ಬರಬಾರದೆಂದು ಹೇಳಿ ಒಬ್ಬರು ನೀರು ತರುವುದಕ್ಕಾಗಿ ಹೋದರು. ಒಬ್ಬ ಸ್ತ್ರೀ ಅಲ್ಲಿರುವಾಗ ಆಕೆಯೊಂದಿಗೆ ಮಾತನಾಡುವುದು ಸೀತೆ ಗಮನಿಸುತ್ತಿರುವಾಗ, ರಾಮನ ಹತ್ತಿರದಿಂದ ತಂದಿರುವ ರಾಮನ ಕೈ ಉಂಗುರವನ್ನು ಸೀತೆ ಕಡೆಗೆ ಅಲ್ಲಿರುವ ಸ್ತ್ರೀ ಗಮನಿಸದಂತೆ ಹಾಕುವುದು ನಡೆದಿದೆ. ತನ್ನ ಮುಂದೆ ಬಿದ್ದ ಉಂಗುರ ರಾಮನದೇ ಎಂದು ಗ್ರಹಿಸಿದ ಸೀತೆ ಅದನ್ನು ತೆಗೆದಿಟ್ಟುಕೊಂಡಳು. ಆದರೆ ಸೀತೆಯೊಂದಿಗೆ ಮಾತನಾಡುವ ಅವಕಾಶ ಆಂಜನೇಯನಿಗೆ ದೊರಕಲಿಲ್ಲ. ಅಷ್ಟರಲ್ಲಿಯೆ ನೀರು ಮತ್ತೊಬ್ಬ ಸ್ತ್ರೀ ತಂದು ಕೊಡುವುದು, ಆಂಜನೇಯನು ನೀರು ಕುಡಿದ ನಂತರ ಅಲ್ಲಿನ ಸಮಾಚಾರವನ್ನು ತಿಳಿದುಕೊಂಡ ಭಟರು ಅಲ್ಲಿಗೆ ಬಂದು ಆಂಜನೇಯನನ್ನು ನೀನು ಯಾರು?

ಎಂದು ಪ್ರಶ್ನಿಸಿ, ಆಂಜನೇಯನು ಏನೋ ಹೇಳುವುದರೊಳಗೇ ಇಲ್ಲೇನು ಹೇಳಬೇಡ, ನೀನು ಹೇಳಬೇಕಾಗಿರುವುದು ರಾಜರ ಸಮಕ್ಷಮದಲ್ಲಿ ಹೇಳೆಂದು, ಆಂಜನೇಯನನ್ನು ಬಂಧಿಸಿ ಕರೆದುಕೊಂಡು ಹೋಗುವುದು ನಡೆದಿದೆ.

ರಾವಣಬ್ರಹ್ಮ ಎಷ್ಟು ಗಂಭೀರವದನ ಇರುವವನೋ, ಮೊಟ್ಟಮೊದಲು ಆಂಜನೇಯನು ನೋಡಿದ್ದಾನೆ. ಆಂಜನೇಯನು ಇಂದೂದೇಶದಲ್ಲಿನ (ಭಾರತದೇಶದಲ್ಲಿನ) ಗಿರಿಜನನೆಂದು ತಿಳಿದುಕೊಂಡ ರಾವಣಬ್ರಹ್ಮ, ಆತನು ದ್ರಾವಿಡ ಜಾತಿಯವನೇ ಎಂದು ತಿಳಿದು ಆಂಜನೇಯನನ್ನು ಸಮುದ್ರತೀರದಲ್ಲಿ ಬಿಟ್ಟು ತನ್ನ ದೇಶಕ್ಕೆ ಹೋಗಲು ಹೇಳಿದ್ದಾನೆ. ಅಷ್ಟೇ ಹೊರತು ಆ ದಿನ ಆಂಜನೇಯನನ್ನು ಒಂದು ಮಾತು ಸಹ ಅನ್ನಲಿಲ್ಲ. ಚರಿತ್ರೆಯಲ್ಲಿ ಆಂಜನೇಯನ ಬಾಲಕ್ಕೆ ಬೆಂಕಿ ಹಚ್ಚಿದ್ದಾರೆಂದು ಹೇಳುವುದು ಶುದ್ಧ ಅಸತ್ಯ. ಆಂಜನೇಯನಿಗೆ ಬಾಲ ಇತ್ತೆಂದು ನಂಬಿಸುವುದಕ್ಕೆ ಹಾಗೆ ಬರೆದಿದ್ದಾರೆ. ಆಂಜನೇಯನು ಮೊದಲು ಸ್ವಲ್ಪ ಭಯಪಟ್ಟರೂ, ರಾವಣಬ್ರಹ್ಮನನ್ನು ನೋಡಿದ ನಂತರ, ಆತನ ಮಾತಿನ ತಿರುಳನ್ನು ನೋಡಿದ ನಂತರ, ಆಂಜನೇಯನೊಳಗಿನ ಭಯ ಹೋಗಿದೆ. ಆಂಜನೇಯನು ತಿರುಗಿ ತನ್ನ ಅರಣ್ಯಕ್ಕೆ ಬಂದ ನಂತರ ವಾಲಿ ಸತ್ತುಹೋದ ವಿಷಯ ತಿಳಿದುಕೊಂಡಿದ್ದಾನೆ. ಆದರೆ ರಾಮನೇ ವಾಲಿಯನ್ನು ಸಾಯಿಸಿರುವುದೆಂದು ಆಂಜನೇಯನಿಗೆ ತಿಳಿಯದು.

ಆಂಜನೇಯನಿಂದ ಸೀತೆ ಜಾಡನ್ನು ತಿಳಿದುಕೊಂಡ ರಾಮಲಕ್ಷ್ಮಣರು, ಸುಗ್ರೀವನು ಮೊದಲಾದವರು ಆಂಜನೇಯನು ಮಾಡಿದ ಸಾಹಸವನ್ನು ಮೆಚ್ಚಿಕೊಂಡು, ನಂತರ ಸೀತೆಯನ್ನು ರಾವಣಬ್ರಹ್ಮ ಹತ್ತಿರದಿಂದ ಹೇಗೆ ತರಬೇಕೆಂದು ಯೋಚಿಸಿದ್ದಾರೆ. ಅಸಲಿಗೆ ರಾವಣನು ಸೀತೆಯನ್ನು ಏಕೆ ತೆಗೆದುಕೊಂಡು ಹೋಗಿದ್ದಾನೋ ಸಹ ತಿಳಿಯದ ಸ್ಥಿತಿಯಲ್ಲಿರುವ ಸುಗ್ರೀವನು ಮೊದಲಾದವರು, ತಮಗೆ ಹಿರಿಯನಾಗಿ, ಮಂತ್ರಿಯಾಗಿರುವ ಜಾಂಬವಂತನ ಸಲಹೆ ಮೇರೆಗೆ ಮೊದಲು ಸಂಧಿದೂತವನ್ನು ಕಳುಹಿಸಿ ವಿಷಯವನ್ನು ತಿಳಿದುಕೊಳ್ಳಬೇಕೆಂದುಕೊಂಡಿದ್ದಾರೆ. ಹಾಗೇ ಹತ್ತು ಜನ ಹಿರಿಯರನ್ನು

ಸಂಧಿಯಾಗಿ ಕಳುಹಿಸುವುದು ನಡೆದಿದೆ. ಸೀತೆ ವಿಷಯವಾಗಿ ಬಂದಿದ್ದಾರೆಂದು ತಿಳಿದುಕೊಂಡ ರಾವಣನು "ನಾನು ಬಂಧಿಸಿರುವುದು ಆರ್ಯಜಾತಿ ರಾಮನ ಹೆಂಡತಿಯನ್ನು, ರಾಮನು ದ್ರಾವಿಡರಿಗೆ ಮಾಡಿದ ದ್ರೋಹಕ್ಕೆ ಬದಲು ಯಜ್ಞ ರಕ್ಷಣೆಯಲ್ಲಿ ನಮ್ಮವರನ್ನು ಸಾಯಿಸಿರುವುದಕ್ಕೆ ಆ ಕೆಲಸ ಮಾಡಿದ್ದೇನೆ. ಆದರೆ ನಮ್ಮ ಸಮಕ್ಷಮದಲ್ಲಿ ಆಕೆ ಸುರಕ್ಷಿತವಾಗಿದ್ದಾಳೆ. ನೀವು ಆಕೆಯನ್ನು ಕರೆದುಕೊಂಡು ಹೋಗಬೇಕೆಂದರೆ ನನ್ನನ್ನು ನನ್ನ ಸೈನ್ಯವನ್ನು ಯುದ್ಧದಲ್ಲಿ ಜಯಿಸಿ ತೆಗೆದುಕೊಂಡು ಹೋಗಬೇಕಾಗಿರುತ್ತದೆ" ಎಂದು ಹೇಳಿದ್ದಾನೆ. ಆಗ ಅಲ್ಲಿಗೆ ಹೋದವರು ಹಿಂತಿರುಗಿ ಸುಗ್ರೀವನ ಹತ್ತಿರಕ್ಕೆ ಬಂದು ರಾವಣಬ್ರಹ್ಮ ಹೇಳಿದ ವಿಷಯವನ್ನೇ ಹೇಳಿದ್ದಾರೆ. ಆ ಮಾತುಗಳು ಕೇಳಿದ ಸುಗ್ರೀವನು ರಾಮನು ತನಗೆ ಮಾಡಿದ ಸಹಾಯಕ್ಕೆ, ಆತನಿಗೆ ತಾನು ಮಾತು ಕೊಟ್ಟಹಾಗೆ ಸೀತೆಯನ್ನು ಲಂಕೆಯಿಂದ ಬಿಡಿಸಿ ತಂದು ರಾಮನಿಗೆ ಕೊಡಬೇಕೆಂದು ಅವರಿಗೆ ಹೇಳಿದ್ದಾನೆ. ಆಗ ತಮ್ಮ ರಾಜನಾದ ಸುಗ್ರೀವನ ಮಾತನ್ನು ಎಲ್ಲರೂ ಸಮ್ಮತಿಸಿದರು. ತಮ್ಮ ರಾಜನ ಮಾತೆ ನಮ್ಮ ಮಾತು ಎಂದು ಹೇಳುವ ದಳನಾಯಕನು ಆಂಜನೇಯನು, ಅವರ ನಾಯಕತ್ವದೊಳಗಿನ ಗಿರಿಜನರೆಲ್ಲರೂ ಸುಗ್ರೀವನ ಮಾತಿಗೆ ಕಟ್ಟುಬಿದ್ದು ಇದ್ದೇವೆಂದು ಹೇಳಿದ್ದಾರೆ. ಅದರಿಂದ ರಾಮನು, ಲಕ್ಷ್ಮಣನು ಇಬ್ಬರೂ ಸಂತೋಷಪಟ್ಟು, ಅವರು ಸಹ ಯುದ್ಧರಂಗದೊಳಗೆ ಬಂದು ರಾವಣನೊಂದಿಗೆ ಹೋರಾಡುತ್ತೇವೆಂದು ನಿರ್ಣಯಿಸಿಕೊಂಡಾಗ, ಹೇಳಿದ ಮಾತಿನ ಪ್ರಕಾರ ಸುಗ್ರೀವನೊಂದಿಗೆ ಸಹ ಎಲ್ಲರೂ ಹೊರಟುಹೋಗಿದ್ದಾರೆ. ಅದು ತ್ರೇತಾಯುಗ ಕಾಲವಾದ್ದರಿಂದ ಯುದ್ಧದಲ್ಲಿ ಇಂದಿನ ನಿಬಂಧನೆಗಳು, ನಿಯಮಗಳು ಇಲ್ಲ. ಶ್ರೀರಾಮನೊಂದಿಗೆ ಸುಗ್ರೀವನು ತನ್ನ ಗಿರಿಜನ ಸಮೂಹದಿಂದ ಸಮುದ್ರವನ್ನು ದಾಟಿ ಲಂಕೆವರೆಗು ಹೋಗಿದ್ದಾರೆ.

ಲಂಕೆಯಿಂದ ಭಾರತದೇಶಕ್ಕೆ, ಭಾರತದೇಶದಿಂದ ಲಂಕೆಗೆ ಆಗಾಗ ಕೆಲವರು ಬಂದು ಸಮುದ್ರವನ್ನು ದಾಟಿ ಬರುವುದು, ಹೋಗುವುದು ನಡೆಯುತ್ತಿರುವುದರಿಂದ ರಾಮನು, ಸುಗ್ರೀವನು, ಆಂಜನೇಯನು, ಲಕ್ಷ್ಮಣನು,

ಅವರ ಅನುಚರರು ಒಂದೇ ಬಾರಿ ಅಲ್ಲದೆ ನಾಲ್ಕು ಗುಂಪುಗಳಾಗಿ ರಾತ್ರಿಹೊತ್ತು ಸಮುದ್ರವನ್ನು ದಾಟಿ ಲಂಕೆಗೆ ಸೇರಿ ಸಮುದ್ರ ತೀರದಲ್ಲಿ ಒಂದು ಕಡೆ ಇದ್ದು ಸೀತೆ ವಿಷಯವನ್ನು ತಮ್ಮ ವಾರ್ತಾಹರನಿಂದ ರಾವಣಬ್ರಹ್ಮನಿಗೆ ಲೇಖನವನ್ನು ಕಳುಹಿಸಲಾಗಿದೆ. ಲೇಖನದಲ್ಲಿ ಸೀತೆಯನ್ನು ರಾಮನಿಗೆ ಒಪ್ಪಿಸಬೇಕೆಂದು ಇಲ್ಲದೆ ಹೋದರೆ ಯುದ್ಧ ತಪ್ಪುವುದಿಲ್ಲವೆಂದು ಹೇಳಿದಾಗ, ರಾವಣನು ಅದಕ್ಕೆ ಉತ್ತರವಾಗಿ ಯುದ್ಧವೆ ಮಾಡೆಂದು ಬರೆದು ಕಳುಹಿಸಿದ್ದಾನೆ. ಹಾಗೆ ಪ್ರಾರಂಭವಾದ ಯುದ್ಧದಲ್ಲಿ ತಾನು ಸತ್ತುಹೋಗಬೇಕೆಂದು ರಾವಣಬ್ರಹ್ಮನಿಗೆ ಮೊದಲೇ ತಿಳಿದಿತ್ತು. ಆದ್ದರಿಂದ ಆ ಕಾರ್ಯವೆಲ್ಲವನ್ನು ಸ್ವಲ್ಪವೂ ಹೆದರದಂತೆ ನಡೆಸಿ ಕೊನೆಗೆ ನಡೆಯಬೇಕಾಗಿರುವುದು ನಡೆಯುವಹಾಗೆ ರಾವಣನು ಮಾಡಿದ್ದಾನೆ. ಒಬ್ಬ ಆರ್ಯನು ಬಂದು ದ್ರಾವಿಡ ದೇಶವಾದ ಲಂಕೆಯಲ್ಲಿ ದ್ರಾವಿಡ ರಾಜರಲ್ಲಿ ಹಿರಿಯನಾದ ರಾವಣಬ್ರಹ್ಮನನ್ನು ಸಾಯಿಸಬೇಕೆಂದು ಮೊದಲೇ ನಿರ್ಣಯವಿರುವುದರಿಂದ ಅದರ ಪ್ರಕಾರವೇ ನಡೆಯುವಹಾಗೆ ರಾವಣನು ಮಾಡಿದ್ದಾನೆ. ಹಾಗೆ ಕರ್ಮ ನಿರ್ಣಯ ಇಲ್ಲದೇ ಹೋದರೆ ಸಾವಿರ ಜನ ರಾಮರಾದರೂ ರಾವಣನನ್ನು ಸಾಯಿಸುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ! ಆತನು ಯೋಗೀಶ್ವರನಾಗಿರುವುದರಿಂದ ಆತನ ಪ್ರಾಣವನ್ನು ಆತನ ಇಷ್ಟ ಬಂದಾಗಲೆ ಬಿಡಬಲ್ಲನು. ಆತನ ಇಚ್ಛೆ ಪ್ರಕಾರವೆ ಮರಣ ಬರಬಲ್ಲದು. ಆತನ ಅನುಮತಿ ಇಲ್ಲದೆ ಮರಣ ಬರುವುದಿಲ್ಲ. ಆದ್ದರಿಂದ ಆತನನ್ನು 'ಇಚ್ಛಾ ಮರಣನೆಂದು' ಅನ್ನಬಹುದು. **ರಾಮನ ಬಾಣದಿಂದಲೆ ರಾವಣನು ಸತ್ತಿದ್ದಾನೆಂದು ಎಲ್ಲರೂ ಅಂದುಕೊಂಡರೂ, ರಾವಣನು ಮಾತ್ರ ರಾಮನೊಂದಿಗೆ ಬಾಣವನ್ನು ಹಾಯಿಸಿಕೊಂಡು ತನ್ನ ಇಷ್ಟದಿಂದಲೇ ಸತ್ತುಹೋಗಿದ್ದಾನೆ.** ರಾವಣ ಮರಣವೊಂದರ ಆಂತರ್ಯ ಯಾರಿಗೂ ತಿಳಿಯದೇ ಹೋದರೂ, ಬಾಹ್ಯವಾಗಿ ರಾಮನ ಬಾಣದಿಂದ ಸತ್ತುಹೋಗಿದ್ದಾನೆಂದು ಎಲ್ಲರೂ ಅಂದುಕೊಂಡಿದ್ದಾರೆ.

ಶ್ರೀರಾಮನ ಕೈಯಲ್ಲಿ ರಾವಣನು ಸತ್ತುಹೋದ ವಿಷಯವನ್ನು ತಿಳಿದುಕೊಂಡ ಆರ್ಯರು ಬಹಳ ಸಂತೋಷಪಟ್ಟರು. ಅಲ್ಲಿಯವರೆಗು ತಮಗೆ

ಸಿಂಹ ಸ್ವಪ್ನದಂತಿರುವ ರಾವಣನು, ತಮ್ಮ ಆರ್ಯಜಾತಿಯವನಾದ ರಾಮನ ಕೈಯಲ್ಲಿ ಸತ್ತುಹೋಗುವುದು ಆರ್ಯರಿಗೆ ಬಹಳ ಆನಂದವಾಗಿಹೋಗಿದೆ. ರಾಮನ ಮೂಲವಾಗಿ ರಾವಣನು ಸತ್ತುಹೋಗುವುದನ್ನು ರಾಮಾಯಣವಾಗಿ ಬರೆದುಕೊಂಡಿದ್ದಾರೆ. ಹಾಗೆ ಬರೆದುಕೊಂಡ ರಾಮಾಯಣದಲ್ಲಿ ಅದೇ ಸರಿಯಾದ ಸಮಯವೆನ್ನುವಂತೆ ರಾಮನನ್ನು ದೇವರೆಂದು ವಿಷ್ಣು ಅವತಾರವೆಂದು ವರ್ಣಿಸುವುದೇ ಅಲ್ಲದೆ, ರಾವಣಬ್ರಹ್ಮನನ್ನು ರಾಕ್ಷಸನಾಗಿ, ದುಷ್ಟನನ್ನಾಗಿ, ಕಾಮಾಂಧನಾಗಿ ವರ್ಣಿಸಿದ್ದಾರೆ. ರಾವಣನು ಸತ್ತುಹೋಗುವವರೆಗು ದಕ್ಷಿಣ ದೇಶದಲ್ಲಿ ಯಜ್ಞಗಳು ಮಾಡುತ್ತಿದ್ದರೂ, ದ್ರಾವಿಡ ಬ್ರಾಹ್ಮಣರಿಗೆ ಯಜ್ಞಗಳು ಮಾಡುವ ವಿಧಾನವನ್ನು ಕಲಿಸುತ್ತಿದ್ದರೂ ಅಲ್ಲಿ ರಾವಣ ಸೈನ್ಯ ಬಂದು ಮಾಡುತ್ತಿರುವ ಅವರನ್ನು ಹಿಂಸಿಸಿ, ನಡೆಯುತ್ತಿರುವ ಯಜ್ಞವನ್ನು ನಂದಿಸಿ ಧ್ವಂಸ ಮಾಡಿ ಹೋಗುತ್ತಿದ್ದರು. ಆರ್ಯರ ಕಾರ್ಯಕಲಾಪಗಳನ್ನು ದ್ರಾವಿಡರು ಯಾರೂ ವಿರೋಧಿಸದಿದ್ದರೂ, ಲಂಕೆಯಲ್ಲಿರುವ ರಾವಣನು ದಕ್ಷಿಣದೇಶದಲ್ಲಿ ಯಜ್ಞಗಳು ಮಾಡುವುದಾಗಲಿ, ವೇದಗಳನ್ನು ಓದುವುದಾಗಲಿ ನಡೆಯಲು ಬಿಡದೆ ಆತಂಕಪಡಿಸುತ್ತಿದ್ದನು. ಹಾಗೆ ಮಾಡುವುದರಿಂದ ಕೆಲವರು ಪ್ರಜೆಗಳಿಗೆ ರಾವಣನು ಮಾಡುವ ಕೆಲಸ ಒಳ್ಳೆಯದು ಅಲ್ಲವೆನಿಸಿದರೂ, ದೈವಜ್ಞಾನವನ್ನು ತಿಳಿದ ಜ್ಞಾನಿಗಳು ಆದಿಯಲ್ಲಿ ದೇವರು ಹೇಳಿದಹಾಗೆ, ಸೂರ್ಯನು ಮನುವಿಗೆ ಹೇಳಿದಹಾಗೆ ರಾವಣನು ಮಾಡುತ್ತಿದ್ದಾನೆಂದು, ಜ್ಞಾನದ ಪ್ರಕಾರ ಯಜ್ಞಗಳು, ವೇದಗಳು, ತಪಸ್ಸುಗಳು ಅಧರ್ಮಗಳೆಂದು, ಅಂತಹ ಅಧರ್ಮಗಳ ಕಾರ್ಯಗಳನ್ನು ಅಡ್ಡಿಮಾಡುತ್ತಾ ರಾವಣಬ್ರಹ್ಮ ಒಳ್ಳೆಯದು ಮಾಡುತ್ತಿದ್ದಾನೆಂದು ಕೆಲವರಂದುಕೊಳ್ಳುತ್ತಿದ್ದರು.

ಆಗಿನನ ಕಾಲದಲ್ಲಿ ಆರ್ಯರು ದ್ರಾವಿಡರಿಗಿಂತ ಎರಡು ಪಟ್ಟು ಇಂದೂ ದೇಶವಾದ ಭಾರತದೇಶದೊಳಗೆ ಬರುವುದೇ ಅಲ್ಲದೆ, ದ್ರಾವಿಡರಲ್ಲಿನ ಜ್ಞಾನವನ್ನು ಇಲ್ಲದೆ ಮಾಡಿ ತಮ್ಮ ಆಚರಣೆಗಳನ್ನು ದ್ರಾವಿಡರಲ್ಲಿ ತುಂಬಬೇಕೆಂದು ಕೊಂಡಿದ್ದಾರೆ. ಹಾಗೆ ತಮ್ಮ ಆಚರಣೆಗಳಿಗೆ ಅಭ್ಯಾಸ ಮಾಡಿ ದ್ರಾವಿಡರನ್ನು

ಎಂದಿಗೂ ತಮ್ಮ ಕಾಲುಗಳ ಹತ್ತಿರ ಇರುವಹಾಗೆ ಮಾಡಬೇಕೆಂದುಕೊಂಡಿದ್ದಾರೆ. ಅದೇ ವಿಧವಾಗಿ ದ್ರಾವಿಡರನ್ನು ಬದಲಾಯಿಸುತ್ತಾ ಬಂದಿದ್ದಾರೆ. ಆದರೆ ಪೂರ್ತಿ ದಕ್ಷಿಣದೇಶವಾದ ಇಂದಿನ ತಮಿಳನಾಡು ಲಂಕ ಪ್ರಾಂತಗಳಲ್ಲಿ ದ್ರಾವಿಡರು ಬದಲಾಗದಂತೆ ರಾವಣನು ಅಡ್ಡಿ ಮಾಡಿರುವುದು ನಡೆದಿದೆ. ಆದ್ದರಿಂದ ತಮಿಳನಾಡು ಲಂಕ ಪ್ರಾಂತಗಳಲ್ಲಿ ಆರ್ಯರಿಗೆ ಇಂದಿಗೂ ದೊಡ್ಡ ಆದರಣವಿಲ್ಲ. ಇಂದಿಗೂ ರಾಮನನ್ನು ಕೆಟ್ಟದಾಗಿ, ರಾವಣಬ್ರಹ್ಮನನ್ನು ಒಳ್ಳೆಯದಾಗಿ ಹೇಳಿಕೊಳ್ಳುವವರು ಪೂರ್ತಿ ದಕ್ಷಿಣಭಾಗದಲ್ಲಿ ಇದ್ದಾರೆ. ಪೂರ್ವ ಆರ್ಯರು ಸತ್ತುಹೋದರೂ, ಅವರ ಆಶಯವನ್ನು ನೆರವೇರಿಸುವುದಕ್ಕೆ ಅವರ ಸಂತತಿ ತಯಾರಾಗಿ ಆರ್ಯರ ಕಾರ್ಯಗಳನ್ನು ನಡೆಸುತ್ತಾ ಬಂದಿದ್ದಾರೆ. ಆ ವಿಧವಾಗಿ ಆರ್ಯರು ತಮ್ಮ ಉದ್ದೇಶವನ್ನು ಇಂದಿಗೂ ಬಿಡಲಿಲ್ಲ. ಆದರೆ ದ್ರಾವಿಡರಾದವರು ತ್ರೇತಾಯುಗದಲ್ಲೇ ಅವರ ಜ್ಞಾನವನ್ನು ಕಳೆದುಕೊಂಡು, ನಾವು ದ್ರಾವಿಡರು ಜ್ಞಾನಿಗಳು (ಇಂದೂಗಳು) ಎನ್ನುವ ಮಾತನ್ನು ಪೂರ್ತಿಯಾಗಿ ಮರೆತುಹೋಗಿ, ಭಾರತದೇಶದಲ್ಲಿನ ಬಹಳ ಪ್ರಾಂತದವರು ಆರ್ಯರ ಕೆಳಗೆ ಗುಲಾಮರಾಗಿ ಹೋಗಿದ್ದಾರೆ. ದ್ರಾವಿಡರು ತಮ್ಮ ಚರಿತ್ರೆಯನ್ನು ತಾವೇ ಮರೆತುಹೋಗಿ, ಆರ್ಯರ ಪ್ರೇರೇಪಣೆಯಿಂದ ದ್ರಾವಿಡರು ದ್ರಾವಿಡರನ್ನೇ ಹಿಂಸಿಸಿಕೊಳ್ಳುತ್ತಿದ್ದಾರೆ. ಈಗಲೇ ಅಲ್ಲ ರಾಮಾಯಣ ಕಾಲವಾದ ತ್ರೇತಾಯುಗದಲ್ಲಿ ನಡೆದ ಯುದ್ಧವು ಸಹ ಅದೇ. ಅಡವಿಯಲ್ಲಿ ಗಿರಿಜನರಾದ ದ್ರಾವಿಡರಿಗು, ಲಂಕೆಯಲ್ಲಿ ಪುರಜನರಾದ ದ್ರಾವಿಡರಿಗು ನಡುವೆ ನಡೆದ ಯುದ್ಧ ರಾಮಾಯಣ ಯುದ್ಧ. ಆದಿನ ಆರ್ಯರಿಂದ ಪ್ರೇರಣೆ ಹೊಂದಿ, ಅವರ ಕೈಯಲ್ಲಿ ಕೀಲುಗೊಂಬೆಗಳಂತೆ ಗಿರಿಜನ ದ್ರಾವಿಡರಾದ ಸುಗ್ರೀವ, ಜಾಂಬವಂತ, ಆಂಜನೇಯರು ಪುರಜನ ದ್ರಾವಿಡರಾದ ರಾವಣನೊಂದಿಗೆ ಆತನ ಸೈನ್ಯದೊಂದಿಗೆ ಹೋರಾಡಲಿಲ್ಲವೆ? ಆದಿನ ರಾಮಾಯಣದಲ್ಲಿ ನಡೆದ ಸೂತ್ರವನ್ನೇ ಈ ದಿನ ಸಹ ಆರ್ಯರು ಜಾರಿ ಮಾಡುತ್ತಾ, ತಾವು ಪ್ರೇರೇಪಿಸಿ ದ್ರಾವಿಡರಿಂದ ದ್ರಾವಿಡರನ್ನು ಹಿಂಸಿಸಿ ತಮ್ಮ ಕಡೆ ಬದಲಾಯಿಸಿಕೊಳ್ಳಬೇಕೆಂದು ಪ್ರಯತ್ನಿಸುತ್ತಿದ್ದಾರೆ. ನಾವು ದ್ರಾವಿಡರು

ಅನ್ನುವ ಸ್ಪೃಹ (ಜ್ಞಾಪಕ) ಇಲ್ಲದ ದ್ರಾವಿಡರು, ಕುರುಡರಂತೆ ದ್ರಾವಿಡರ ಮೇಲೆ ದಾಳಿಗಳು ಮಾಡುವುದಕ್ಕೆ ಪ್ರಯತ್ನಿಸುತ್ತಿದ್ದಾರೆ. ಇದೆಲ್ಲಾ ದ್ರಾವಿಡರಲ್ಲಿನ ಅಜ್ಞಾನ, ದ್ರಾವಿಡರ ಅಜ್ಞಾನವೇ ಈ ದಿನ ಆರ್ಯರಿಗೆ ಬಂಡವಾಳದಂತಿದ್ದು, ದ್ರಾವಿಡರನ್ನೇ ಬದಲಾಯಿಸುವುದಕ್ಕೆ ಆರ್ಯರ ಪಾದಗಳ ಹತ್ತಿರ ಬೀಳುವುದಕ್ಕೆ ಅವಕಾಶ ಕಲ್ಪಿಸುತ್ತಿದೆ.

ಅಲ್ಲಲ್ಲಿ ಎಲ್ಲಾದರೂ ದ್ರಾವಿಡ ಸ್ವಭಾವವಿರುವವರಿದ್ದರೆ, ಅವರನ್ನು ಸಹ ಬದಲಾಯಿಸುವುದಕ್ಕೆ ಆರ್ಯರು ಇಂದಿಗೂ ಪ್ರಯತ್ನಿಸುತ್ತಿದ್ದಾರೆಂದರೆ ಆರ್ಯರ ಛಲ, ಅವರ ಉದ್ದೇಶ ಎಷ್ಟು ಬಲವಾದುದೋ ಊಹಿಸಿಕೊಳ್ಳ ಬಹುದು. ಆರ್ಯರು ಬುದ್ಧಿವಂತರು, ಮೇಧಾವಿಗಳೆಂದು ಮೊದಲೇ ಹೇಳಿದ್ದೇವೆ. ದ್ರಾವಿಡರಲ್ಲಿ ಆ ಮೇಧಾಶಕ್ತಿ ಇಲ್ಲವೆಂದು ಒಪ್ಪಿಕೊಳ್ಳುವುದು ತಪ್ಪುವುದಿಲ್ಲ. ಆರ್ಯರ ಕೈಯಲ್ಲಿ ದ್ರಾವಿಡರು ಆಟದ ಗೊಂಬೆಗಳಂತೆ ಇಂದಿಗೂ ಆಡುವುದೇ ಅದಕ್ಕೆ ನಿದರ್ಶನ. ಒಂದು ಬಾರಿ ಪ್ರಪಂಚ ವ್ಯಾಪ್ತವಾಗಿ ದೊಡ್ಡ ಜ್ಞಾನಿಗಳು ಎಂದು ಹೆಸರುಹೊಂದಿ, ಜ್ಞಾನಿಗಳ ದೇಶವೆಂದು ಅರ್ಥವನ್ನು ಕೊಡುವ ಇಂದೂ ದೇಶ ಎಂದು ಪ್ರಪಂಚ ಪ್ರಜೆಗಳಿಂದ ಅನಿಸಿಕೊಂಡು, ಮೂರು ಆತ್ಮಗಳ ಜ್ಞಾನವನ್ನು ತಿಳಿದವರೆನ್ನುವ ಅರ್ಥದಿಂದ ದ್ರಾವಿಡ ಜಾತಿ ಎಂದು ಹೆಸರುಹೊಂದಿ, ಕೊನೆಗೆ ನಮ್ಮ ಚರಿತ್ರೆಯನ್ನು ನಾವೇ ಮರೆತುಹೋದ ದ್ರಾವಿಡರಾಗಿ ಉಳಿದುಹೋಗಿದ್ದೇವೆ. ಇಂದೂ ಶಬ್ಧವನ್ನು ಬಿಟ್ಟು ಕೊನೆಗೆ ಹಿಂದೂಶಬ್ಧದಿಂದ ಹಿಂದುಗಳಾಗಿ ಉಚ್ಛರಿಸಲ್ಪಡುತ್ತಿದ್ದೇವೆ. ದೇಹಿಭಕ್ತಿಯನ್ನು ಬಿಟ್ಟು, ದೇಶಭಕ್ತಿಯಲ್ಲಿ ಮುಳುಗಿದ ದ್ರಾವಿಡರು ರಾಮಲಕ್ಷ್ಮಣ ಪ್ರೇರಣೆಯಿಂದ, ಸುಗ್ರೀವ ಹನುಮಂತನ ಸೈನ್ಯ ದ್ರಾವಿಡೇಶ್ವರನಾದ ರಾವಣಬ್ರಹ್ಮನ ಮೇಲೆ ಹೋದಹಾಗೆ, ಇಂದಿಗೂ ಸಹ ತಮ್ಮ ಚರಿತ್ರೆಯನ್ನು ಮರೆತುಹೋದ ದ್ರಾವಿಡರು ಕೆಲವರು, ಆರ್ಯರ ಪ್ರೇರಣೆಯಿಂದ ಎಷ್ಟೋ ದ್ರಾವಿಡರು ಒಂದು ಸಂಘವನ್ನು ಅಥವಾ ಒಂದು ಗುಂಪನ್ನು ಸುಗ್ರೀವ ಸೈನ್ಯದಂತೆ ತಯಾರು ಮಾಡಿಕೊಂಡಿದ್ದಾರೆ. ಅದರ ಹೆಸರು ಜೈ ಆಂಜನೇಯ ಸಂಘ ಅಥವಾ ಜೈ ಹನುಮಾನ್ ದಳ

ಎಂದು ಹೆಸರು ಇಟ್ಟುಕೊಂಡು ತಿರುಗುತ್ತಾ ಒಬ್ಬರು ಅಥವಾ ಇಬ್ಬರು ಆರ್ಯರು ಮೇಲಿನಿಂದ ಪ್ರೇರೇಪಿಸಿದರೆ, ತಾವು ಯಾರೊಂದಿಗಾದರೂ ಘರ್ಷಣೆ ಮಾಡುವುದಕ್ಕೆ ಸಿದ್ಧವಾಗಿ ಇದ್ದಾರೆ. ಅಂತಹ ಸಂಘಗಳಲ್ಲಿ ಓದಿಕೊಂಡವರು, ಸೈನ್ಸ್ ತಿಳಿದವರು, ವಿಜ್ಞಾನಿಗಳು, ಎಷ್ಟೋ ಬುದ್ಧಿ ವಂತರಾದವರು ಸಹ ಇದ್ದಾರೆ. ಆದರೆ ಆದಿನ ದ್ರಾವಿಡರಾದ ನಾವು ದ್ರಾವಿಡರಲ್ಲಿ ಮುಖ್ಯನಾದ ರಾವಣಬ್ರಹ್ಮ ಮೇಲೆಯೇ ಯುದ್ಧಕ್ಕೆ ಹೋಗುತ್ತಿದ್ದೇವೆ ಎಂದು ಆಲೋಚಿಸದೇ ಹೋದಹಾಗೆ, ಈದಿನ ಸಹ ಜೈ ಹನುಮಾನ್ ದಳವಾಗಲೀ, ಜೈ ಆಂಜನೇಯ ಸಂಘವಾಗಲಿ ನಾವು ಯಾರ ಮೇಲೆ ದಾಳಿಗೆ ಹೂಗುತ್ತಿದ್ದೇವೆಂದು ಸ್ವಲ್ಪವೂ ಆಲೋಚಿಸುತ್ತಿಲ್ಲ. ಆರ್ಯರು ದ್ರಾವಿಡರ ಬೆರಳಿಂದ ದ್ರಾವಿಡರ ಕಣ್ಣನ್ನೇ ಚುಚ್ಚುತ್ತಿದ್ದರೂ, ನಮ್ಮ ಕಣ್ಣನ್ನು ನಾವೇ ಏಕೆ ಚುಚ್ಚಿಕೊಳ್ಳುತ್ತಿದ್ದೇವೆಂದು ಆಲೋಚಿಸದೆ ಹೋಗುವುದು ಆಶ್ಚರ್ಯ. ಆಂಜನೇಯ ಭಕ್ತರೆಂದು ಹೇಳಿಕೊಳ್ಳುವವರಾಗಲಿ, ಹನುಮಾನ್‌ದಳದವನೆಂದು ಹೇಳಿಕೊಳ್ಳುವವನಾಗಲಿ ಇಲ್ಲಿ ದಕ್ಷಿಣ ದೇಶದಲ್ಲಿ ಎಲ್ಲರೂ ದ್ರಾವಿಡರೆ ಇದ್ದಾರೆ. ಆದರೆ ಆಂಜನೇಯನಿಗೆ ಕೋತಿಮೂತಿ, ಉದ್ದ ಬಾಲ ಇರುತ್ತಿತ್ತಾ? ಎಂದು ಆಲೋಚಿಸದೆ ಅಂತಹ ಆಕಾರವಿರುವ ಗೊಂಬೆಯನ್ನೇ ಇಟ್ಟುಕೊಳ್ಳುವುದು ನಡೆಯುತ್ತಿದೆ. ಇಲ್ಲಿಯವರೆಗು ಅಂತಹ ಜಾತಿ ಹುಟ್ಟಲೇ ಇಲ್ಲ ಎಂದು ಒಂದುಕಡೆ ಸೈನ್ಸ್ ಹೇಳುತ್ತಿದ್ದರೂ, ಚರಿತ್ರೆಯಲ್ಲಿ ಎಲ್ಲೂ ಇಲ್ಲದ ರಾಮನ ಕಾಲದಲ್ಲೇ ಮಾತನಾಡುವ ದೊಡ್ಡ ಕೋತಿಗಳು, ಮನುಷ್ಯನನ್ನು ಹೋಲುವ ಕೋತಿಗಳು ಇರುತ್ತಿದ್ದವಾ ಎಂದು ಸ್ವಲ್ಪವಾದರೂ ಯೋಚಿಸಲಾರದೆ ಹೋಗುತ್ತಿದ್ದಾರೆ.

ಆ ದಿನ ರಾವಣಯುದ್ಧದಲ್ಲಿ ಬಳಸಿಕೊಂಡ ಗಿರಿಜನ ದ್ರಾವಿಡರನ್ನು, ಅಕ್ಕರೆ ತೀರಿದನಂತರ ಕೋತಿಗಳ ಹಾಗೆ ಹೋಲಿಸಿ ಚರಿತ್ರೆಯಲ್ಲಿ ಹೀನವಾಗಿ ಬರೆದರೂ, ಇದು ಒಳ್ಳೆಯದಾ ಅಥವಾ ಕೆಟ್ಟದಾ ಎಂದು ಗುರುತಿಸದ ಸ್ಥಿತಿಯಲ್ಲಿ ಇಂದಿನ ದ್ರಾವಿಡರು ಇರುವುದೇ ಅಲ್ಲದೆ, ಯುದ್ಧದಲ್ಲಿ ಮುಖ್ಯಪಾತ್ರವನ್ನು ಪೋಷಿಸಿದ ಆಂಜನೇಯನನ್ನು ಒಂದು ಕೋತಿಯಾಗಿ ಹೋಲಿಸಿ ಹೇಳಿದರೆ

ಚೆನ್ನಾಗಿದೆಯಾ? ರಾಮಾಯಣ ಚರಿತ್ರೆಯಲ್ಲಿ ರಾಮನಿಗೆ ಸಹಾಯವನ್ನು ಮಾಡಿದವರಲ್ಲಿ ಆಂಜನೇಯನು ಮುಖ್ಯನಾದಾಗ, ಆತನು ಮಾಡಿದ ಒಳ್ಳೆಯದನ್ನು ಮರೆತು ಆರ್ಯನಾದ ರಾಮನಿಗೆ ಭಕ್ತನು ಸೇವಕ ಎನ್ನುವಹಾಗೆ ಆಂಜನೇಯನನ್ನು ತೋರಿಸಿದ್ದಾರೆ. ನಾವು ಭಕ್ತನೆಂದುಕೊಂಡರೂ, ಅವರ ಲೆಕ್ಕದಲ್ಲಿ ಸೇವಕನಂತೆ ಇರುವಹಾಗೆ ರಾಮನ ಕಾಲಿನ ಹತ್ತಿರ ಆಂಜನೇಯನನ್ನು ಇಡುವುದು ನಡೆದಿದೆ. ಒಂದು ವೇಳೆ ಯಾರಾದರೂ ರಾಮನ ಭಕ್ತನು ಆಂಜನೇಯನು ಅನ್ನುವುದಕ್ಕೆ, ಕಿಷ್ಕಿಂಧ ಅರಣ್ಯದಲ್ಲಿ ಒಂದೇ ಬಾರಿ ಹೊರತು ರಾಮನ ಪರಿಚಯವೇ ಇಲ್ಲದ ಆಂಜನೇಯನು ಯಾವಾಗ ರಾಮನನ್ನು ದೊಡ್ಡದಾಗಿ ಕಂಡುಕೊಂಡಿದ್ದಾನೋ ಹೇಳಬಲ್ಲಿರಾ? ಹೇಳಲಾರರು. ಲಂಕೆಯಲ್ಲಿ ವಿಜಯವನ್ನು ಸಾಧಿಸಿದ ನಂತರ ಆಂಜನೇಯನು ಎರಡನೆ ಬಾರಿ ರಾಮನೊಂದಿಗೆ ಭೇಟಿಮಾಡಲಿಲ್ಲ. ಆತನು ತನ್ನವರಾದ ದ್ರಾವಿಡರ ಹತ್ತಿರವೇ ಉಳಿದುಕೊಂಡಿದ್ದಾನೆ. ರಾಮನು ಒಬ್ಬ ಯುವರಾಜನಾಗಿ ಅಯೋಧ್ಯೆಯಲ್ಲಿ ದಶರಥ ಕುಮಾರನಾಗಿ ಆಂಜನೇಯನಿಗೆ ಪರಿಚಯವಾಗಿದ್ದಾನೆ ಹೊರತು, ಎಂದಾದರೂ ಆಂಜನೇಯನಿಗೆ ರಾಮನು ದೈವಜ್ಞಾನವನ್ನು ಬೋಧಿಸಿದ್ದಾನಾ ಅಥವಾ ನಾನು ದೇವರೆಂದು ಹೇಳಿದ್ದಾನಾ? ಏನೂ ಹೇಳದೇ ರಾಮನಿಗೆ ಆಂಜನೇಯನು ಯಾವ ವಿಧವಾಗಿ ಭಕ್ತನಾಗಿದ್ದಾನೆಂದು ಯಾರಾದರು ಆಲೋಚನೆ ಮಾಡಿದ್ದೀರಾ? ಇಲ್ಲ. ಯಾರೋ ಏನೋ ಹೇಳಿದರೆ ಕುರುಡರಂತೆ ನಂಬುವುದು ಹೊರತು ನಮಗೆ ದೃಷ್ಠಿ ಇಲ್ಲವೆ? ದೃಷ್ಠಿ ಇದ್ದರೆ ಇಂದಿಗಾದರೂ ಆಂಜನೇಯನು ಕೋತಿ ಅಲ್ಲ ಸುಂದರವದನನಾದ ಏಳು ಅಡಿಗಳ ಆಜಾನು ಬಾಹುನಂತೆ ನೋಡಿರಿ. ಆಂಜನೇಯನು ಅಂದವಾಗಿ, ಆರೋಗ್ಯವಾಗಿ, ಏಳು ಅಡಿಗಳ ಎತ್ತರ ಇರುವವನಾಗಿ ಏಕೆ ಹುಟ್ಟಿದ್ದಾನೋ ನೋಡೋಣ. ಆದಿನ ಗಿರಿಜನ ದ್ರಾವಿಡ ಜಾತಿಯಲ್ಲಿ ಆಂಜನೇಯನು ಎರಡು ವರ್ಷಗಳ ಬಾಲಕನಾಗಿದ್ದಾಗಲೇ, ಅವರ ಮನೆಮುಂದೆ ನೀರಿಗಾಗಿ ತೆಗೆದ ಆಳ ಕಡಿಮೆ ಇರುವ ಗುಂಡಿಯಲ್ಲಿ ಬೀಳುವುದು ನಡೆದಿದೆ. ರಾತ್ರಿಹೊತ್ತು ಬಯಲಿನಲ್ಲಿ

ತಾಯಿ ಅಂಜನಾದೇವಿ ಪಕ್ಕದಲ್ಲಿ ಮಲಗಿಕೊಂಡಿರುವ ಬಾಲಕನಾದ ಆಂಜನೇಯನು, ನಡು ಜಾವದಲ್ಲಿ ನಿದ್ರೆಯಿಂದ ಎದ್ದು ಮೊಣಕಾಲುಗಳ ಮೇಲೆ ದೊಗ್ಗಾಡುತ್ತಾ ಗುಂಡಿಯಕಡೆ ಹೋಗಿ, ಗುಂಡಿಯೊಳಗೆ ನೋಡುವುದು ನಡೆದಿದೆ. ಆ ದಿನ ಹುಣ್ಣಿಮೆ ಆಗಿರುವುದರಿಂದ ಗುಂಡಿಯೊಳಗೆ ನೋಡಿದ ಬಾಲ ಆಂಜನೇಯನಿಗೆ, ನಿಂತಿರುವ ನೀರಿನಲ್ಲಿ ಮೇಲೆ ಆಕಾಶ ಮಧ್ಯದಲ್ಲಿ ದುಂಡಾದ ಚಂದ್ರನು ಕಾಣಿಸಿದ್ದಾನೆ. ಕನ್ನಡಿಯಂತಿರುವ ನೀರಲ್ಲಿ ಆಕಾಶದಲ್ಲಿನ ಚಂದ್ರನು ತನ್ನ ಮುಂದೆ ನೀರಿನಲ್ಲಿ ಇರುವಹಾಗೆ ಕಾಣಿಸಿದ್ದಾನೆ. ಆ ದೃಶ್ಯವನ್ನು ನೋಡಿದ ಆಂಜನೇಯನು ಚಂದ್ರನನ್ನು ಬಿಳಿ ಹಣ್ಣಿನಂತೆ ಹೋಲಿಸಿಕೊಂಡು, ಆ ಹಣ್ಣನ್ನು ಹಿಡಿದುಕೊಳ್ಳುವುದಕ್ಕೆ ಮುಂದಕ್ಕೆ ಹೋಗಿ ಮೊಣಕಾಲು ಆಳ ಸಹ ಇಲ್ಲದ ನೀರಿನಲ್ಲಿ ಬಿದ್ದಿದ್ದಾನೆ. ನೀರಿನಲ್ಲಿ ಬಿದ್ದ ಕೂಡಲೇ ಅಳಲು ಆರಂಭಿಸಿದ್ದಾನೆ. ಆಗ ಹತ್ತಿರದಲ್ಲೇ ಇದ್ದ ತಾಯಿ ಉಳಿದವರು ಎಲ್ಲರೂ ಎದ್ದು ಬಾಲ ಆಂಜನೇಯನನ್ನು ಎತ್ತಿಕೊಳ್ಳುವುದು, ಮುದ್ದುಮಾಡುವುದು ನಡೆದಿದೆ. ಆಂಜನೇಯನು ಗುಂಡಿಯವರೆಗು ಹೋಗಿ ಏಕೆ ಗುಂಡಿಯಲ್ಲಿ ಬಿದ್ದಿರುವುದು ಯಾರಿಗೂ ತಿಳಿಯದು. ಅಷ್ಟಕ್ಕೆ ಆ ಸಮಸ್ಯೆ ಬಗೆಹರಿಯಿತು, ಅದನ್ನು ಕುರಿತು ಯಾರು ಆಲೋಚನೆಮಾಡಲಿಲ್ಲ.

ಆದರೆ ಬಾಲ ಆಂಜನೇಯನು ಪ್ರಾತಃಕಾಲದಲ್ಲೇ ಎದ್ದು ಆಟವಾಡಿ ಕೊಳ್ಳುತ್ತಿದ್ದನು. ಹಾಗೇ ಮರುದಿನವೂ ಸಹ ಎದ್ದು ಪ್ರಾತಃಕಾಲದ ಸಮಯದಲ್ಲಿ ಹೊರಗೆ ಆಡಿಕೊಳ್ಳುತ್ತಾ ಉದಯಿಸುತ್ತಿರುವ ಸೂರ್ಯನನ್ನು ನೋಡುವುದು ನಡೆದಿದೆ. ಆಗ ಆಂಜನೇಯನು ಕೇಕೆ ಹೊಡೆಯುತ್ತಾ ಸೂರ್ಯನನ್ನು ನೋಡಿ ಎಗರುತ್ತಾ ಇರುವುದನ್ನು ತಾಯಿ ಗ್ರಹಿಸಿದಳು. ಅದೇ ವಿಧವಾಗಿ ಪ್ರತಿ ದಿನ ಬೆಳಗ್ಗೆ ಉದಯಿಸುತ್ತಿರುವ ಸೂರ್ಯನನ್ನು ನೋಡುವುದೂ, ಸೂರ್ಯನ ಕಡೆಗೆ ಬೆರಳನ್ನು ತೋರಿಸುತ್ತಾ ಸಂತೋಷಪಡುವುದನ್ನು ತಾಯಿ ಗಮನಿಸಿ, ನಡೆಯುತ್ತಿರುವ ವಿಷಯವನ್ನು ಹಿರಿಯನಾದ, ಬಹಳ ಬುದ್ಧಿವಂತನಾದ ಜಾಂಬವಂತನಿಗೆ ತಿಳಿಸಿದಳು. ಅದನ್ನು ಕೇಳಿದ ಜಾಂಬವಂತನು ಚೆನ್ನಾಗಿ

ಯೋಚಿಸಿ ನಂತರ ಬಂದ ಹುಣ್ಣಿಮೆ ದಿನ ರಾತ್ರಿಹೊತ್ತು ಚಂದ್ರನು ಮೇಲಕ್ಕೆ ಬಂದ ನಂತರ ಆಂಜನೇಯನನ್ನು ಎಬ್ಬಿಸಿ ಚಂದ್ರನನ್ನು ತೋರಿಸುವುದು ನಡೆದಿದೆ. ಆಗ ಚಂದ್ರನನ್ನು ನೋಡಿದ ಆಂಜನೇಯನು ಸೂರ್ಯೋದಯದಲ್ಲಿ ಸೂರ್ಯನನ್ನು ನೋಡಿದಹಾಗೆ ಸಂತೋಷಪಟ್ಟನು. ಆಗ ಜಾಂಬವಂತನಿಗೆ ಸ್ವಲ್ಪ ವಿಷಯ ಅರ್ಥವಾಗಿ, ಮೊದಲು ನಡೆದುಹೋದ ಹುಣ್ಣಿಮೆ ದಿನ ಆಂಜನೇಯನು ನೀರಿನಲ್ಲೇ ಮೇಲಿರುವ ಚಂದ್ರನನ್ನು ನೋಡಿದ್ದಾನೆಂದು, ಅದೇ ಆಕಾರದಲ್ಲಿರುವ ಉದಯಿಸುವ ಸೂರ್ಯನನ್ನು ನೋಡಿದಾಗ ಚಂದ್ರಬಿಂಬ ಆಕಾರವೇ ಕಾಣಿಸುತ್ತಿದೆಯೆಂದೂ ಆಂಜನೇಯನು ಅಂದುಕೊಂಡ ಹಾಗೆ ಜಾಂಬವಂತನು ಗ್ರಹಿಸಿದನು. ಆ ವಿಷಯವೆಲ್ಲವನ್ನು ಆಂಜನೇಯನ ತಾಯಿಗೆ ಸ್ಪಷ್ಟವಾಗಿ ಹೇಳಿದ್ದಾನೆ. ಹಾಗೆ ಹೇಳುವುದೇ ಅಲ್ಲದೆ, ಪ್ರತಿ ದಿನ ಆಂಜನೇಯನನ್ನು ಬಟ್ಟೆಗಳಿಲ್ಲದೆ ಬೆಳದಿಂಗಳಲ್ಲಿ ಮಲಗಿಸೆಂದು ಹೇಳಿದ್ದಾನೆ.

ಹಾಗೆ ಬೆಳದಿಂಗಳಲ್ಲಿ ಮಲಗಿಸಿದರೆ ಆಂಜನೇಯನು ಚಂದ್ರನ ಕಡೆಯೇ ನೋಡುತ್ತಾ ನಿದ್ರೆಹೋಗುವನೆಂದೂ, ಬೆಳದಿಂಗಳಲ್ಲಿ ನಿದ್ರೆ ಹೋಗುವುದರಿಂದ ಚಂದ್ರನ ಕಿರಣಗಳು ಆಂಜನೇಯನ ಶರೀರದ ಮೇಲೆ ಪ್ರತಿ ದಿನ ಬೀಳುತ್ತವೆ ಎಂದೂ, ಚಂದ್ರಕಿರಣಗಳು ನಿತ್ಯವೂ ಆಂಜನೇಯನ ಶರೀರದ ಮೇಲೆ ಬೀಳುವುದರಿಂದ ಚಂದ್ರಕಿರಣಗಳಲ್ಲಿ ಇರುವ ಔಷಧ ಗುಣಗಳು, ಔಷಧ ಪ್ರಭಾವಗಳು ಆಂಜನೇಯನ ಶರೀರವನ್ನು ಸೇರಿ, ಆಂಜನೇಯನನ್ನು ವಜ್ರಕಾಯ ಇರುವವನಾಗಿ ಮಾಡುತ್ತದೆಂದು, ಈ ವಿಧವಾಗಿ ನಿತ್ಯ ಬಯಲಿನಲ್ಲಿ ಶರೀರವೆಲ್ಲಾ ಬೆಳದಿಂಗಳು ತಾಕುವ ಹಾಗೆ ಹನ್ನೆರಡು ವರ್ಷಗಳು ಯಾರಾದರೂ ಮಲಗುವುದಾದರೆ, ಅಂತಹವನಿಗೆ ಶರೀರ ದೃಢವಾಗಿ ಬೆಳೆಯುವುದೇ ಅಲ್ಲದೆ, ರೋಗಗಳು ಬಾರದ ಆರೋಗ್ಯ ಶರೀರವಾಗಿ ಇರುತ್ತದೆಂದು ಜಾಂಬವಂತನು ತಿಳಿಸಿದಾಗ, ಅಂದಿನಿಂದ ಆಂಜನೇಯನ ತಾಯಿ ಜಾಂಬವಂತನು ಹೇಳಿದಹಾಗೆ ಮಾಡಿದಳು. ಹನ್ನೆರಡು ವರ್ಷಗಳು ಏಕಧಾಟಿಯಾಗಿ ಒಂದು ದಿನ ಸಹ ಬಿಡದೆ ಹೊರಗೆ ಮಲಗುತ್ತಿದ್ದನು. ಆ ವಿಧವಾಗಿ ಮಲಗುವುದರಿಂದ ಅಮಾವಾಸ್ಯೆ

ಮುಂದೆ ಹಿಂದೆ ಎರಡು ಮೂರು ದಿನಗಳು ಹೊರತು ಉಳಿದ ಎಲ್ಲ ದಿನಗಳಲ್ಲಿ ಚಂದ್ರಕಿರಣಗಳು ಆಂಜನೇಯನ ಶರೀರವನ್ನು ತಾಕುತ್ತಿದ್ದವು. ಚಂದ್ರ ಕಿರಣಗಳು ತಾಕುವುದರಿಂದ ಆತನು ದೃಢಕಾಯ ಇರುವವನೇ ಅಲ್ಲದೆ, ಏಳು ಅಡಿಗಳ ಎತ್ತರವೂ ಸಹ ಬೆಳದಿದ್ದಾನೆ. ಹಾಗೆ ಚಂದ್ರಕಿರಣಗಳಿಂದ ಏಳು ಅಡಿಗಳ ದೃಢಕಾಯ ಲಭಿಸುವುದೇ ಅಲ್ಲದೆ, ಮತ್ತೊಂದು ಮೇಲು ಸಹ ನಡೆದಿದೆ.

ಚಂದ್ರನ ಬೆಳದಿಂಗಳಲ್ಲಿನ ಚಂದ್ರಕಿರಣಗಳಲ್ಲಿ ಔಷಧ ಪ್ರಭಾವವಿರುತ್ತದೆ ಆದ್ದರಿಂದ ದೃಢಕಾಯ ಬೆಳದಿದೆ. ಹಾಗೇ ಚಂದ್ರಕಿರಣಗಳಲ್ಲಿ ಔಷಧ ಗುಣಗಳೇ ಅಲ್ಲದೆ, ಜ್ಞಾನ ಕಿರಣಗಳು ಸಹ ಇರುವುದರಿಂದ, ಶರೀರದೊಂದಿಗೆ ಜ್ಞಾನ ಜಿಜ್ಞಾಸೆ ಸಹ ಬೆಳೆಯುವುದು ಹಾಗೆ ಆತ್ಮನಿಂದ ಆತ್ಮಜ್ಞಾನ ಬರುವುದು ನಡೆಯುತ್ತಿತ್ತು. ಹನ್ನೆರಡು ವರ್ಷಗಳು ಬೆಳದಿಂಗಳಲ್ಲಿ ಮಲಗುವುದರಿಂದ ಇತ್ತ ಆರೋಗ್ಯ ಬಲವೂ, ಅತ್ತ ಜ್ಞಾನ ಬಲವೂ, ಎರಡೂ ಲಭಿಸಿವೆಯೆಂದು ಹೇಳಬಹುದು. ಅಂದಿನ ಕಾಲದಲ್ಲಿ ಆಂಜನೇಯನು ಗಿರಿಜನ ದ್ರಾವಿಡ ಜಾತಿಯವನಾದ್ದರಿಂದ ಅವರ ಹಿರಿಯರಿಂದ ತ್ರೈತ ಸಿದ್ಧಾಂತ ಜ್ಞಾನ, ದ್ರಾವಿಡ ಅರ್ಥವನ್ನು ಕೊಡುವ ಮೂರು ಆತ್ಮಗಳ ಜ್ಞಾನ ಆಂಜನೇಯನಿಗೆ ಚೆನ್ನಾಗಿ ಅಭ್ಯಾಸವಾಯಿತು. ಚಂದ್ರನ ನೋಟವಾದ ಬೆಳದಿಂಗಳಿಂದ ಆಂಜನೇಯನ ಶರೀರದಲ್ಲಿ ಅಸಲಾದ ಜ್ಞಾನ ಪ್ರತಿಷ್ಠಿಸಲ್ಪಟ್ಟಿದೆ. ಆದ್ದರಿಂದ ಆಂಜನೇಯನು ಇಪ್ಪತ್ತು ವರ್ಷಗಳಿಗೇ ದೊಡ್ಡ ಜ್ಞಾನಿಯಾಗಿದ್ದಾನೆ. ಆತನಿಗೆ ತಿಳಿದ ಜ್ಞಾನ ಮೂರು ಆತ್ಮಗಳ ಜ್ಞಾನವಾದ್ದರಿಂದ, ವ್ಯಕ್ತಿ ಪೂಜೆ ಮಾಡುವುದಕ್ಕೆ ತ್ರೈತ ಸಿದ್ಧಾಂತ ಜ್ಞಾನ ಒಪ್ಪಿಕೊಳ್ಳುವುದಿಲ್ಲವಾದ್ದರಿಂದ, ವ್ಯಕ್ತಿ ಪೂಜೆ ಇದರಲ್ಲಿ ಇರುವುದಿಲ್ಲ. ಬೆಳದಿಂಗಳಲ್ಲಿ ಹನ್ನೆರಡು ವರ್ಷಗಳು ಚಿಕ್ಕ ಗೋಚಿಯಿಂದಾಗಲೀ, ಚೆಡ್ಡಿಯಿಂದಾಗಲೀ ಇರುತ್ತಾ ಶರೀರವೆಲ್ಲಾ ಬೆಳದಿಂಗಳು ಬೀಳುವಹಾಗೆ ಮಲಗುವುದಾದರೆ, ಯಾರಿಗಾದರೂ ಇತ್ತ ಆರೋಗ್ಯ ಅತ್ತ ಜ್ಞಾನ ಎರಡೂ ಲಭಿಸುತ್ತವೆ. ಅಡವಿಯಲ್ಲಿನ ದ್ರಾವಿಡ ಜಾತಿಯವರಿಗೆ ಆರ್ಯರ ಗಾಳಿ ಸೋಕದ ಕಾರಣದಿಂದ ರಾಮನು ಕಿಷ್ಕಿಂಧೆಗೆ ಬಂದಾಗ ಅವರು ಪೂರ್ತಿ ಜ್ಞಾನಿಗಳಾಗೇ

ಇದ್ದರು. ಆಪತ್ತಿನಲ್ಲಿರುವವರನ್ನು ರಕ್ಷಿಸುವ ಸ್ವಭಾವವಿರುವುದರಿಂದ ಆದಿನ ಅರಣ್ಯದೊಳಗೆ ಬಂದ ರಾಮನಿಗೆ ಸಹಾಯ ಮಾಡಿದ್ದಾರಾಗಲೀ, ರಾಮನನ್ನು ಅವರು ದೇವರೆಂದು ನಂಬಲಿಲ್ಲ. ಹಾಗೆ ನಂಬುವುದಕ್ಕೆ ಅವರಿಗೆ ಅವಕಾಶವೇ ಇಲ್ಲ. ಏಕೆಂದರೆ! ಸೂರ್ಯನು ಹೇಳಿದ ದೈವಜ್ಞಾನವನ್ನು, ಮನುವಿನಿಂದ ತಿಳಿದಿರುವ ಜ್ಞಾನವನ್ನು ತಮ್ಮ ಹಿರಿಯರಿಂದ ತಿಳಿದು ಸಂಪೂರ್ಣ ಜ್ಞಾನಿಗಳಾಗಿದ್ದೂ, ಮೂರು ಆತ್ಮಗಳ ಜ್ಞಾನವನ್ನು ತಿಳಿದ ದ್ರಾವಿಡರಾಗಿ ಇರುವುದರಿಂದ, ಅವರು ಮನುಷ್ಯರನ್ನು ದೇವರಾಗಿ ನಂಬದ ಆತ್ಮಜ್ಞಾನಿಗಳೆಂದು ಹೇಳಬಹುದು. ಅಂತಹ ದ್ರಾವಿಡರಲ್ಲಿ ಮುಖ್ಯವಾದ ಆತ್ಮಜ್ಞಾನಿ ಆದ ಆಂಜನೇಯನು ತನ್ನ ಅಂತರಾತ್ಮವನ್ನು ಬಿಟ್ಟು ಹೊರಗಿನ ಮನುಷ್ಯನನ್ನು ದೇವರೆನ್ನುವುದಕ್ಕೆ ಅವಕಾಶವೇ ಇಲ್ಲ. ಅಂತಹ ಜ್ಞಾನಿಯನ್ನು ಆರ್ಯರು ಅವಮಾನಿಸುವುದಕ್ಕೆ ಅಲ್ಲವೆ ರಾಮನ ಕಾಲಿನ ಹತ್ತಿರ ಕೂರಿಸಿರುವುದು?

ಈ ವಿಧವಾಗಿ ಹೇಳುತ್ತಾಹೋದರೆ ಹೇಳಿದಷ್ಟು, ಬಿಚ್ಚುತ್ತಾ ಹೋದರೆ ಬಿಚ್ಚಿದಷ್ಟು ಆರ್ಯರು ದ್ರಾವಿಡರ ಮೇಲೆ ಮಾಡಿದ ಮೋಸಗಳು, ತಂತ್ರ, ಕುತಂತ್ರಗಳು ಹೊರಬೀಳುತ್ತಲೆ ಇರುತ್ತವೆ. ಬಗ್ಗುವವನಿದ್ದರೆ ಅವನ ಮೇಲೆ ಕುಳಿತುಕೊಳ್ಳುವವನಿರುತ್ತಾನೆ ಎನ್ನುವ ಗಾದೆ ಹೇಳಿದಂತೆ, ಮೋಸಹೋಗುವ ವರಿದ್ದರೆ ಮೋಸ ಮಾಡುವವರು ಎಲ್ಲಾದರೂ ಇರುತ್ತಾರೆ. ಮೋಸಹೋಗುವುದಿಲ್ಲ ಎಂದು ಜಾಗ್ರತೆಯಿಂದ ಇರುವವನನ್ನು ಯಾರೂ ಮೋಸ ಮಾಡಲಾರರು. ಅಜಾಗ್ರತೆಯಿಂದ ಇರುವವನನ್ನು ಮೋಸ ಮಾಡುವುದಕ್ಕೆ ಯಾರೋ ಎಲ್ಲಿಂದಲೋ ಬರಬೇಕಾದ ಅವಶ್ಯವಿಲ್ಲ. ಮನೆಯಲ್ಲಿರುವವರೇ ಅಂತಹವನನ್ನು ಮೋಸ ಮಾಡಬಲ್ಲರು. ಆದ್ದರಿಂದ ದ್ರಾವಿಡರಾದವರು ಇಂದಿಗಾದರೂ ಜಾಗ್ರತೆಯಿಂದ ಆರ್ಯರಿಂದ ಮೋಸಹೋಗದಂತೆ ಜ್ಞಾಪಕದಿಂದ ಇರಬೇಕೆಂದು ತಿಳಿಸುತ್ತಿದ್ದೇನೆ.

(ಈ ವಿಧವಾಗಿ ನಾನು ಹೇಳುತ್ತಿರುವ ಮಾತುಗಳನ್ನು ಕೇಳಿ ಒಬ್ಬ ವ್ಯಕ್ತಿ ಸ್ವಲ್ಪಮಟ್ಟಿಗೆ ನನ್ನೊಂದಿಗೆ ಮಾತನಾಡಿ ಕೆಲವು ಪ್ರಶ್ನೆಗಳು ನನ್ನನ್ನು ಕೇಳಿದ್ದಾನೆ. ಈ ವಿಧವಾಗಿ ನಮ್ಮ ಚರ್ಚೆ ಸಾಗಿತು.)

**ಪ್ರಶ್ನೆ :–** ನೀವು ಹೇಳಿರುವವು ಒಳ್ಳೆ ಮಾತುಗಳಾಗೇ ಇವೆ ಆದರೆ, ಅವುಗಳಲ್ಲಿ ಕೆಲವು ವಿಷಯಗಳ ಮೇಲೆ ನೀವು ಹೇಳಿರುವುದು ನಮಗೆ ಅರ್ಥವಾಗಲಿಲ್ಲ. ನಮ್ಮ ದೇಶ ಭಾರತದೇಶ, ಭಾರತದೇಶದಲ್ಲಿರುವವರೆಲ್ಲರೂ ಭಾರತೀಯರೇ. ಈಗಿರುವುದು ಅಷ್ಟೇ ಅಲ್ಲವೆ! ಈಗಿನದು ಈಗ ನೋಡಿಕೊಳ್ಳದೆ ಯಾವಾಗಿನದೋ ನೋಡಿಕೊಳ್ಳಬೇಕಾದ ಕೆಲಸವೇನಿದೆ? ಯಾವಾಗಲೊ ಯಾವ ಯುಗದಲ್ಲೋ ಇರುವ ಆರ್ಯರೊಂದಿಗೂ ದ್ರಾವಿಡರೊಂದಿಗೂ ನಮಗೇನು ಕೆಲಸ? ನಮ್ಮ ಬದುಕು ನಾವು ನೋಡಿಕೊಂಡರೇ ಸರಿಹೋಗುವುದಿಲ್ಲವೆ? ಇದಕ್ಕೆ ನೀವೇನನ್ನುತ್ತೀರಾ?

**ಉತ್ತರ :–** ಹಾಗೆ ಎಲ್ಲರೂ ನಮ್ಮ ಬದುಕು ನಾವು ನೋಡಿಕೊಳ್ಳುತ್ತೇವೆಂದರೆ ತಪ್ಪಿಲ್ಲ ಆದರೇ, ನಾವು ಏಕೆ ಹುಟ್ಟಿದ್ದೇವೆ? ಏಕೆ ಬದುಕುತ್ತಿದ್ದೇವೆ? ಏಕೆ ಸಾಯುತ್ತಿದ್ದೇವೆ? ಎಂದು ತಿಳಿಯದೆ ಹೋದರೆ ಮನುಷ್ಯನಿಗೂ ಪ್ರಾಣಿಗೂ ಏನೂ ವ್ಯತ್ಯಾಸ ಇಲ್ಲವೆಂದು ಎನ್ನುತ್ತೇನೆ. ಒಬ್ಬ ಮನುಷ್ಯ ನಿಜವಾಗಿ ಮನುಷ್ಯನಾಗಿ ಬದುಕಬೇಕೆಂದರೆ ತಾನು ಯಾರು? ಎಲ್ಲಿಂದ ಬಂದಿದ್ದೇನೆ? ಎ ಲ್ಲಿಗೆ ಹೋಗುತ್ತೇನೆ? ಎನ್ನುವ ಕನಿಷ್ಠ ಜ್ಞಾನವಾದರೂ ಇರಬೇಕು. ಹಾಗಲ್ಲದೆ ಮನುಷ್ಯ ಪ್ರಾಣಿಯಾಗಿ ಬದುಕುತ್ತೇನೆಂದರೆ ಅವನಿಗೆ ಏನೂ ಅವಶ್ಯವಿಲ್ಲ. ನಿನ್ನ ಮಾತಿನ ಪ್ರಕಾರ ಯಾವಾಗಲೋ ಇದ್ದ ದ್ರಾವಿಡರೊಂದಿಗಾಗಲೀ, ಆರ್ಯರೊಂದಿಗಾಗಲೀ ಅವಶ್ಯವಿಲ್ಲ ಎಂದು ಅಂದುಕೊಳ್ಳೋಣ. ಈಗ ನೀನು ಭಾರತೀಯನೇ ಎಂದು ಎನ್ನುತ್ತಿದ್ದೀಯ. ನೀನು ಭಾರತೀಯನಾಗಿ ಯಾವಾಗ ಆಗಿದ್ದೀಯೋ ಹೇಗೆ ಆಗಿದ್ದೀಯೋ ಅದಾದರೂ ನಿನಗೆ ತಿಳಿದಿರಬೇಕಲ್ಲವೆ! ನಮ್ಮ ಬದುಕು ನಾವು ನೋಡಿಕೊಂಡರೆ ಸರಿಹೋಗುವುದಿಲ್ಲವೆ ಎಂದು ಸಹ ಅಂದಿದ್ದೀಯ. ಬದುಕೆಂದರೆ ಸಂಪಾದಿಸಿಕೊಂಡು ತಿನ್ನುವುದೇನಾ? ಅದೇ ಬದುಕಾದರೆ ಪಶುಗಳು ಸಹ ಅದೇ ಕೆಲಸವನ್ನೇ ಮಾಡುತ್ತಿವೆ. ಯಾವುದೋ ಒಂದು ಸಂಪಾದಿಸಿಕೊಂಡು ತಿಂದು ಬದುಕುತ್ತಿವೆ. ಬದುಕೆಂದರೆ ಅಷ್ಟೇನಾ?

**ಪ್ರಶ್ನೆ :–** ಮನುಷ್ಯ ಪ್ರಾಣಿಯಾಗಿ ಅಲ್ಲದೆ ಒಬ್ಬ ಮನುಷ್ಯನಾಗಿ ಬದುಕಬೇಕೆಂದರೆ ಏನು ಮಾಡಬೇಕು?

**ಉತ್ತರ :–** ತನಗಿಂತ ಮೊದಲು ನಡೆದು ಹೋದ ಚರಿತ್ರೆಯನ್ನು ನೋಡಬೇಕು. ಅದರಲ್ಲಿ ಒಳ್ಳೆಯದು ಯಾವುದೋ ಗ್ರಹಿಸಬೇಕು. ಒಳ್ಳೆಯ ಚರಿತ್ರೆಯನ್ನು ಆಧಾರ ಮಾಡಿಕೊಂಡು ಬದುಕಿದರೆ ಮನುಷ್ಯ ಮನುಷ್ಯನಹಾಗೆ ಬದುಕಬಲ್ಲನು.

**ಪ್ರಶ್ನೆ :–** ನಡೆದ ಚರಿತ್ರೆಗಳು ಅನೇಕ ಇವೆ. ಅದರಲ್ಲಿ ಯಾವುದು ಒಳ್ಳೆಯ ಚರಿತ್ರೆಯೊ, ಯಾವುದು ಕೆಟ್ಟ ಚರಿತ್ರೆಯೊ ಹೇಗೆ ಗುರ್ತಿಸಬಲ್ಲೆವು?

**ಉತ್ತರ :–** ಎಷ್ಟು ಚರಿತ್ರೆಗಳಿದ್ದರೂ ಎಲ್ಲಾ ಮನುಷ್ಯನಿಂದ ಏರ್ಪಟ್ಟಿದ್ದರೂ, ಕೆಲವು ಮಾತ್ರ ದೇವರಿಂದ ಏರ್ಪಟ್ಟಿರುವವು ಇರುತ್ತವೆ. ಮನುಷ್ಯರ ಚರಿತ್ರೆಗಳನ್ನು ಬಿಟ್ಟು ದೇವರು ಹೇಳಿದ ಚರಿತ್ರೆಯನ್ನು ತಿಳಿದು ಬದುಕಿದರೆ ಅದೇ ನಿಜವಾದ ಮಾನವ ಜನ್ಮ ಆಗುತ್ತದೆ. ಹಾಗಲ್ಲದೇ ಹೋದರೆ ನಾನು ಮನುಷ್ಯನೇ ಅಂದುಕೊಂಡರೂ ಅವನು ಪ್ರಾಣಿಯೊಂದಿಗೆ ಸಮಾನವಾಗುವನೆಂದು ಜ್ಞಾಪಕದಲ್ಲಿಟ್ಟುಕೋ.

**ಪ್ರಶ್ನೆ :–** ಇದಕ್ಕೂ ಮೊದಲು ಆರ್ಯರು ದ್ರಾವಿಡರು ಎಂದು ಎರಡು ತರಗತಿಗಳವರನ್ನು ಕುರಿತು ಹೇಳಿದ್ದೀರ. ಆ ಎರಡು ಜಾತಿಯವರು ನಮ್ಮದು ಒಳ್ಳೆಯ ಚರಿತ್ರೆಯೆಂದು ಒಬ್ಬರಂದರೆ, ನಮ್ಮದು ಒಳ್ಳೆಯ ಚರಿತ್ರೆ ಎಂದು ಇನ್ನೊಬ್ಬರು ಅನ್ನುತ್ತಿದ್ದಾರೆ. ಯಾರದು ಒಳ್ಳೆಯದನ್ನುವುದಕ್ಕೆ ಮನುಷ್ಯರು ಹೇಳಿರುವುದನ್ನು ನೋಡಬೇಡ, ದೇವರು ಹೇಳಿರುವುದನ್ನು ನೋಡೆಂದು ನೀವೇ ಹೇಳಿತ್ತಿದ್ದೀರ. ನಮಗೆ ಚರಿತ್ರೆಯಲ್ಲಿ ಎಲ್ಲಾ ಮನುಷ್ಯರೇ ಕಾಣಿಸುತ್ತಿದ್ದಾರೆ ಹೊರತು ದೇವರು ಎಲ್ಲೂ ಕಾಣಿಸಲಿಲ್ಲ. ಅಂತಹದರಲ್ಲಿ ದೇವರ ಚರಿತ್ರೆಗೋಸ್ಕರ ಎಲ್ಲಿ ಹುಡುಕಬೇಕು? ಯಾವುದು ದೇವರ ಚರಿತ್ರೆಯೆಂದು ತಿಳಿಯಬೇಕು. ನೀವು ಹೇಳಬಲ್ಲಿರಾ?

**ಉತ್ತರ :–** ಆರ್ಯರು ದ್ರಾವಿಡರು ಅನ್ನುವ ಎರಡು ಹೆಸರುಗಳು ಎರಡು ಅರ್ಥಗಳಿಂದ ಕೂಡಿಕೊಂಡಿವೆ. ಆರ್ಯರು ಅಂದರೆ ಗುರುಗಳು ಎಂದು ಅರ್ಥ ಇರುವಾಗ, ದ್ರಾವಿಡ ಎಂದರೆ ಮೂರು ಆತ್ಮಗಳ ಜ್ಞಾನ ತಿಳಿದವರೆಂದು, ಕ್ಷರ, ಅಕ್ಷರ, ಪುರುಷೋತ್ತಮ ಎನ್ನುವ ಆತ್ಮಗಳ ವಿವರ ತಿಳಿದವರೆಂದು ಅರ್ಥ. ಮೊದಲು ಜ್ಞಾನವನ್ನು ತಿಳಿದ ಪ್ರಜೆಗಳು ಅವರು ತಿಳಿದ ಜ್ಞಾನವನ್ನನುಸರಿಸಿ, ಅವರು ತಿಳಿದ ಜ್ಞಾನಕ್ಕೆ ಸಮಾನವಾದ ಅರ್ಥವನ್ನು ಕೊಡುವ ಹೆಸರನ್ನು ಗುರುತಾಗಿ ಇರುವಹಾಗೆ "ದ್ರಾವಿಡ" ಅನ್ನುವ ಶಬ್ಧದಿಂದ ದ್ರಾವಿಡರು ಎಂದು ಹೇಳಲ್ಪಟ್ಟಿದ್ದಾರೆ. ದ್ರಾವಿಡರಿಗೆ ಸಂಪೂರ್ಣವಾದ ಅರ್ಥ, ನಿಜವಾದ ಭಾವ ಅವರ ಹೆಸರಲ್ಲೇ ಇದೆ. ಯಾವನು ಶರೀರದಲ್ಲಿನ ಮೂರು ಆತ್ಮಗಳ ಜ್ಞಾನವನ್ನು ತಿಳಿಯುತ್ತಾನೋ ಅವನನ್ನು ಅರ್ಥದ ಪ್ರಕಾರ ದ್ರಾವಿಡ ಜಾತಿಯವನೆಂದು ಹೇಳಬಹುದು. ಪೂರ್ವಕಾಲ ಭಾರತದೇಶವೆಲ್ಲಾ ಕೃತಯುಗದ ಕೊನೆಯಲ್ಲಿ ಮೂರುಕೋಟಿ ದ್ರಾವಿಡ ಮನುಷ್ಯರು ಇರುತ್ತಿದ್ದರೆಂದು ಹೇಳಿಕೊಂಡಿದ್ದೇವೆ. ತ್ರೇತಾಯುಗ ಪ್ರಾರಂಭದಲ್ಲಿ ಮಧ್ಯೆ ಏಷ್ಯಾದಿಂದ ಬಂದಿರುವ ಏಷೀಯರು ದ್ರಾವಿಡರನ್ನು ನೋಡಿ ಸಹಿಸದೆ, ಇತರರಿಗಿಂತ ತಾವು ಕಡಿಮೆ ಯಾಗಿರುವುದಕ್ಕೆ ಇಷ್ಟ ಪಡದೆ, ಆತ್ಮ ಜ್ಞಾನಿಗಳು ಅನಿಸಿಕೊಳ್ಳುತ್ತಿರುವ ದ್ರಾವಿಡರಿಗಿಂತ ದೊಡ್ಡದಾಗಿ ಇರಬೇಕೆಂದು, ತಮ್ಮನ್ನು "ಆರ್ಯರಾಗಿ" ಹೇಳಿಕೊಳ್ಳುವುದು ನಡೆದಿದೆ. ಆರ್ಯನು ಅನ್ನುವ ಪದ ಆಚಾರ್ಯನು ಅನ್ನುವ ಪದದಿಂದ ಹುಟ್ಟಿದೆ. ಆಚಾರ್ಯನು ಅಂದರೆ ಗುರುವು ಎಂದು ಅರ್ಥ ಬರುತ್ತದೆ. ಆಚಾರ್ಯನಲ್ಲಿ ಎರಡನೆಯ ಅಕ್ಷರ "ಚಾ" ನ್ನು ತೆಗೆದುಹಾಕಿ ಆರ್ಯನು ಎಂದರೂ ಸರಿಹೋಗುತ್ತದೆ. ಪ್ರತಿ ಮನುಷ್ಯನಿಗೂ ಗುರುವು ಅವಶ್ಯ ಅನ್ನುವ ಮಾತಿನ ಪ್ರಕಾರ ಪ್ರತಿ ಜ್ಞಾನಿಗೂ ಸಹ ಗುರುವು ಅವಶ್ಯವೇ. ದ್ರಾವಿಡ ರಾದವರೆಲ್ಲರೂ ಆತ್ಮಜ್ಞಾನಿಗಳಾದ್ದರಿಂದ, ಅವರಿಗೂ ಸಹ ಗುರುವು ಅವಶ್ಯವೇ. ಇದನ್ನನುಸರಿಸಿ ಜ್ಞಾನಿಗಿಂತ ಗುರುವು ಅಧಿಕನೆಂದೂ, ಗುರುವು ಇಲ್ಲದವನು ಜ್ಞಾನಿ ಆಗಲಾರನೆನ್ನುವ ವಿವರ ಇದೆ. ಆದ್ದರಿಂದ ದ್ರಾವಿಡರಿಗಿಂತ

(ಜ್ಞಾನಿಗಳಿಗಿಂತ) ದೊಡ್ಡ ಸ್ಥಾನವಾದ ಗುರುಗಳಾಗಿ ತಮ್ಮನ್ನು ತಾವು ತಿಳಿಸುತ್ತಾ ಮಧ್ಯೆ ಏಷ್ಯಾದಿಂದ ಬಂದಿರುವ ಅವರು ತಮ್ಮನ್ನು ಆರ್ಯರಾಗಿ ಪ್ರಕಟಿಸಿ ಕೊಳ್ಳುವುದು ನಡೆದಿದೆ.

ದ್ರಾವಿಡರು ಜ್ಞಾನಿಗಳಾಗಿರುವುದರಿಂದ ಅವರನ್ನು ಇಂದೂಗಳು ಎಂದು ಎನ್ನುತ್ತಿದ್ದೇವೆ. ಇಂದೂ ಎಂದರೆ ಜ್ಞಾನಿ ಎಂದು ಅರ್ಥ. ಆ ಅರ್ಥದ ಪ್ರಕಾರ ದ್ರಾವಿಡರೆಲ್ಲರನ್ನೂ ಇಂದೂಗಳೆಂದು ಅನ್ನುತ್ತಿದ್ದೇವೆ. ಆದರೇ ಆರ್ಯರನ್ನು ಇಂದೂಗಳು ಎಂದು ಎನ್ನುವುದಕ್ಕೆ ಅವಕಾಶವಿಲ್ಲ. ಏಕೆಂದರೆ ಅವರು ಇಂದೂ ಗಳಾದರೂ ಜ್ಞಾನಿಗಳಿಗಿಂತ ದೊಡ್ಡವರಾದ ಗುರುಗಳು ಎಂದು ಅರ್ಥದಿಂದ ಇದ್ದಾರೆ ಆದ್ದರಿಂದ ಅವರನ್ನು ಆರ್ಯರು ಎಂದು ಅನ್ನಬೇಕು, ಇಂದೂಗಳು ಎಂದು ಅನ್ನಬಾರದು. ಇಂದೂ ಎನ್ನುವ ಹೆಸರಿನ ಅರ್ಥದ ಪ್ರಕಾರ ಆರ್ಯರಿಗೆ ಸರಿಹೋಗುವುದಿಲ್ಲ. ಆಚಾರ್ಯನು ಅಥವಾ ಆರ್ಯನು ಎನ್ನುವ ಪದ ಇಂದೂಗಿಂತಲೂ ದೊಡ್ಡದೆಂದು ಯಾರಾದರೂ ಒಪ್ಪಿಕೊಳ್ಳದೆ ತಪ್ಪುವುದಿಲ್ಲ. ಆದರೆ ಇಂದೂಗಳಿಗೆ ಆರ್ಯರಿಗಿಂತ ಮೊದಲೇ ಸೂರ್ಯನು ಆದಿ ಗುರುವೆಂದು ಹೆಸರುವಾಸಿಯಾಗಿದ್ದಾನೆ. ಮೊದಲ ಜ್ಞಾನವನ್ನು ತಿಳಿಸಿದವನು ಗುರು ಎನ್ನುವ ಸೂತ್ರದ ಪ್ರಕಾರ ಆಗಿನ ಇಂದೂಗಳಾದ ದ್ರಾವಿಡರೆಲ್ಲರಿಗೂ ಸೂರ್ಯನೇ ಗುರು ಆಗುವನು. ಆದ್ದರಿಂದ ಮಧ್ಯದಲ್ಲಿ ಬಂದು ನಾವು ಗುರುಗಳು ಎಂದು ಹೇಳಿದರೂ ಅವರು ಹೆಸರಿಗೆ ಗುರುಗಳೇ ಆಗಲೀ, ವಾಸ್ತವವಾಗಿ ಗುರುಗಳಾಗಿ ಲೆಕ್ಕಿಸಲಾಗುವುದಿಲ್ಲ. ಇಂದೂಗಳಿಗೆ ಆ ದಿನ ತಿಳಿದ ಮೂರು ಆತ್ಮಗಳ ಜ್ಞಾನ ಯಾವಮಾತ್ರ ಆರ್ಯರಿಗೆ ತಿಳಿಯದು. ಜ್ಞಾನವೇ ತಿಳಿಯದವನು ಇಂದೂ ಆಗಲಾರನು ಅಲ್ಲವೆ! ಇಂದೂವಿಗೆ ಗುರುವು ಹೇಗೆ ಆಗುವನೆಂದು ಪ್ರಶ್ನೆ ಬರಬಲ್ಲದು.  ಆದ್ದರಿಂದ ಆರ್ಯರು ಗುರುಗಳೆನ್ನುವ ಅರ್ಥದಿಂದ ಹೇಳಿ ಕೊಂಡರೂ, ವಾಸ್ತವಕ್ಕೆ ಅವರು ಹೆಸರಿಗೆ ಮಾತ್ರ ಗುರುಗಳೇ ಆಗಲಿ, ಜ್ಞಾನಕ್ಕೆ ಗುರುಗಳು ಅಲ್ಲವೆಂದು ತಿಳಿಯುತ್ತಿದೆ. ನಾವು ದೇವರಿಗೆ ಸಂಬಂಧಿಸಿದ ಜ್ಞಾನಚರಿತ್ರೆ ಯನ್ನು ತಿಳಿಯುವುದಕ್ಕೆ ಜ್ಞಾನವನ್ನು ನೋಡಬೇಕಾಗಲೀ, ಗುರುಗಳನ್ನಲ್ಲ.

ಆದ್ದರಿಂದ ಇಂದೂಗಳಾದ ದ್ರಾವಿಡರ ಜ್ಞಾನ ವಿಷಯವನ್ನು ಆಧಾರ ಮಾಡಿಕೊಂಡು ನೋಡಿದರೆ, ಅಸಲಾದ ದೈವಜ್ಞಾನ ತಿಳಿಯುತ್ತದೆ. ಎಂದಾದರೆ ದೈವಜ್ಞಾನವನ್ನು ಮನುಷ್ಯ ತಿಳಿಯಬಲ್ಲನೋ ಆಗಲೇ ಅವನ ಜೀವನ ಸಾರ್ಥಕವಾಗುತ್ತದೆ, ಮನುಷ್ಯನಾಗಿ ಹುಟ್ಟಿರುವುದಕ್ಕೆ ಮನುಷ್ಯನಾಗಿ ಬದುಕಬಲ್ಲನು. ಜ್ಞಾನವಿಲ್ಲದ ಜೀವನ ವಾಸನೆ ಇಲ್ಲದ ಹೂವಿನಂಥಾದ್ದು. ಆದ್ದರಿಂದ ಮನುಷ್ಯ ಜೀವನಕ್ಕೆ ಅರ್ಥ ಕೈಗೂಡಬೇಕೆಂದರೆ, ಮನುಷ್ಯ ಇಂದೂವಾಗಿ (ಜ್ಞಾನಿಯಾಗಿ) ಬದಲಾಗಿ ಆತ್ಮಜ್ಞಾನವನ್ನು ತಿಳಿಯಬೇಕಾದ್ದೇ.

**ಪ್ರಶ್ನೆ :–** ಆರ್ಯರಾದವರಿಗೆ ಆತ್ಮ ಜ್ಞಾನವೇ ತಿಳಿಯದಿರುವಾಗ ಯಾವ ವಿಷಯದಲ್ಲಿ ಗುರುಗಳೆಂದು ಹೆಸರು ಇಟ್ಟುಕೊಳ್ಳಬೇಕಾಗಿ ಬಂದಿದೆ? ನೀವು ಯಾವುದಕ್ಕೆ ಗುರುಗಳೆಂದು ಅವರನ್ನು ಪ್ರಶ್ನಿಸಿದರೆ ಏನೆಂದು ಸಮಾಧಾನ ಹೇಳಬಲ್ಲರು?

**ಉತ್ತರ :–** ಆರ್ಯರು ಬಹಳ ಬುದ್ಧಿವಂತರೆಂದು ಮೊದಲೇ ಹೇಳಿದ್ದೇವೆ. ಒಂದು ದೈವಜ್ಞಾನದಲ್ಲಿ ಹೊರತು ಉಳಿದ ಎಲ್ಲಾ ವಿಷಯಗಳಲ್ಲಿ ಅವರನ್ನು ಮೀರಿದವರೇ ಇಲ್ಲ ಎಂದು ಹೇಳಬಹುದು. ಎಷ್ಟೋ ವಿಷಯಗಳಲ್ಲಿ ಪಂಡಿತರಾದವರು, ತಾವು ಇಂತಹ ಪ್ರಶ್ನೆಗಳಿಗೆ ಸಿಗದಂತೆ, ಮೊದಲೇ ವೇದಗಳನ್ನು, ಉಪನಿಷತ್ತುಗಳನ್ನು, ಪುರಾಣಗಳನ್ನು ಸೃಷ್ಟಿಸಿ ಅವೇ ನಿಜವಾದ ಜ್ಞಾನವೆಂದು ಪ್ರಚಾರ ಮಾಡಿಕೊಂಡಿದ್ದಾರೆ. ಹೊರಗಿನ ಆದಾಯ, ಹೊರಗಿನ ಫಲಿತಗಳು ಮನುಷ್ಯನಿಗೆ ವೇದ ಕಾರ್ಯಗಳಿಂದ ಬರುವವೆಂದೂ, ವೇದಗಳಲ್ಲಿ ಹೇಳಲಾಗಿರುವ ಯಜ್ಞಗಳನ್ನು, ತಪಸ್ಸುಗಳನ್ನು ಮಾಡುವುದರಿಂದ ಜೀವನದಲ್ಲಿ ದೊಡ್ಡ ಲಾಭಗಳು, ದೊಡ್ಡ ಫಲಿತಗಳು ಸಾಧಿಸಬಹುದೆಂದು ಪ್ರಚಾರ ಮಾಡಿದ್ದಾರೆ. ಯಾರಿಗೂ ತಿಳಿಯದ ವೇದಗಳನ್ನು, ಯಜ್ಞಗಳನ್ನು, ತಪಸ್ಸುಗಳನ್ನು ಸೃಷ್ಟಿಸಿದ ಆರ್ಯರು ಆ ವಿಷಯಗಳಲ್ಲಿ ಗುರುಗಳಾಗಿ ತಮ್ಮ ಹೆಸರನ್ನು ಸಾರ್ಥಕ ಮಾಡಿಕೊಂಡಿದ್ದಾರೆ. ಅಷ್ಟೇ ಹೊರತು ದೈವ ಜ್ಞಾನದಲ್ಲಾಗಲೀ, ದೈವಜ್ಞಾನವಾದ

ಮೂರು ಆತ್ಮಗಳ ವಿಷಯದಲ್ಲಾಗಲೀ ಏನೂ ತಿಳಿಯದವರೇ ಎಂದು, ದೈವಜ್ಞಾನದಲ್ಲಿ ಅವರು ಯಾರಿಗೂ ಗುರುಗಳು ಅಲ್ಲವೆಂದು ಹೇಳಬಹುದು. ತಾವು ವೇದಗಳಿಗು, ಯಜ್ಞಗಳಿಗು, ತಪಸ್ಸುಗಳಿಗು ಗುರುಗಳೆಂದೇ ಪ್ರಕಟಿಸಿಕೊಳ್ಳುತ್ತಾ, ವೇದ, ಯಜ್ಞ, ತಪಸ್ಸುಗಳೇ ನಿಜವಾದ ಜ್ಞಾನವೆಂದೂ, ವೇದಗಳು ಓದದೇ, ಯಜ್ಞಗಳು ಮಾಡದೇ, ತಪಸ್ಸುಗಳು ಆಚರಿಸದೇ ಯಾರೂ ಜ್ಞಾನಿ ಆಗಲಾರರೆಂದು ಪ್ರಚಾರ ಮಾಡುತ್ತಾ, ಆ ವಿಷಯಗಳಲ್ಲಿ ತಾವೇ ಗುರುಗಳೆಂದು ಹೇಳಿಕೊಳ್ಳುತ್ತಿದ್ದಾರೆ.

**ಪ್ರಶ್ನೆ :–** ಆರ್ಯರು ಹೇಳುತ್ತಿರುವ ವೇದ, ಯಜ್ಞ, ತಪಸ್ಸುಗಳಿಂದ ದೈವ ತಿಳಿಯುವುದಿಲ್ಲವಾ? ಅವರು ಹೇಳಿರುವುದು ಯಾವುದೂ ದೈವಜ್ಞಾನ ಅಲ್ಲವಾ?

**ಉತ್ತರ :–** ಯಾವುದನ್ನಾದರೂ ಅಲ್ಲ ಎಂದು ಹೇಳುವುದಕ್ಕಾಗಲೀ, ಹೌದು ಎಂದು ಹೇಳುವುದಕ್ಕಾಗಲೀ ಶಾಸ್ತ್ರ ಆಧಾರವಿರಬೇಕು. ಶಾಸ್ತ್ರ ಎಂದರೆ ನಿರ್ಧಾರಣೆ ಮಾಡಲಾಗಿರುವ ಕಾನೂನಿನಂತಹದು. ಇದು ಹೀಗೇ ಇರುತ್ತದೆಂದು ಶಾಸಿಸಿ ಹೇಳುವುದನ್ನು ಶಾಸ್ತ್ರ ಅನ್ನುತ್ತೇವೆ. ಪ್ರಪಂಚದಲ್ಲಿನ ಸಮಸ್ತ ವಿಷಯಗಳಿಗು ಸಂಬಂಧಿಸಿರುವವು ಆರು ಶಾಸ್ತ್ರಗಳು ಇವೆ. ಆ ಆರು ಶಾಸ್ತ್ರಗಳ ವರಸೆ ಕ್ರಮ ತಿಳಿಯಬೇಕೆಂದರೆ ಮೊದಲು ಮಂತ್ರವಂತಹದ್ದನ್ನು ಜ್ಞಾಪಕದಲ್ಲಿ ಇಟ್ಟುಕೊಳ್ಳಬೇಕು. ಆರು ಅಕ್ಷರಗಳ ಮಂತ್ರವೇ ಆರು ಶಾಸ್ತ್ರಗಳಿಗು ಸೂಚನೆ ಎಂದು ತಿಳಿಯಬೇಕು. "ಗ.ಖ.ರ.ಭೌ.ಜ್ಯೋ.ಬ್ರ" ಎನ್ನುವ ಆರು ಅಕ್ಷರಗಳ ಶಬ್ಧದಲ್ಲಿ ಮೊದಲನೆಯದು 'ಗ' ಎನ್ನುವ ಅಕ್ಷರದಿಂದ ಗಣಿತಶಾಸ್ತ್ರವನ್ನು, 'ಖ' ಎನ್ನುವ ಶಬ್ಧದಿಂದ ಖಗೋಳಶಾಸ್ತ್ರವನ್ನು, 'ರ' ಎನ್ನುವ ಶಬ್ಧದಿಂದ ರಸಾಯನ ಶಾಸ್ತ್ರವನ್ನು, 'ಭೌ' ಎನ್ನುವ ಶಬ್ಧದಿಂದ ಭೌತಿಕ ಶಾಸ್ತ್ರವನ್ನು, 'ಜ್ಯೋ' ಎನ್ನುವ ಶಬ್ಧದಿಂದ ಜ್ಯೋತಿಷ್ಯ ಶಾಸ್ತ್ರವನ್ನು ಹೇಳಬಹುದು. ಕೊನೆಯಲ್ಲಿರುವ ಅಕ್ಷರ 'ಬ' ಮತ್ತು 'ರ' ಎನ್ನುವ ಎರಡಕ್ಷರಗಳ ಸಂಯುಕ್ತ ಅಕ್ಷರ. ಆದ್ದರಿಂದ ಅದನ್ನು 'ಬ್ರ' ಎಂದು ಅನ್ನುತ್ತಿದ್ದೇವೆ. 'ಬ್ರ' ಅನ್ನುವ ಶಬ್ಧ ಬ್ರಹ್ಮವಿದ್ಯಾ ಶಾಸ್ತ್ರವನ್ನು ಸೂಚಿಸುತ್ತಿದೆ. "ಗ ಖ ರ ಭೌ

ಜ್ಯೋ ಬ್ರ" ಎನ್ನುವ ಮಂತ್ರದಲ್ಲಿನ ಅಕ್ಷರಗಳ ವರಸೆ ಕ್ರಮವನ್ನು ಅನುಸರಿಸಿ ಆರು ಶಾಸ್ತ್ರಗಳನ್ನು ಸುಲಭವಾಗಿ ಹೇಳಬಹುದು. ಆರ್ಯರು ತಾವು ಹೇಳುವುದು ದೈವಜ್ಞಾನವೆಂದು ಹೇಳುವಾಗ ಆ ಮಾತು ವಾಸ್ತವವೆ ಅಲ್ಲವೆ! ಎಂದು ನೋಡುವುದಕ್ಕೆ ಶಾಸ್ತ್ರವನ್ನು ಆಧಾರ ಮಾಡಿಕೊಂಡು ನೋಡಬೇಕಾಗಿದೆ.

ಆರ್ಯರು ತಾವು ಹೇಳುವುದು ನಿಜವಾದ ದೈವಜ್ಞಾನವೆಂದು ಹೇಳಿದಾಗ ದೈವಜ್ಞಾನಕ್ಕೆ ಸಂಬಂಧಿಸಿದ ಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಅವರ ಮಾತು ಸತ್ಯವಾ, ಅಸತ್ಯವಾ ಎಂದು ನೋಡಬೇಕಾಗಿದೆ. ಪ್ರಸ್ತುತ ಕಾಲದಲ್ಲಿ ಬ್ರಹ್ಮವಿದ್ಯಾ ಶಾಸ್ತ್ರ ಮೂರು ಗ್ರಂಥಗಳಲ್ಲಿ ಮಾತ್ರ ಕಾಣಿಸುತ್ತಿದೆ. ಬ್ರಹ್ಮವಿದ್ಯಾ ಶಾಸ್ತ್ರವನ್ನು ಸ್ವತಹವಾಗಿ ದೇವರೇ ಹೇಳಿರುವಾಗ (ಹೇಳಿಸಿರುವಾಗ) ಉಳಿದ ಐದು ಶಾಸ್ತ್ರಗಳನ್ನು ಮನುಷ್ಯರು ಹೇಳಿದ್ದಾರೆ. ದೇವರಿಗೆ ಸಂಬಂಧಿಸಿದ ವಿಷಯಗಳನ್ನು ಅಥವಾ ಧರ್ಮಗಳನ್ನು ದೇವರು ಹೊರತು ಇತರರು ಹೇಳುವುದಕ್ಕೆ ಅವಕಾಶವಿಲ್ಲ. ಏಕೆಂದರೆ! ದೇವರ ಧರ್ಮಗಳು ದೇವರಿಗೆ ಹೊರತು ಇತರ ಮನುಷ್ಯರಿಗೆ ಯಾರಿಗೂ ತಿಳಿಯದು. ಆದ್ದರಿಂದ ದೈವಶಾಸ್ತ್ರವಾದ ಬ್ರಹ್ಮವಿದ್ಯಾ ಶಾಸ್ತ್ರವನ್ನು ದೇವರೇ ಹೇಳಿದ್ದಾನೆಂದು ಹೇಳಬೇಕು. ದೇವರು ಭಗವಂತನಾಗಿ ಬದಲಾವಣೆಯಾಗಿ ಬಂದು ಹೇಳಿರುವವು ಭೂಮಿ ಮೇಲೆ ಎರಡು ಗ್ರಂಥಗಳು ಇವೆ. ಅವುಗಳಲ್ಲಿ ಮೊದಲನೆಯದು ಭಗವದ್ಗೀತೆ. ಭಗವದ್ಗೀತೆ ಐದು ಸಾವಿರ ವರ್ಷಗಳ ಪೂರ್ವದಲ್ಲಿ ಗ್ರಂಥವಾಗಿ ಹೊರಟು ಬಂದಿದೆ. ಎರಡನೆಯದು ಬೈಬಿಲ್. ಬೈಬಿಲ್ ಎರಡು ಸಾವಿರ ಸಂವತ್ಸರಗಳ ಪೂರ್ವದಲ್ಲಿ ಗ್ರಂಥರೂಪವಾಗಿ ಹೊರಗೆ ಬಂದಿದೆ. ದೇವರು ಭಗವಂತನಾಗಿ ಹೇಳದೆ ಹೋದರೂ, ಆದಿಯಲ್ಲಿ ದೇವರು ಹೇಳಿದ ಜ್ಞಾನವನ್ನು ಕೇಳಿ ತಿಳಿದುಕೊಂಡ ಸೂರ್ಯ ಗ್ರಹದ ಹಾಗೆ, ಜಿಬ್ರಯೇಲ್ ಎನ್ನುವ ಗ್ರಹ ಆದಿಯಲ್ಲಿ ವಾಣಿಯಿಂದ ಬಂದಿರುವ ದೇವರ ಜ್ಞಾನವನ್ನು ತಿಳಿದುಕೊಂಡು, ಅದೇ ಜ್ಞಾನವನ್ನೇ ಭೂಮಿ ಮೇಲೆ ಪ್ರವಕ್ತನಿಗೆ ಹೇಳಿದಾಗ, ಪ್ರವಕ್ತ ಅದನ್ನು ಖುರ್ಆನ್ ಗ್ರಂಥವಾಗಿ ಹೊರಗೆ ತೆಗೆದಿದ್ದಾರೆ. ಆದ್ದರಿಂದ ಪ್ರಥಮ ದೈವ ಗ್ರಂಥವಾದ

ಭಗವದ್ಗೀತೆಯಲ್ಲೂ, ದ್ವಿತೀಯ ಗ್ರಂಥವಾದ ಬೈಬಲ್‌ನಲ್ಲೂ, ಅಂತಿಮ ದೈವ ಗ್ರಂಥವಾದ ಖುರ್‌ಆನ್ ಗ್ರಂಥದಲ್ಲೂ ದೇವರ ವಿಷಯಗಳು ಶಾಸ್ತ್ರಬದ್ಧವಾಗಿ ಇವೆ. ಇದನ್ನನುಸರಿಸಿ ಈ ಮೂರು ಗ್ರಂಥಗಳನ್ನು ಬ್ರಹ್ಮವಿದ್ಯಾ ಶಾಸ್ತ್ರ ಗ್ರಂಥಗಳಾಗಿ ಹೇಳಬಹುದು.

ಈಗ ಅಸಲು ವಿಷಯಕ್ಕೆ ಬಂದು ಆರ್ಯರು ಹೇಳಿದ ವೇದಗಳು, ಯಜ್ಞಗಳು, ತಪಸ್ಸುಗಳು ದೈವಜ್ಞಾನಕ್ಕೆ ಸಂಬಂಧಿಸಿದ ವಿಷಯಗಳಾ ಎಂದು ನೋಡುವುದಕ್ಕೆ ಬ್ರಹ್ಮವಿದ್ಯೆಗೆ ಸಂಬಂಧಿಸಿದ ಭಗವದ್ಗೀತೆಯನ್ನು ನೋಡಿದರೆ ಅದರಲ್ಲಿ ಯಜ್ಞಗಳಾಗಲಿ, ವೇದಾಧ್ಯಯನಗಳಾಗಲಿ, ತಪಸ್ಸುಗಳು ಮಾಡುವುದಾಗಲಿ, ದೇವರಿಗೆ ಸಂಬಂಧಿಸಿದ ವಿಷಯಗಳು ಅಲ್ಲ ಎಂದು ತಿಳಿಯುತ್ತಿದೆ. ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನ ಯೋಗವೆನ್ನುವ ಅಧ್ಯಾಯದಲ್ಲಿ 48ನೇ ಶ್ಲೋಕದಲ್ಲಿ ಮತ್ತು 53ನೇ ಶ್ಲೋಕದಲ್ಲಿ ಈ ವಿಧವಾಗಿ ಇವೆ.

**48ನೇ ಶ್ಲೋ॥ ನವೇದ ಯಜ್ಞಾಧ್ಯಯನೈರ್ನ ದಾನೈರ್ನ ಚಕ್ರಿಯಾಭಿರ್ನ ತಪೋಭಿರುಗ್ರೈಃ ।**
**ಏವಂ ರೂಪಶ್ಶಕ್ಯ ಅಹಂ ನೃಲೋಕೇ ದ್ರಷ್ಟುಂ ತ್ವದನ್ಯೇನ ಕುರು ಪ್ರವೀರ ॥**

**53ನೇ ಶ್ಲೋ॥ ನಾಹಂ ವೇದೈರ್ನ ತಪಸಾ ನದಾನೇನ ನ ಚೇಜ್ಯಯಾ ।**
**ಶಕ್ಯ ಏವಂ ವಿಧೋ ದ್ರಷ್ಟುಂ ದೃಷ್ಟವಾ ನಸಿ ಮಾಂ ಯಥಾ ॥**

**ಭಾವಾರ್ಥ :–** "ಅರ್ಜುನಾ! ಭೂಮಿ ಮೇಲೆ ನೀನು ಹೊರತು ಇಲ್ಲಿಯವರೆಗು ಯಾರೂ ಈ ದೃಶ್ಯವನ್ನು ನೋಡಿದವರು ಇಲ್ಲ. ಇದು ಯಜ್ಞಗಳಿಂದಾಗಲಿ, ವೇದಗಳಿಂದಾಗಲಿ, ದಾನಗಳಿಂದಾಗಲಿ, ಉಗ್ರವಾದ ತಪಸ್ಸುಗಳಿಂದಾಗಲಿ ಯಾರಿಗು ಸಾಧ್ಯವಾಗಲಿಲ್ಲ."

"ತಪಗಳಿಂದಾಗಲಿ, ದಾನಗಳಿಂದಾಗಲಿ, ಯಜ್ಞಗಳಿಂದಾಗಲಿ, ವೇದಗಳ ಅಧ್ಯಯನಗಳಿಂದಾಗಲಿ, ಈಗ ನೀನು ನೋಡಿದ ಈ ವಿಶ್ವ ರೂಪವನ್ನು ನೋಡುವುದಕ್ಕೆ ಶಕ್ಯವಲ್ಲ."

ಬ್ರಹ್ಮವಿದ್ಯಾ ಶಾಸ್ತ್ರವಾದ ಭಗವದ್ಗೀತೆಯಲ್ಲಿ ಆರ್ಯರು ಬೋಧಿಸಿದ ಯಜ್ಞ, ದಾನ, ವೇದ, ತಪಸ್ಸುಗಳಿಂದ ದೇವರು ತಿಳಿಯುವುದಿಲ್ಲವೆಂದು ಸ್ಪಷ್ಟವಾಗಿ ಇರುವುದರಿಂದ, ಆರ್ಯರು ಹೇಳಿರುವುದು ದೈವಜ್ಞಾನ ಅಲ್ಲವೆಂದು ಸುಲಭವಾಗಿ ತಿಳಿದು ಹೋಗುತ್ತಿದೆ. ಅಷ್ಟೇ ಅಲ್ಲದೆ ಭಗವದ್ಗೀತಾ ಗ್ರಂಥದಲ್ಲಿಯೆ ಸಾಂಖ್ಯಯೋಗ ಎನ್ನುವ ಅಧ್ಯಾಯದಲ್ಲಿ 45ನೇ ಶ್ಲೋಕದಲ್ಲಿ ಮತ್ತು ವಿಜ್ಞಾನ ಯೋಗವೆನ್ನುವ ಅಧ್ಯಾಯದಲ್ಲಿ 14ನೇ ಶ್ಲೋಕದಲ್ಲೂ ವೇದಗಳನ್ನು ಕುರಿತು ಈ ವಿಧವಾಗಿ ಹೇಳಲಾಗಿದೆ.

**45ನೇ ಶ್ಲೋ॥ ತ್ರೈಗುಣ್ಯ ವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ !**

**14ನೇ ಶ್ಲೋ॥ ದೈವೀ ಹ್ಯೇಷಾ ಗುಣಮಯೀ ಮಮ ಮಾಯ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯನ್ತೇ ಮಾಯಾ ಮೇತಾಂ ತರನ್ತಿತೇ ॥**

**ಭಾವಾರ್ಥ :–** "ಅರ್ಜುನಾ! ವೇದಗಳಲ್ಲಿ ತಾಮಸ, ರಾಜಸ, ಸಾತ್ವಿಕವೆನ್ನುವ ಮೂರು ಗುಣ ವಿಷಯಗಳೇ ಇವೆ ಅವುಗಳನ್ನು ಬಿಡು"

"ದೇವರಾದ ನಾನು ನನ್ನ ಮಾಯೆಯನ್ನು ಗುಣಗಳ ರೂಪದಲ್ಲಿ ತಯಾರುಮಾಡಿ ಇಟ್ಟಿದ್ದೇನೆ. ನಾನು ತಯಾರು ಮಾಡಿದ ಮಾಯೆಯನ್ನು ದಾಟುವುದಕ್ಕೆ ಯಾರಿಗೂ ಸಾಧ್ಯವಾಗುವುದಿಲ್ಲ. ಯಾವನಾದರೆ ನನ್ನನ್ನು ತಿಳಿದು ಆರಾಧಿಸುತ್ತಾನೋ ಅವನು ಮಾತ್ರ ಮಾಯೆಯನ್ನು ದಾಟಿ ಬರಬಲ್ಲನು."

ಈ ಎರಡು ಶ್ಲೋಕಗಳಲ್ಲೂ ವೇದಗಳನ್ನು ಮಾಯೆ ಎಂದು ಮತ್ತೊಂದು ಹೆಸರಿಂದ ಕರೆಯುವುದು ನಡೆದಿದೆ. ದೇವರನ್ನು ತಿಳಿಯುವುದಕ್ಕೆ ಮಾಯೆ ಎಂದಿಗೂ ಆತಂಕವಾಗಿ ಇರುತ್ತದೆ. ಯಾರನ್ನೂ ಮಾಯೆ ದೇವರ ಕಡೆಗೆ ಹೋಗಲು ಬಿಡುವುದಿಲ್ಲ. ದೇವರ ಸುತ್ತಲೂ ಕವಚದಂತಿರುವ ಮಾಯೆ ಗುಣಗಳಿಂದ ತಯಾರು ಮಾಡಿರುವುದಾಗಿ ಇದೆ. ಮಾಯೆ ರೂಪದಲ್ಲಿರುವ ಗುಣಗಳ ವಿಷಯಗಳೇ ವೇದಗಳಲ್ಲಿವೆ. ಆದ್ದರಿಂದ ವೇದಗಳಲ್ಲಿ ಗುಣಗಳಿಂದ ಕೂಡಿಕೊಂಡಿರುವ ಪ್ರಪಂಚ ವಿಷಯಗಳಿವೆಯೆಂದು ಹೇಳಬಹುದಾಗಲೀ,

ಜ್ಞಾನದಿಂದ ಕೂಡಿಕೊಂಡಿರುವ ದೈವ ವಿಷಯಗಳು ಇವೆಯೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಆರ್ಯರು ತಾವು ಹೇಳಿದ ವೇದ, ಯಜ್ಞಗಳು ಜ್ಞಾನವೆಂದು ಪ್ರಚಾರ ಮಾಡಿದರೂ, ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಆರ್ಯರ ಮಾತು ಅಸತ್ಯವೆಂದು ತಿಳಿದುಹೋಗುತ್ತಿದೆ. ಆರ್ಯರು ಹೇಳಿರುವುದು ಯಾವುದೂ ದೈವಜ್ಞಾನ ಅಲ್ಲವೆಂದು, ಅವರು ಹೇಳಿರುವುದು ಸಾಧಾರಣವಾಗಿರುವ ಪ್ರಪಂಚ ವಿಷಯಗಳೇ ಎಂದು ಹೇಳಬಹುದು.

**ಪ್ರಶ್ನೆ :–** ತಮ್ಮದು ದೈವಜ್ಞಾನ ಆಗದಿರುವಾಗ ಆರ್ಯರು ಏಕೆ ಯಜ್ಞ, ವೇದ, ತಪಸ್ಸುಗಳನ್ನು ಜ್ಞಾನವಾಗಿ ಹೋಲಿಸಿ ಹೇಳಬೇಕಾಗಿ ಬಂದಿದೆ?

**ಉತ್ತರ :–** ಆರ್ಯರು ಇಂದೂದೇಶದೊಳಗೆ ಪ್ರವೇಶಿಸುವುದಕ್ಕಿಂತ ಮೊದಲೆ ಸಂಸ್ಕೃತ ಭಾಷೆಯಲ್ಲಿ ಪಾಂಡಿತ್ಯವನ್ನು ಹೊಂದಿ, ಅದೇ ಭಾಷೆಯಲ್ಲಿ ವೇದಗಳನ್ನು ಹಾಡುಗಳ ರೂಪದಲ್ಲಿ ಅಭ್ಯಾಸ ಮಾಡಿಕೊಂಡು ಇಂಪಾಗಿ ಹಾಡಿಕೊಳ್ಳುತ್ತಿದ್ದರು. ಸಂಸ್ಕೃತ ಭಾಷೆಗೆ ಲಿಪಿ ಇಲ್ಲದಿದ್ದರೂ ಮಾತನಾಡುವುದಕ್ಕೆ ಅಂದವಾದ ಭಾಷೆಯಾಗಿರುವುದರಿಂದ, ತಮ್ಮ ಭಾಷೆಯನ್ನು ಮೀರಿರುವುದು ಇಲ್ಲ ಎಂದು ಸಹ ಹೇಳಿಕೊಳ್ಳುತ್ತಿದ್ದರು. ಹಾಗೆ ಮೊದಲೇ ಸಂಸ್ಕೃತಕ್ಕು, ಋಗ್ವೇದಕ್ಕು ಅಭ್ಯಾಸವಾಗಿರುವ ಆರ್ಯರು ಇಂದೂದೇಶದೊಳಕ್ಕೆ ಬಂದ ನಂತರ ತೆಲುಗು ಭಾಷೆಯನ್ನು, ತೆಲುಗು ಭಾಷೆಯಲ್ಲಿನ ಪದ್ಯಗಳ ಅಂದವನ್ನು ನೋಡಿ ಸಹಿಸಲಾರದೆ ಹೋಗಿದ್ದಾರೆ. ಅದೇ ಅಸೂಯೆಯಿಂದ ಇಂದೂಗಳಲ್ಲಿನ ಜ್ಞಾನವನ್ನು ನೋಡಿ ಸಹ ಅಸೂಯೆ ಹೊಂದಿದವರಾಗಿ, ಹಿಂದೀ ಲಿಪಿಯನ್ನು ತಯಾರು ಮಾಡಿ ಅದಕ್ಕೆ ದೇವನಾಗರ ಲಿಪಿಯೆಂದು ಹೆಸರು ಇಟ್ಟು, ಅದರಿಂದ ಸಂಸ್ಕೃತವನ್ನು ಬರೆದು ಉಳಿದ ಮೂರು ವೇದಗಳನ್ನು, ಉಪನಿಷತ್ತುಗಳನ್ನು ಇಂದೂಗಳ ಜ್ಞಾನಕ್ಕೆ ಪೋಟಿಯಾಗಿ ತಯಾರುಮಾಡಿ, ಅದೇ ಜ್ಞಾನವೆಂದು ಹೇಳುವುದು ಪ್ರಾರಂಭಮಾಡಿದ್ದಾರೆ. ಸಾಮವೇದದಲ್ಲಿ ಮಂತ್ರಗಳನ್ನು ಬರೆದು, ಅವುಗಳ ಮಹಿಮೆಯಿಂದ ಕೆಲವು ಕೆಲಸಗಳು ನೆರವೇರುವಂತೆ ತೋರಿಸುವು ದರಿಂದ, ಬಹಳ ಜನ ಸಾಮಾನ್ಯರು ವೇದಗಳ ಹಿಂದೆ ಬೀಳುವುದು ನಡೆದಿದೆ.

ಇಂದೂಗಳ ಮೇಲೆ ತಮ್ಮದೆ ಮೇಲ್ಗೈಯಾಗಿಇರಬೇಕೆನ್ನುವ ಉದ್ದೇಶದಿಂದ ವೇದಗಳನ್ನು ದೊಡ್ಡದಾಗಿ ಹೇಳಿಕೊಳ್ಳುವುದು ನಡೆದಿದೆ. ಅಷ್ಟೇ ಅಲ್ಲದೆ ವೇದ ಮಂತ್ರಗಳಿಂದ ಅನುಸಂಧಾನ ಮಾಡಿ ಯಜ್ಞಗಳನ್ನು ಅನೇಕವಾಗಿ ಸೃಷ್ಠಿಸಿ, ಒಂದೊಂದು ವಿಧ ಯಜ್ಞಕ್ಕೆ ಒಂದೊಂದು ವಿಧವಾದ ಫಲವಿರುತ್ತದೆಂದು ಹೇಳಿದ್ದಾರೆ. ಮನುಷ್ಯರಲ್ಲಿ ಆಸೆ ಎನ್ನುವ ಗುಣ ದೊಡ್ಡದು, ಮೊದಲನೆಯದು ಎಂದು ತಿಳಿದು ಆಸೆ ಎನ್ನುವ ಗಾಳವನ್ನು ಯಜ್ಞಗಳೆನ್ನುವ ಹೆಸರಿಂದ ಪ್ರಜೆಗಳಲ್ಲಿ ಹಾಕಿ, ತಮ್ಮ ಕಡೆ ಕೆಲವರನ್ನು ಎಳೆದುಕೊಳ್ಳುವುದಕ್ಕೆ ಪ್ರಯತ್ನಿಸಿದ್ದಾರೆ. ಅವರ ಪ್ರಯತ್ನ ಸಫಲವಾಗಿ ತಮ್ಮ ಕಡೆಗೂ, ತಮ್ಮ ವೇದ, ಯಜ್ಞ, ದಾನ ತಪಸ್ಸುಗಳ ಕಡೆಗೂ ಪ್ರಜೆಗಳು ಆಸೆಯಿಂದ ಬರುವುದನ್ನು ನೋಡಿ, ಶಾಸ್ತ್ರವಿರುದ್ಧ ವಾಗಿರುವವಾದರೂ ಅವುಗಳನ್ನೇ ನಿಜವಾದ ಜ್ಞಾನವೆಂದು ಹೇಳಿ ಪ್ರಜೆಗಳನ್ನು ಮೋಸಮಾಡುವುದು ನಡೆದಿದೆ. ಮೊದಲೇ ಅವರ ಸಂಖ್ಯೆ ಆರುಕೋಟಿ, ದ್ರಾವಿಡರ ಸಂಖ್ಯೆ ಮೂರು ಕೋಟಿ, ಆರ್ಯರ ಸಂಖ್ಯಾ ಬಲ ಹೆಚ್ಚಾಗಿರುವು ದರಿಂದ, ಹೊಸದಾಗಿ ಮಾಯೆ ವಶರಾದ ದ್ರಾವಿಡರು ಸಹ ಅವರ ಹತ್ತಿರ ಸೇರಿ ವೇದಗಳನ್ನು, ಯಜ್ಞಗಳನ್ನು ಆಶ್ರಯಿಸುವುದರಿಂದ, ಇದೇ ಒಳ್ಳೆಯದೆಂದು ಅಧರ್ಮಗಳಾದ ಅವುಗಳನ್ನೇ ಅವರು ಧರ್ಮಗಳೆಂದು ಪ್ರಚಾರ ಮಾಡಿದ್ದಾರೆ. ಅವರ ಮುಖ್ಯ ಉದ್ದೇಶ ದ್ರಾವಿಡರ ಮೇಲೆ ದೊಡ್ಡಸ್ತಿಕೆ ಚಲಾಯಿಸುವುದೇ ಆಗಿರುವುದರಿಂದ, ದ್ರಾವಿಡರಿಗಿಂತ ಆರ್ಯರು ದೊಡ್ಡದಾಗಿ ಕಾಣಿಸುವುದಕ್ಕೆ ತಮಗೆ ಅಭ್ಯಾಸವಾದ, ತಮಗೆ ಚೆನ್ನಾಗಿ ತಿಳಿದ ಯಜ್ಞ, ವೇದ, ದಾನ, ತಪಸ್ಸುಗಳನ್ನೇ ನಿಜವಾದ ಜ್ಞಾನ ಮಾರ್ಗಗಳೆಂದು ಹೇಳುತ್ತಾ ಬಂದಿದ್ದಾರೆ. ದ್ರಾವಿಡರ ಜ್ಞಾನ ಧರ್ಮಗಳಿಂದ ಕೂಡಿಕೊಂಡಿದೆಯೆಂದು, ತಮ್ಮ ಕಾರ್ಯಗಳು ಅಧರ್ಮಗಳೆಂದು ತಿಳಿದರೂ, ದ್ರಾವಿಡರ ಮೇಲೆ ದೊಡ್ಡಸ್ತಿಕೆ ಚಲಾಯಿಸುವುದಕ್ಕೆ, ದ್ರಾವಿಡರಿಗಿಂತ ದೊಡ್ಡದಾಗಿ ಕಾಣಿಸುವುದಕ್ಕೆ, ಆರ್ಯರು ಅದೇ ಕೆಲಸದಂತೆ ಯಜ್ಞ, ವೇದ, ದಾನ, ತಪಸ್ಸುಗಳನ್ನು ಪ್ರಚಾರ ಮಾಡಿದ್ದಾರೆ.

**ಪ್ರಶ್ನೆ :–** ನೀವು ಹೇಳುವುದು ತ್ರೇತಾಯುಗದಲ್ಲಿ ನಡೆದುಹೋಗಿರುವುದಲ್ಲವೆ!

ಈಗ ನಾನು ಹಿರಿಯ ನೀನು ಕಿರಿಯ ಎನ್ನುವ ಭಾವಗಳು ಇಲ್ಲ ಅಲ್ಲವೆ! ಇದಕ್ಕೆ ನೀವೇನನ್ನುತ್ತೀರಾ?

**ಉತ್ತರ :–** ಈಗ ಇಲ್ಲವೆಂದು ಯಾರು ಹೇಳಿದ್ದಾರೆ? ಆಗ ಆರ್ಯರು ನಾಟಿದ ಬೀಜಗಳು ಮಹಾ ವೃಕ್ಷಗಳಾಗಿ ಕುಳಿತುಕೊಂಡಿವೆ. ಅಂದಿನಿಂದ ಇಂದಿನ ವರೆಗೂ ಬೆಳೆಯುತ್ತಲೇ ಬರುತ್ತಿವೆ. ಯಾರ ಸಹಾಯ ಇಲ್ಲದಂತೆ ಒಳ್ಳೆಯದು ಕಡಿಮೆಯಾಗಿ, ಕೆಟ್ಟದು ಬೆಳೆದುಹೋಗಬಹುದೆನ್ನುವ ಹಿರಿಯರ ಮಾತಿನ ಪ್ರಕಾರ, ಯಾರ ಪ್ರಮೇಯವೂ ಇಲ್ಲದಂತೆ ಕ್ರಮೇಣ ಜ್ಞಾನ ಕಡಿಮೆಯಾಗಿ, ಅಜ್ಞಾನ ಬೆಳೆದುಹೋಗಿದೆಯೆಂದು ಹೇಳಬಹುದು. ಪೂರ್ವ ಕೃತಯುಗದಲ್ಲಿ ಸಂಪೂರ್ಣ ಜ್ಞಾನಿಗಳಾದ ದ್ರಾವಿಡರು "ಇಂದೂಗಳು" ಎನ್ನುವ ಹೆಸರಿಂದ ಈ ದೇಶದಲ್ಲಿ ಇರುತ್ತಿದ್ದರೆಂದು ಹೇಳಿಕೊಂಡಿದ್ದೇವೆ. ಅಂತಹ ಅವರು ಪ್ರಪಂಚದಲ್ಲಿ ಯಾವ ದೇಶದಲ್ಲಿ ಇಲ್ಲವೆನ್ನುವ ಉದ್ದೇಶದಿಂದಲೇ, ನಮ್ಮ ದೇಶವನ್ನು ಆದಿನ ಇಂದೂದೇಶವೆಂದು ಪ್ರಪಂಚ ದೇಶಗಳೆಲ್ಲವೂ ಹೇಳಿವೆ. ಆದರೆ ಅಷ್ಟು ದೊಡ್ಡ ಘನ ಚರಿತ್ರೆಯಿರುವ ದ್ರಾವಿಡ ಜ್ಞಾನ ಪ್ರಜೆಗಳು (ದ್ರಾವಿಡ ಜಾತಿ ಪ್ರಜೆಗಳು) ಶರೀರದಲ್ಲಿನ ಗುಣ ಪ್ರಭಾವಗಳಿಂದ, ದೇಶದಲ್ಲಿ ಬಂದು ಸೇರಿರುವ ಆರ್ಯರ ಬೋಧನೆಗಳಿಂದ, ದ್ರಾವಿಡರಲ್ಲಿನ ಜ್ಞಾನ ತ್ರೇತಾಯುಗದಿಂದ ಮಾಯವಾಗುತ್ತಾ ಬಂದಿದೆ. ತ್ರೇತಾಯುಗದಲ್ಲಿ ರಾವಣಬ್ರಹ್ಮ ಸಜೀವ ವಾಗಿರುವಾಗ, ದಕ್ಷಿಣ ದೇಶದಲ್ಲಿ ಸ್ವಲ್ಪ ಜ್ಞಾನ ಉಳಿದಿತ್ತು. ರಾವಣಬ್ರಹ್ಮ ಹೋದ ನಂತರ ದಕ್ಷಿಣ ಭಾರತದೇಶದಲ್ಲಿಯೂ ಸಹ ಆರ್ಯರ ಪ್ರಭಾವ ಬೆಳೆದು ದ್ರಾವಿಡ ಜ್ಞಾನ ಇಲ್ಲದಂತೆ ಹೋಗಿದೆ. ಅದರಿಂದ ದ್ರಾವಿಡ ಅನ್ನುವ ಶಬ್ದವಾಗಲಿ, ಅದರ ಅರ್ಥವಾಗಲಿ ಬಹಳ ಜನರಿಗೆ ತಿಳಿಯದಂತೆ ಹೋಗಿದೆ. ಮೊದಲು ಭಾರತದೇಶವೆಲ್ಲಾ ಇರುವ ಇಂದೂಗಳೆನ್ನುವ ದ್ರಾವಿಡರು, ಕ್ರಮೇಣ ಸ್ವಲ್ಪ ಕಾಲಕ್ಕೆ ದಕ್ಷಿಣ ದೇಶಕ್ಕೆ ಮಾತ್ರ ಪರಿಮಿತಿಯಾಗಿ ಬದಲಾಗಿದ್ದಾರೆ. ಪ್ರಸ್ತುತ ಕಾಲದಲ್ಲಿ ತಮಿಳನಾಡಿನಲ್ಲಿ ಹೊರತು ದೇಶದಲ್ಲಿ ನಾವು ದ್ರಾವಿಡರೆಂದು ಹೇಳಿಕೊಳ್ಳುವವರು ಇಲ್ಲದಂತೆ ಹೋಗಿದ್ದಾರೆ. ಯಾವಾಗಾದರೇ ದೇವರ ಜ್ಞಾನ

ಪ್ರಜೆಗಳಲ್ಲಿ ಇಲ್ಲದಂತೆ ಹೋಗಿದೆಯೋ, ಅಗ ನಾವು ದ್ರಾವಿಡರೆನ್ನುವ ಜ್ಞಾಪಕವನ್ನು ಸಹ ಪ್ರಜೆಗಳು ಕಳೆದುಕೊಳ್ಳುವುದು ನಡೆದಿದೆ.

ಆರ್ಯರ ವಿಷಯಕ್ಕೆ ಬಂದರೆ ಅವರದು ದೈವಜ್ಞಾನ ಅಲ್ಲದೆ ಹೋಗುವ ುದರಿಂದ, ಪ್ರಪಂಚ ಜ್ಞಾನವೇ ಆಗಿರುವುದರಿಂದ, ಅದು ಅಭಿವೃದ್ಧಿ ಹೊಂದುವುದು ಹೊರತು ಕ್ಷೀಣಿಸುವುದೆನ್ನುವುದು ಇರುವುದಿಲ್ಲ. ಆದ್ದರಿಂದ ಆರ್ಯರ ವಿಷಯಗಳು ವೃದ್ಧಿ ಹೊಂದುತ್ತಾ ಬಂದಿವೆಯೆಂದೇ ಹೇಳಬಹುದು. ಆರ್ಯರು ಒಬ್ಬರ ಕೆಳಗೆ ಇರುವುದಕ್ಕೆ ಇಷ್ಟಪಡದವರಾದ್ದರಿಂದ, ಅವರು ದ್ರಾವಿಡರಿಗಿಂತ ಬುದ್ಧಿವಂತರಾದ್ದರಿಂದ, ಸಂಸ್ಕೃತ ಭಾಷೆಯಲ್ಲಿ ಪಾಂಡಿತ್ಯವಿರುವವರೆಲ್ಲರೂ ಪಂಡಿತರೆಂದು ಹೇಳುತ್ತಾ, ಒಂದು ಕಡೆ ತಮ್ಮನ್ನು ಭೂಲೋಕ ದೇವತೆಗಳಾಗಿ (ಭೂಸುರರಾಗಿ) ಹೇಳಿಕೊಳ್ಳುವುದು ನಡೆದಿದೆ. ಪಂಡಿಟ್‌ಗಳೆಂದು ಕೆಲವರು, ಪುರಹಿತರೆಂದು (ಪುರೋಹಿತರು) ಎಂದು ಕೆಲವರೂ, ದ್ವಿಜರು ಎಂದು ಕೆಲವರು, ಪೂಜಾರಿಗಳೆಂದು ಕೆಲವರು, ಋತ್ವಿಕರೆಂದು (ಯಜ್ಞಗಳು ಮಾಡುವವರೆಂದು) ಕೆಲವರೂ, ವೇದ ಗುರುಗಳೆಂದು ಕೆಲವರೂ, ಗುರುಗಳೆಂದು ಕೆಲವರು ಅನೇಕ ಹೆಸರುಗಳಿಂದ ಆರ್ಯರು ಸಮಾಜದಲ್ಲಿ ಬೆರೆತುಹೋಗಿದ್ದಾರೆ. ಈದಿನ ಅವರು ಯಾವ ವೃತ್ತಿಯಲ್ಲಿ ಇದ್ದರೂ ನಾವು ಬ್ರಾಹ್ಮಣರೆಂದು ಹೇಳಿಕೊಳ್ಳುತ್ತಿದ್ದಾರೆ. ವಾಸ್ತವಕ್ಕೆ ಅವರು ಬ್ರಾಹ್ಮಣರು ಅಲ್ಲ. ನಿಜವಾದ ಬ್ರಾಹ್ಮಣರು ದ್ರಾವಿಡರೆ ಆದರೂ, ಅವರು ಇಲ್ಲದೆ ಹೋಗಿರುವುದರಿಂದ ಆರ್ಯರು ಬ್ರಾಹ್ಮಣರಾಗಿ ಚಲಾವಣೆ ಆಗುವುದು ನಡೆದಿದೆ.

ವಾಸ್ತವಕ್ಕೆ ಬ್ರಹ್ಮಜ್ಞಾನ ಇರುವವರನ್ನು ಬ್ರಾಹ್ಮಣರು ಅನ್ನಬೇಕು. ಆದರೆ ಬ್ರಹ್ಮ ಜ್ಞಾನ ಇರುವವನು ಎಲ್ಲಿದ್ದಾನೋ ತಿಳಿಯದಾಗಲೀ, ಬ್ರಹ್ಮಜ್ಞಾನ ಯಾವ ಮಾತ್ರ ಇಲ್ಲದ ಆರ್ಯರು ಸಮಾಜದಲ್ಲಿ ಬ್ರಾಹ್ಮಣರಾಗಿ ಚಲಾವಣೆ ಆಗುತ್ತಿದ್ದಾರೆ. ಎಲ್ಲಾದರೂ ದ್ರಾವಿಡ ಬ್ರಾಹ್ಮಣರು ಕಾಣಿಸಿದರೆ ಆತನನ್ನು ಕುರಿತು ಆರ್ಯ ಬ್ರಾಹ್ಮಣರು ಹೇಳನವಾಗಿ ಮಾತನಾಡುವುದು ನಡೆಯುತ್ತಿದೆ. ದ್ರಾವಿಡರು ದಕ್ಷಿಣ ದೇಶದಲ್ಲಿ ಪ್ರಸ್ತುತ ಕಾಲದಲ್ಲಿ ಇದ್ದಾರೆ. ಆದರೆ ದಕ್ಷಿಣ ದೇಶಕ್ಕೆ ಹತ್ತಿರವಾಗಿರುವ

ಸಮುದ್ರ ವಾತಾವರಣದಿಂದ ಬಹಳ ಜನ ಕಪ್ಪು ಛಾಯೆ ಹೊಂದಿದ್ದಾರೆ. ಪೂರ್ವ ದಕ್ಷಿಣ ಪ್ರಾಂತದಲ್ಲಿ ದ್ರಾವಿಡ ಬ್ರಾಹ್ಮಣರು ಎಲ್ಲರೂ ಕಪ್ಪಾಗಿಯೇ ಇರುತ್ತಿದ್ದರು. ಆರ್ಯರು ಉತ್ತರ ದೇಶದಲ್ಲಿ ಸಮುದ್ರಕ್ಕೆ ದೂರವಾಗಿ ಇರುವುದರಿಂದ, ಮಂಜಿನ ಪರ್ವತಗಳ ಗಾಳಿಗೆ ಹತ್ತಿರವಾಗಿರುವುದರಿಂದ ಅವರು ಎಲ್ಲರೂ ಬೆಳ್ಳಗೆ ಇರುವುದು ನಡೆದಿದೆ. ಆ ವಿಧವಾಗಿ ಯಾರಾದರೂ ದ್ರಾವಿಡ ಬ್ರಾಹ್ಮಣನು ಕಪ್ಪಗಿರುವಹಾಗೆ ಕಾಣಿಸಿದರೆ, ಆರ್ಯರು ಕಪ್ಪು ಬ್ರಾಹ್ಮಣನನ್ನು ನಂಬಬಾರದು ಬಿಳಿ ಮಾದಿಗನನ್ನು ಮುಟ್ಟಬಾರದು ಅನ್ನುತ್ತಿದ್ದರು. ಆ ವಿಧವಾಗಿ ಕಪ್ಪಾಗಿರುವ ದ್ರಾವಿಡರನ್ನು ಹೇಳನವಾಗಿ ಮಾತನಾಡುತ್ತಿದ್ದರು. ಬ್ರಾಹ್ಮಣನೇ ಕಪ್ಪಾಗಿದ್ದರೆ ಮಾದಿಗದವರು ಬೆಳ್ಳಗಿರುವುದಿಲ್ಲವೆನ್ನುವ ಭಾವದಿಂದ ಹಾಗೆ ಅಂದಿದ್ದಾರೆಂದು ತಿಳಿಯುತ್ತಿದೆ. ಯಾವುದು ಏನಾದರೂ ಆರ್ಯರು ತಾವು ಬ್ರಾಹ್ಮಣರು ಅಲ್ಲವೆಂದು ತಿಳಿದು, ತಮ್ಮನ್ನು ಆರ್ಯ ಬ್ರಾಹ್ಮಣರಾಗಿ ಪ್ರಕಟಿಸಿಕೊಳ್ಳುವುದು ನಡೆದಿದೆ.

ಬ್ರಹ್ಮಜ್ಞಾನವನ್ನು ಅನುಸರಿಸಿ ಯಾವ ಮನುಷ್ಯನಾದರೂ ಬ್ರಾಹ್ಮಣನು ಎಂದು ಕರೆಯಲ್ಪಡುತ್ತಾನೆ ಆದರೆ, ಕುಲಗಳಲ್ಲಿ ಬ್ರಾಹ್ಮಣ ಕುಲ ಅನ್ನುವುದು ಇಲ್ಲವೇ ಇಲ್ಲ. ಹಾಗೇ ಮಾದಿಗದವನು ಎನ್ನುವ ಪದ ಜ್ಞಾನವಿಲ್ಲದವನ ಬಗ್ಗೆ ಹೇಳುವುದೇ ಆಗಲೀ, ಮಾದಿಗ ಎನ್ನುವುದು ಸಹ ಒಂದು ಕುಲವಲ್ಲ. ಮಾಡುವ ಕೆಲಸಗಳನ್ನನುಸರಿಸಿ ಕುಲಗಳಾಗಿ ಸಮಾಜವನ್ನು ಕೆಲವರು ವಿಭಜಿಸಿದ್ದಾರಾಗಲೀ, ಜ್ಞಾನವನ್ನನುಸರಿಸಿ ಕುಲಗಳನ್ನು ಹೇಳುವುದಕ್ಕೆ ಸಾಧ್ಯವಿಲ್ಲ. ಜ್ಞಾನವನ್ನನುಸರಿಸಿ ಹೇಳುವವು ಮಾದಿಗ, ಬ್ರಾಹ್ಮಣ ಎನ್ನುವ ಹೆಸರುಗಳಿದ್ದರೂ ಅವು ಜ್ಞಾನ ಇರುವುದಕ್ಕೂ, ಜ್ಞಾನ ಇಲ್ಲದಿರುವುದಕ್ಕೂ ಗುರುತಿಗಾಗಿರುವವೆ ಹೊರತು ಕುಲಗಳು ಅಲ್ಲವೆಂದು ತಿಳಿಯಬೇಕು. ಈ ವಿಷಯವನ್ನು ಸ್ವಲ್ಪ ಮುಂಚೆಯೂ ಸಹ ಹೇಳಿಕೊಂಡಿದ್ದೇವೆ. ಆದರೆ ಈ ದಿನಗಳಲ್ಲಿ ಆರ್ಯ ಬ್ರಾಹ್ಮಣರೆನ್ನುವವರು, ತಮ್ಮನ್ನು ತಾವು ಬ್ರಾಹ್ಮಣರಾಗಿ ಹೇಳಿಕೊಳ್ಳುವುದು ನಡೆಯುತ್ತಿದೆ. ಹಾಗೇ ದ್ರಾವಿಡ ಬ್ರಾಹ್ಮಣರಾಗಿ ಹೇಳಿಕೊಳ್ಳುವವರು ಅಪರೂಪವಾಗಿ ಕೆಲವರು ಮಾತ್ರ

ಇದ್ದಾರೆ. ಕ್ಷರ, ಅಕ್ಷರ, ಪುರುಷೋತ್ತಮ ಎನ್ನುವ ಮೂವರು ಪುರುಷರ (ಆತ್ಮಗಳ) ಜ್ಞಾನವನ್ನು ತಿಳಿದವರು ಯಾರಾದರೂ ಇದ್ದರೆ, ಅವರನ್ನು ದ್ರಾವಿಡ ಬ್ರಾಹ್ಮಣರೆಂದು ಹೇಳಬಹುದು. ಹಾಗೇ ವೇದಗಳ, ಯಜ್ಞಗಳ ಜ್ಞಾನ ತಿಳಿದವರು ಯಾರಾದರೂ ಇದ್ದರೆ ಅವರನ್ನು ಆರ್ಯ ಬ್ರಾಹ್ಮಣರೆಂದು ಹೇಳಬಹುದು.

ತ್ರೇತಾಯುಗದಲ್ಲಿ ಆರ್ಯರು ದ್ರಾವಿಡರನ್ನು ಅಡಗಿಸಿ, ತಾವು ದ್ರಾವಿಡರಿಗಿಂತ ಮುಂದಿರಬೇಕು, ಅವರಿಗಿಂತ ದೊಡ್ಡವರೆನಿಸಿಕೊಳ್ಳಬೇಕೆಂದು, ಅಂದಿನಿಂದ ಪ್ರಣಾಳಿಕಾ ಬದ್ಧವಾಗಿ ದ್ರಾವಿಡರನ್ನು ಅಡಗಿಸುತ್ತಾ, ಬೇರೆ ಯಾರೂ ತಮಗಿಂತ ಮುಂದಕ್ಕೆ ಹೋಗದಂತೆ, ತಮಗಿಂತ ಹೆಚ್ಚಿನ ಹೆಸರು ಪ್ರಖ್ಯಾತಿಗಳು ಹೊಂದದಂತೆ ಮಾಡುತ್ತಾ ಬರುತ್ತಿದ್ದಾರೆ. ಕಾಲಕ್ರಮದಲ್ಲಿ ದ್ರಾವಿಡರು ತಮ್ಮನ್ನು ತಾವು ಮರೆತುಹೋದರೂ, ಆರ್ಯರು ಮಾತ್ರ ತಮ್ಮನ್ನು ತಾವು ಮರೆತು ಹೋಗದಂತೆ ತಮ್ಮ ಧ್ಯೇಯವನ್ನು ಹಿರಿಯರ ಕಾಲದಿಂದ, ತ್ರೇತಾಯುಗದಿಂದ ಸಾಧಿಸುತ್ತಲೇ ಬರುತ್ತಿದ್ದಾರೆ. ತ್ರೇತಾಯುಗದಲ್ಲೂ, ದ್ವಾಪರ ಯುಗದಲ್ಲೂ ಭಾರತದೇಶವೆಲ್ಲಾ ಆರ್ಯರು, ದ್ರಾವಿಡರು ಹೊರತು ಇತರರು ಯಾರೂ ಇಲ್ಲ. ಇತರ ಮತಗಳು ಕಲಿಯುಗದ ವರೆಗೂ ಯಾವುವೂ ಇಲ್ಲ. ಆದ್ದರಿಂದ ಆರ್ಯರು ಸುಲಭವಾಗಿ ದ್ರಾವಿಡರ ಮೇಲೆ ದೃಷ್ಟಿ ಇಟ್ಟು, ಅವರನ್ನು ಏನು ಮಾಡಬೇಕೆಂದುಕೊಂಡಿದ್ದಾರೋ ಅದೇ ಮಾಡಿದ್ದಾರೆ. ದ್ರಾವಿಡರನ್ನು ಇಲ್ಲದಂತೆ ಮಾಡಿ ಆರ್ಯ ಸಮಾಜವನ್ನು ವೃದ್ಧಿ ಮಾಡಬೇಕೆಂದುಕೊಂಡಿದ್ದಾರೆ. ಆ ವಿಧವಾಗಿಯೇ ಮಾಡಿದ್ದಾರೆ. ತ್ರೇತಾಯುಗದಲ್ಲೂ, ದ್ವಾಪರ ಯುಗದಲ್ಲೂ ಆರ್ಯರು ನಿರಾತಂಕವಾಗಿ ತಮ್ಮ ಕಾರ್ಯಗಳನ್ನು ಮಾಡುತ್ತಾ ಬಂದಿದ್ದಾರೆ. ಫಲಿತವಾಗಿ ಭಾರತದೇಶವೆಲ್ಲಾ ಈ ದಿನ ಆರ್ಯ ಸಂಸ್ಕೃತಿ ತುಂಬಿಹೋಗಿದೆ. ದ್ರಾವಿಡ ಸಂಸ್ಕೃತಿ ಹೆಸರಿಗಾದರೂ ಉಳಿದಿಲ್ಲ. ದಕ್ಷಿಣ ಭಾರತ ದೇಶದಲ್ಲಿ 'ದ್ರಾವಿಡ' ಎನ್ನುವ ಶಬ್ಧ ಇದ್ದರೆ ಇರಬಹುದಾಗಲಿ, ಪೂರ್ವವಿರುವ ಕೃತಯುಗದಲ್ಲಿನ ಜ್ಞಾನ ದ್ರಾವಿಡರಲ್ಲಿ ಇಲ್ಲದಂತೆ ಹೋಗಿದೆ. ಆದ್ದರಿಂದ ದಕ್ಷಿಣ ದೇಶದಲ್ಲಿ ಎಲ್ಲಾದರೂ ಸಾಕ್ಷಿಗೆ ನಾವು ದ್ರಾವಿಡರೆಂದು ಹೇಳಿಕೊಂಡರೂ,

ಅವರಲ್ಲಿ ದ್ರಾವಿಡ ಜ್ಞಾನವಾಗಲಿ, ದ್ರಾವಿಡ ಭಾವಗಳಾಗಲಿ ಏನೂ ಇಲ್ಲದೆ ಹೋಗಿವೆ. ಆ ವಿಧವಾಗಿ ದ್ರಾವಿಡರು ತಮ್ಮ ಜ್ಞಾನ ಕಳೆದುಕೊಂಡು, ತಮ್ಮ ಚರಿತ್ರೆಯನ್ನು ಮರೆತುಹೋಗಿ, 'ಆರ್ಯರಿಗೆ ಜೈ' ಅನ್ನುತ್ತಾ ಆರ್ಯರನ್ನು ಅನುಸರಿಸುವುದಕ್ಕೆ, ಉದ್ದೇಶಪೂರ್ವಕವಾಗಿ ದ್ರಾವಿಡರನ್ನು ಬದಲಾಯಿಸಿದ ಆರ್ಯರೇ ಕಾರಣವೆಂದು ತಿಳಿಯುತ್ತಿದೆ.

ಆರ್ಯರು ಮೊದಲಿನಿಂದ ದ್ರಾವಿಡರನ್ನು ಅಡಗಿಸುವುದಕ್ಕೆ ಆಚರಿಸಿದ ಕೆಲವು ಕೆಲಸಗಳನ್ನು ಸಾಕ್ಷಿಗಾಗಿ ವಿವರಿಸುತ್ತೇವೆ ನೋಡಿರಿ. ಮೊದಲು ಆರ್ಯರು ಇಂದೂದೇಶದಲ್ಲಿ ಪ್ರವೇಶಿಸಿದ ನಂತರ, ಈ ದೇಶದಲ್ಲಿನ ದ್ರಾವಿಡ ಜ್ಞಾನಿಗಳು ಜ್ಞಾನದಲ್ಲಿ ಎಷ್ಟೋ ದೊಡ್ಡವರೆಂದು, ಜ್ಞಾನಶಕ್ತಿ ಸಂಪೂರ್ಣವಾಗಿ ಇರುವವರೆಂದು ತಿಳಿದು, ಅವರಿಗಿಂತ ದೊಡ್ಡವರಾಗಬೇಕೆಂದುಕೊಂಡ ಆರ್ಯರು, ಮೊದಲು ದ್ರಾವಿಡರನ್ನು ಅವರ ಜ್ಞಾನಮಾರ್ಗದಿಂದ ತಪ್ಪಿಸಿ, ತಮ್ಮ ಮಾರ್ಗವನ್ನು ಅನುಸರಿಸುವಹಾಗೆ ಮಾಡಬೇಕೆಂದುಕೊಂಡಿದ್ದಾರೆ. ಆಗ ದ್ರಾವಿಡರ ಹತ್ತಿರವಿರುವ ಜ್ಞಾನ ಅವರ ಹೆಸರಿಗೆ ತಕ್ಕಂತೆ ಮೂರು ಆತ್ಮಗಳ ಜ್ಞಾನ ಇದೆಯೆಂದು ಗ್ರಹಿಸಿದ್ದಾರೆ. ಮೂರು ಆತ್ಮಗಳ ಜ್ಞಾನವನ್ನನುಸರಿಸಿ ಕಾಲಕ್ಕೂ ಸಹ ನಾಲ್ಕು ಹೆಸರುಗಳನ್ನು ಕೃತ, ತ್ರೈತಾ, ದ್ವಾಪರ, ಕಲಿಯುಗಗಳೆಂದು ಹೆಸರು ಇಟ್ಟಿದ್ದಾರೆಂದು ತಿಳಿದು, ಈ ನಾಲ್ಕು ಹೆಸರುಗಳಲ್ಲಿ ತ್ರೈತ ಎಂದರೆ ಮೂರು ಎಂದೂ, ದ್ವಾಪರ ಎಂದರೆ ಎರಡಲ್ಲದ ಮೂರನೆಯದು ಎಂದೂ ಹೊರಗೆ ಕಾಣಿಸುವಹಾಗೆ ಎಲ್ಲರಿಗೂ ತಿಳಿಯುವಹಾಗೆ ಇರುವುದರಿಂದ, ಆ ಎರಡು ಯುಗಗಳ ಹೆಸರುಗಳನ್ನು ಮೊದಲು ಬದಲಾಯಿಸಬೇಕೆಂದು ಕೊಂಡಿದ್ದಾರೆ. ಆ ವಿಧವಾಗಿ ಅಂದುಕೊಂಡ ಕೂಡಲೇ ಆಗ ತಾವಿರುವ ತ್ರೈತಾಯುಗ ಹೆಸರನ್ನು ಸ್ವಲ್ಪ ಬದಲಾಯಿಸಿ 'ತೆ' ಕೆಳಗೆ ಐತ್ವ 'ೈ' ವನ್ನು ತೆಗೆದುಹಾಕಿ ತ್ರೇತಾ ಅನ್ನುವ ಹೆಸರು ಬರುವಹಾಗೆ ಮಾಡಿದ್ದಾರೆ. ತ್ರೇತಾ ಎಂದರೆ ಅರ್ಥವಿಲ್ಲ. ಆ ವಿಧವಾಗಿ 'ತ್ರೈತ' (ಮೂರು) ಎನ್ನುವ ಪದವನ್ನು 'ತ್ರೇತಾ' ಎನ್ನುವ ಅರ್ಥವಿಲ್ಲದ ಪದವಾಗಿ ಬದಲಾಯಿಸಿದ್ದಾರೆ. ಅಷ್ಟೇ ಅಲ್ಲದೆ

ಆಗ ಯುಗ ಎನ್ನುವ ಹೆಸರು ಯೋಗ ಎಂದು ಇರುತ್ತಿತ್ತು. ವಾಸ್ತವವಾಗಿ ಆದಿನದ ಕಾಲದ ಹೆಸರು ತ್ರೇತಾಯೋಗ. ತ್ರೇತಾಯೋಗ ಎಂದರೆ ಮೂರು ಆತ್ಮಗಳು ಸೇರಿಹೋಗುವುದು ಎಂದು ಅರ್ಥ. ಬಿಡಿಯಾಗಿರುವ ಮೂರು ಅತ್ಮಗಳು ಯಾವಾಗ ಒಂದಾಗಿ ಸೇರಿಹೋಹೋಗುತ್ತವೋ, ಅಗ ಮನುಷ್ಯ ದೇವರಲ್ಲಿ ಐಕ್ಯವಾಗಿ ಹೋಗಬಲ್ಲನು. ಈ ವಿಧವಾದ ಎಷ್ಟೋ ದೊಡ್ಡ ಅರ್ಥವನ್ನು ತಿಳಿಸುವ ಶಬ್ಧವಾಗಿರುವ 'ತ್ರೈತಾಯೋಗ' ಎನ್ನುವುದನ್ನು ಅರ್ಯರು ತಮ್ಮ ಬುದ್ಧಿಯನ್ನು ಉಪಯೋಗಿಸಿ ತ್ರೇತಾಯುಗವಾಗಿ ಬದಲಾಯಿಸಿದ್ದಾರೆ. ಅಂದಿನಿಂದ ತ್ರೈತಾಯೋಗ ಸ್ವಲ್ಪ ಬದಲಾಗಿ ತ್ರೇತಾಯುಗವಾಗಿ ಹೋಗಿದೆ.

ಆರ್ಯರು ಮೊದಲು ಜ್ಞಾನ ಭಾವದಿಂದ ಕೂಡಿಕೊಂಡ ಯೋಗವನ್ನು ಯುಗವಾಗಿ, ಮೂರು ಆತ್ಮಗಳ ವಿವರವನ್ನು ತಿಳಿಸುವ ತ್ರೈತ ಪದವನ್ನು ತ್ರೇತಾ ಪದವಾಗಿ ಬದಲಾಯಿಸಿ, ತ್ರೇತಾಯುಗವಾಗಿ ಎಲ್ಲರಿಂದ ಹೇಳಿಸಿ ಮೊದಲೇ ವಿಜಯವನ್ನು ಸಾಧಿಸಿದ್ದಾರೆ. ದ್ರಾವಿಡರಿಗು ದ್ರಾವಿಡ ಜ್ಞಾನಕ್ಕೂ ಎಷ್ಟೋ ಸನ್ನಿಹಿತ ಅರ್ಥದಿಂದಿರುವ ತ್ರೈತಾಯೋಗವನ್ನು ತ್ರೇತಾಯುಗವಾಗಿ ಬದಲಾಯಿಸಿರುವುದರಿಂದ, ಉಳಿದ ಯೋಗಗಳನ್ನು ಸಹ ಯುಗಗಳಾಗೇ ಹೇಳಿಕೊಳ್ಳುತ್ತಿದ್ದೇವೆ. ಈ ವಿಧವಾಗಿ ಯೋಗ ಎನ್ನುವ ಶಬ್ಧವನ್ನು ಆರ್ಯರು ಬದಲಾಯಿಸಿದ್ದಾರೆಂದು ಸಹ ಯಾರಿಗೂ ತಿಳಿಯದಂತೆ ಮಾಡಿದ್ದಾರೆ. ದ್ವಾಪರ ಯೋಗ ಎಂದರೂ ಎರಡಲ್ಲದ ಮೂರನೆ ಯೋಗ ಎಂದು ಅರ್ಥ. ದ್ವಾ ಎಂದರೆ ಎರಡು ಎಂದೂ, ಪರ ಅಂದರೆ ಎರಡಕ್ಕಿಂತ ಬೇರೆಯಾಗಿರುವುದೆಂದೂ ಅರ್ಥ. ಇಲ್ಲಿ ವಿವರವಾಗಿ ಹೇಳಿಕೊಂಡರೆ ದ್ವಾಪರಯೋಗ ಎಂದರೆ ಜೀವಾತ್ಮ, ಆತ್ಮ ಎನ್ನುವ ಎರಡು ಆತ್ಮಗಳಿಗಿಂತ ಬೆರೆಯಾಗಿರುವ ಪರಮಾತ್ಮನೊಳಗೆ ಐಕ್ಯ ಆಗುವುದು ಎಂದು ತಿಳಿಯುತ್ತಿದೆ. ಆ ದಿನಗಳಲ್ಲಿ ದ್ರಾವಿಡರಲ್ಲಿ ಇರುವ ಮುಖ್ಯವಾದ ಜ್ಞಾನ ಅದೇ ಆಗಿರುವುದರಿಂದ, ಅದನ್ನು ಸಹ ಬದಲಾಯಿ ಸಬೇಕೆಂದು ಆರ್ಯರು ಪ್ರಯತ್ನ ಮಾಡಿರುವಾಗ, ಅ ಪ್ರಯತ್ನ ವಿಫಲವಾಗಿ ಹೋಗಿದೆ. ಆದರೆ ಯೋಗ ಎನ್ನುವುದನ್ನು ಎಲ್ಲಾಕಡೆ ಯುಗ ಎನ್ನುವ ಪದವಾಗಿ

ಬದಲಾಯಿಸಿದ್ದಾರಾಗಲಿ, ದ್ವಾಪರ ಎನ್ನುವುದನ್ನು ಬದಲಾಯಿಸದೆ ಹೋಗಿದ್ದಾರೆ. ಮೊದಲನೆ ಅಕ್ಷರವಾದ 'ದ್ವಾ' ಎನ್ನುವ ಶಬ್ಧದಲ್ಲಿರುವ ಎರಡು ಎನ್ನುವ ಅರ್ಥವನ್ನು ಭಂಗ ಮಾಡುವಹಾಗೆ 'ದಾ' ಪಕ್ಕದಲ್ಲಿರುವ 'ವ' ವತ್ತನ್ನು ತೆಗೆದುಹಾಕಿ ದಾಪರ ಯುಗ ಎಂದು ಹೇಳಿದ್ದಾರೆ. ಆದರೆ ತ್ರೈತಾ ಎನ್ನುವ ಪದ ತ್ರೇತಾ ಎಂದು ಬದಲಾದಷ್ಟು ಸುಲಭವಾಗಿ, ದ್ವಾಪರ ಎನ್ನುವ ಪದ ಬದಲಾಗದಂತೆ ಹೋಗಿದೆ. ಎಷ್ಟು ಹೇಳಿದರೂ ಎಲ್ಲರೂ 'ದ್ವಾ' ಎಂದು ಕರೆಯುವುದಕ್ಕು ಬರೆಯುವುದಕ್ಕು ಅಭ್ಯಾಸವಾಗಿ 'ದಾ' ಎಂದು ಬರೆಯಲಾಗದೆ ಹೋಗಿದ್ದಾರೆ. ಅಂತಹ ಅಕ್ಷರಗಳನ್ನು ಬೀಗ ಹಾಕಿದ ಅಕ್ಷರಗಳು ಅನ್ನುತ್ತೇವೆ. ಬದಲಾಯಿಸಿ ಹೇಳಬೇಕೆಂದುಕೊಂಡರೂ ಹಾಗೆ ಹೇಳದೆ ಮೊದಲಿನ ಹಾಗೆ ಹೇಳಲಾಗುತ್ತಿದೆ.

ಈ ವಿಧವಾಗಿ ಮೊದಲ ಹಂತದ ಪ್ರಯತ್ನದಲ್ಲಿ ಯೋಗಗಳು ಎನ್ನುವ ಪದವನ್ನು ನಾಲ್ಕು ಯುಗಗಳು ಎನ್ನುವ ಪದಗಳಾಗಿ ಬದಲಾಯಿಸಿ, ತ್ರೈತವನ್ನು ತ್ರೇತ ಮಾಡುವುದರಲ್ಲಿ ವಿಜಯವನ್ನು ಸಾಧಿಸಿದ ನಂತರ, ಎರಡನೆ ಹಂತದ ಕಾರ್ಯಕ್ರಮದಲ್ಲಿ ದ್ರಾವಿಡರಲ್ಲಿರುವ ಮೂರು ಆತ್ಮಗಳ ಜ್ಞಾನವನ್ನು ತೆಗೆದುಹಾಕಿ, ನಾಲ್ಕು ವೇದಗಳ ಬೋಧನೆಗಳನ್ನು ಬೋಧಿಸಬೇಕೆಂದು ಪ್ರಯತ್ನಿಸಿದ್ದಾರೆ. ಆಗ ಕೆಲವರು ದ್ರಾವಿಡರು ಮೂರು ಆತ್ಮಗಳ ಜ್ಞಾನ ಶ್ರೇಷ್ಠವಾಗಿರುವುದಲ್ಲವೆ ಎಂದು ಆರ್ಯರೊಂದಿಗೆ ವಾದಿಸಿದಾಗ, ಅದಕ್ಕೆ ಆರ್ಯರು ಕಾಣಿಸುವ ಪ್ರಪಂಚವನ್ನು ಬಿಟ್ಟು ಕಾಣಿಸದ ಆತ್ಮಗಳನ್ನು ಅನುಸರಿಸುವುದು ತಪ್ಪೆಂದು, ಮನುಷ್ಯ ತನ್ನ ಬುದ್ಧಿ ಬಲದಿಂದ ಆಲೋಚಿಸಿ ಮುಂದಕ್ಕೆ ಹೋಗುತ್ತಿರುವಾಗ, ಯಾರೋ ನಡೆಸುತ್ತಿದ್ದಾರೆಂದು ಅಂದುಕೊಳ್ಳುವುದು ತಪ್ಪೆಂದು, ಆತ್ಮ ಎನ್ನುವುದು ಕೆಲವರು ಕಲ್ಪಿಸಿದ ಅಭೂತ ಕಲ್ಪನೆಯೆಂದು, ನಿಮ್ಮಲ್ಲಿರುವ ಆತ್ಮವೇ ನಮ್ಮಲ್ಲಿದ್ದರೆ, ನಾವು ಈಗ ಆತ್ಮವನ್ನು ಕುರಿತು ವಿರುದ್ಧವಾಗಿ ಏಕೆ ಮಾತನಾಡುತ್ತಿದ್ದೇವೆ? ಆತ್ಮ ಮಾತನಾಡುವುದೋ, ಅಥವಾ ಮಾತನಾಡಿಸುವುದೋ ಆದರೆ, ಆತ್ಮೇ ಆತ್ಮಕ್ಕೆ ವಿರುದ್ಧವಾಗಿ ಮಾತನಾಡುತ್ತದಾ? ಆತ್ಮ ಇಲ್ಲವೇ ಇಲ್ಲ. ಆದ್ದರಿಂದ ನಮ್ಮ ಬುದ್ಧಿಯಿಂದ ಪ್ರತಿ ಮಾತನ್ನು ಮಾತನಾಡುತ್ತಿದ್ದೇವೆ. ನಮ್ಮ ಬುದ್ಧಿ

ಬಲದಿಂದಲೇ ಎಲ್ಲವನ್ನು ಯೋಚಿಸಿ ಮಾಡುತ್ತಿದ್ದೇವೆ. ನಾವು ನಮ್ಮ ಕೈಯನ್ನು ಎತ್ತಬೇಕೆಂದುಕೊಂಡರೆ ಎತ್ತುತ್ತಿದ್ದೇವೆ. ಇಳಿಸಬೇಕೆಂದುಕೊಂಡರೆ ಇಳಿಸುತ್ತಿದ್ದೇವೆ. ಈಗ ಪ್ರತ್ಯಕ್ಷವಾಗಿ ನಮ್ಮ ಪ್ರಮೇಯವೆ ಪ್ರತಿ ಕೆಲಸದಲ್ಲಿ ಇದೆಯೆಂದು ತಿಳಿಯುತ್ತಿದೆ ಅಲ್ಲವೆ! ನೀನು ಕಣ್ಣು ಮುಚ್ಚಿಕೊಳ್ಳಬೇಕೆಂದುಕೊಂಡರೆ ಮುಚ್ಚಿಕೊಳ್ಳುತ್ತೀಯ. ತೆರೆಯಬೇಕೆಂದುಕೊಂಡರೆ ತೆರೆಯುತ್ತೀಯ. ನಿನ್ನೊಂದಿಗೆ ನಿನ್ನ ಮುಂದೆ ಪ್ರತ್ಯಕ್ಷವಾಗಿ ನಡೆಯುವ ಈ ಕೆಲಸಕ್ಕು ನಿನಗು ಮಧ್ಯದಲ್ಲಿ ಯಾರೂ ಇಲ್ಲ ಅಲ್ಲವೆ! ಹಾಗಿರುವಾಗ ಯಾರೋ ಬುದ್ಧಿ ಇಲ್ಲದವರು (ಹುಚ್ಚು ಹಿಡಿದವರು) ಹೇಳಿದ ಮಾತುಗಳನ್ನು ಕೇಳಿ ಆತ್ಮ ಒಂದು, ಪರಮಾತ್ಮ ಒಂದು, ಜೀವಾತ್ಮ ಒಂದು ಎಂದು ಮೂರನ್ನು ಹೇಳಿ ನೀನು ಯಾರೋ ನಿನಗೆ ತಿಳಿಯದಂತೆ ಮಾಡಿದ್ದಾರೆ. ದೇವರು ಇಲ್ಲವೆಂದು ನಾವು ಹೇಳಲಿಲ್ಲ, ಆತನು ವೇದಗಳಲ್ಲಿದ್ದಾನೆ. ಹಾಗೇ ಜೀವಾತ್ಮನು ಇಲ್ಲವೆಂದು ನಾವು ಹೇಳಲಿಲ್ಲ, ಆತನು ನಿನ್ನ ಶರೀರದಲ್ಲೇ ಇರುವ ನೀನೇ!. ಈ ಎರಡೂ ನಿಜವೇಯೆಂದು ನಾವು ನಮ್ಮ ವೇದಗಳಲ್ಲಿ ಹೇಳಿದ್ದೇವೆ. ಅದರೆ ಮಾಯದಾರಿ ನರಿಯಂತೆ ಇಲ್ಲದ ಚುಕ್ಕೆಯನ್ನು ನಿಮ್ಮಲ್ಲಿಟ್ಟು, ಇಗೋ ಗುಮ್ಮ, ಅಗೋ ಗುಮ್ಮ ಎಂದು ಮಕ್ಕಳನ್ನು ಹೆದರಿಸಿದ ಹಾಗೆ, ಅಗೋ ಆತ್ಮ, ಇಗೋ ಆತ್ಮ ಎಂದು ಎಲ್ಲರನ್ನೂ ದ್ರಾವಿಡ ಜ್ಞಾನಿಗಳು ಹೆದರಿಸುತ್ತಿದ್ದಾರೆ. ಹಾಗೆ ನಿಮ್ಮಲ್ಲಿ ನೀವೇ ಇಲ್ಲದಿರುವುದನ್ನು ಸೃಷ್ಠಿಸಿಕೊಂಡು, ಅದಕ್ಕೆ ಆತ್ಮಯೆಂದು ಹೆಸರು ಇಟ್ಟು, ನೀವು ಎಲ್ಲಾ ಮಾಡುತ್ತಾ ಆತ್ಮ ಮಾಡುತ್ತಿದೆಯೆಂದು, ನೀವು ಎಲ್ಲಾ ಮಾತನಾಡುತ್ತಾ ಆತ್ಮ ಮಾತನಾಡುತ್ತಿದೆ ಯೆಂದು, ನೀವು ಎಲ್ಲಾ ತಿನ್ನುತ್ತಾ ಆತ್ಮ ತಿನ್ನುತ್ತದೆಯೆಂದು ಹೇಳಿಕೊಳ್ಳುವುದು ತಪ್ಪಲ್ಲವೆ! ಪ್ರತ್ಯಕ್ಷವಾಗಿ ನಾವು ಮಾಡುತ್ತಾ, ಇಲ್ಲ ಅಲ್ಲ ಯಾರೋ ಮಾಡುತ್ತಿದ್ದಾರೆಂದು ಹೇಳುವುದು ತಪ್ಪಲ್ಲವೆ! ತಪ್ಪೇ ಅಲ್ಲ ಪೂರ್ತಿ ಅಜ್ಞಾನವೆಂದು ಹೇಳಬಹುದು.

ನಮ್ಮ ಕತ್ತಿಯಿಂದ ನಾವೇ ಚುಚ್ಚಿಕೊಂಡು ಹೊದ್ದಾಡುತ್ತಾ, ಯಾರೋ ನನ್ನನ್ನು ಇರಿದಿದ್ದಾನೆಂದು ಎನ್ನುವುದು ಎಷ್ಟು ಅಜ್ಞಾನವೊ, ನಮ್ಮ ಕೆಲಸಗಳನ್ನು

ನಾವು ಮಾಡುತ್ತಾ, ಇಲ್ಲದ ಆತ್ಮ ಮಾಡುತ್ತಿದೆಯೆಂದು ಹೇಳುವುದು ಅಷ್ಟೇ ಅಜ್ಞಾನವಾಗುತ್ತದೆಂದು ಆರ್ಯರು ದ್ರಾವಿಡ ಜ್ಞಾನವನ್ನು ಪೂರ್ತಿ ತಪ್ಪು ಹಿಡಿಯುತ್ತಾ ಹೇಳುವುದು ಮಾಡುತ್ತಿದ್ದರು. ಆರ್ಯರು ಬುದ್ಧಿವಂತರಾದ್ದರಿಂದ ಅವರ ಮಾತುಗಳನ್ನು ಕೇಳಿದ ಕೆಲವರು ದ್ರಾವಿಡರು, ತಮ್ಮ ಜ್ಞಾನದ ಮೇಲೆ ತಾವು ಅನುಮಾನವನ್ನು ಬೆಳೆಸಿಕೊಳ್ಳುತ್ತಾ ಬಂದು, ಕೊನೆಗೆ ಆರ್ಯರು ಹೇಳಿರುವುದೇ ಸತ್ಯವೆಂದು ಒಪ್ಪಿಕೊಳ್ಳುತ್ತಾ ಬಂದರು. ಈ ವಿಧವಾಗಿ ಆರ್ಯರು ಬೋಧಿಸುವ ಬೋಧನೆಗಳಿಗೆ ಬದಲಾದ ದ್ರಾವಿಡರು ಅವರ ಮಾತೆ ಸತ್ಯವೆಂದೂ, ತ್ರೈತ ಸಿದ್ಧಾಂತದ ಪ್ರಕಾರ ಮೂರು ಆತ್ಮಗಳಿರುವುದು ಅಸತ್ಯವೆಂದೂ ಅಂದುಕೊಳ್ಳುವುದು ನಡೆದಿದೆ. ಆ ವಿಧವಾಗಿ ಅಡವಿಯಲ್ಲಿ ಬೆಂಕಿ ಬಿದ್ದಹಾಗೆ ದ್ರಾವಿಡರಲ್ಲಿ ಆರ್ಯರ ಬೆಂಕಿ ಬಿದ್ದಿದೆ. ಕಸದ ಮೇಲೆ ಬೆಂಕಿ ಬಿದ್ದರೆ ಯಾರೂ ಹೊತ್ತಿಸ ಬೇಕಾದ ಕೆಲಸವಿಲ್ಲದಂತೆ ಅದಷ್ಟಕ್ಕದೆ ಉರಿದು ದೊಡ್ಡ ರಾದ್ಧಾಂತ ವಾದಹಾಗೆ, ಸಂಶಯಾತ್ಮರಾದ ಕೆಲವರು ದ್ರಾವಿಡರಲ್ಲಿ ಬಿದ್ದಿರುವ ಅಜ್ಞಾನ ಬೆಂಕಿ, ಆರ್ಯರು ಇಟ್ಟಿರುವ ಬೆಂಕಿ ಸ್ವಲ್ಪ ಕಾಲಕ್ಕೆ ಅದಷ್ಟಕ್ಕದೆ ಉರಿಯಲು ಆರಂಭಿಸಿತು. ಅದರ ಫಲಿತವಾಗಿ ಎಷ್ಟೋ ದ್ರಾವಿಡರು ತಮ್ಮ ಮೂರು ಆತ್ಮಗಳ ಜ್ಞಾನವನ್ನು ಬಿಟ್ಟು, ಆರ್ಯರ ನಾಲ್ಕು ವೇದಗಳ ಜ್ಞಾನವನ್ನು ತಲೆಗೇರಿಸಿ ಕೊಂಡಿದ್ದಾರೆ. ಹಾಗೆ ಮಾಡುವುದರಿಂದ ದ್ರಾವಿಡರಲ್ಲಿರುವ ಸಾಂಪ್ರದಾಯಗಳು ಹೋಗಿ, ಅವರಲ್ಲಿ ಆರ್ಯರ ಸಾಂಪ್ರದಾಯಗಳು ಬಂದಿವೆ. ಈ ವಿಧವಾಗಿ ಎರಡು ಯುಗಗಳ ಕಾಲ ಸುಮಾರು (21,60,000) ಇಪ್ಪತ್ತೊಂದು ಲಕ್ಷ ಅರವತ್ತು ಸಾವಿರ ವರ್ಷಗಳು ಆರ್ಯರು ಸುದೀರ್ಘ ಪ್ರಯತ್ನ ಮಾಡಿ, ಕೊನೆಗೆ ಆತ್ಮಜ್ಞಾನವನ್ನು ಮನುಷ್ಯರಲ್ಲಿ ಎಲ್ಲೂ ಇಲ್ಲದಂತೆ ಮಾಡಿದ್ದಾರೆ. ಎಲ್ಲಾದರೂ ದ್ರಾವಿಡ ಜಾತಿ ಎನ್ನುವ ಹೆಸರಿಂದ ಯಾರಾದರೂ ಇದ್ದರೂ, ಅವರಲ್ಲಿ ಆರ್ಯರ ಜ್ಞಾನ ಇಲ್ಲದಿದ್ದರೂ, ತಮ್ಮ ದ್ರಾವಿಡ ಜ್ಞಾನ ಯಾವಮಾತ್ರ ಇಲ್ಲದಂತೆ ಹೋಗಿದೆ. ಕೊನೆಗೆ ತ್ರೈತ ಸಿದ್ಧಾಂತ ಕಣ್ಮರೆಯಾಗಿ ಹೋಗಿದೆ.

ಮೊದಲು ಭೂಮಿಮೇಲೆ ದೇವರ ಜ್ಞಾನ, ಮೂರು ಆತ್ಮಗಳ ಜ್ಞಾನದಿಂದಲೆ ಬಂದಿದೆ. ಆದರೆ ಕಾಲಕ್ರಮದಲ್ಲಿ ಬದಲಾಗುತ್ತಾ ಹೋಗಿ, ಕಲಿಯುಗ ಬರುವುದರೊಳಗೆ ಮೂರು ಆತ್ಮಗಳು ಇಲ್ಲದಂತೆ, ಜೀವಾತ್ಮ, ಪರಮಾತ್ಮ ಅನ್ನುವ ಎರಡು ಆತ್ಮಗಳು ಉಳಿದಿವೆ. ಈ ಎರಡು ಆತ್ಮಗಳನ್ನೇ ಜೀವಿಯು ದೇವರು ಎಂದು ಎಲ್ಲರೂ ಅನ್ನುತ್ತಿದ್ದಾರೆ. ಈ ವಿಧವಾಗಿ ಆರ್ಯರು ಎರಡನೆ ಹಂತದ ಕಾರ್ಯದಲ್ಲಿ ಮೂರು ಆತ್ಮಗಳ ಜ್ಞಾನವನ್ನು ಇಲ್ಲದಂತೆ ಮಾಡಿದ್ದಾರೆ. ಎಂದಾದರೆ ದ್ರಾವಿಡರಲ್ಲಿ ಮೂರು ಆತ್ಮಗಳ ಜ್ಞಾನವಾದ ತ್ರೈತ ಸಿದ್ಧಾಂತ ಜ್ಞಾನ ಹೋಗಿದೆಯೋ, ಆಗ ಕೊನೆಗೆ ಎರಡು ಆತ್ಮಗಳ ಜ್ಞಾನವಾದ ದ್ವೈತ ಸಿದ್ಧಾಂತ ಉಳಿದುಹೋಗಿದೆ. ಆರ್ಯರು ಮೇಲಕ್ಕೆ ಎರಡು ಆತ್ಮಗಳೆಂದು ಹೇಳಿದರೂ, ಅವರ ಆಂತರ್ಯದಲ್ಲಿ ಎರಡು ಆತ್ಮಗಳನ್ನು ಸಹ ನಂಬುವವರಲ್ಲ. ಇರುವುದು ಒಂದು ಆತ್ಮವೇಯೆಂದು ಎರಡನೆಯದು ಇಲ್ಲವೆಂದು ಅವರ ನಂಬಿಕೆ. ಯಾವ ಕೆಲಸವನ್ನು ಮಾಡಬೇಕೆಂದರೂ ಇಬ್ಬರು ಸೇರಿ ನಿರ್ಣಯ ತೆಗೆದುಕೊಳ್ಳಲಾರರು ಅಲ್ಲವೆ! ಒಬ್ಬನೇ ನಿರ್ಣಯ ತೆಗೆದುಕೊಳ್ಳುತ್ತಿದ್ದಾನಲ್ಲವೆ! ಆ ಒಬ್ಬನು ಶರೀರದಲ್ಲಿರುವ ನಾವೇ ಅಲ್ಲವೆ! ಆ ಒಬ್ಬನನ್ನೇ ಜೀವಿಯೆಂದು ಒಂದುಬಾರಿ, ದೇವರೆಂದು ಒಂದುಬಾರಿ ನಾವೇ ಅನ್ನುತ್ತಿದ್ದೇವೆಂದು, ನಿಜಕ್ಕೆ ಇಬ್ಬರು ಇಲ್ಲ, ಒಬ್ಬರೇ ಇದ್ದಾರೆಂದು, ಆರ್ಯರ ಉದ್ದೇಶ ಇರುತ್ತಿತ್ತು. ಆ ಉದ್ದೇಶದ ಪ್ರಕಾರ ಜೀವಿಯನ್ನೇ ದೇವರಾಗಿ ಹೋಲಿಸಿಕೊಂಡು, ಒಬ್ಬನನ್ನು ಜೀವಿಯು ಅನ್ನುವುದಕ್ಕಿಂತ ದೇವರು ಎನ್ನುವುದು ಮೇಲೆಂದು, ದೇವರು ಒಬ್ಬನು ಹೊರತು ಬೇರೆ ಎರಡನೆಯವನೇ ಇಲ್ಲ ಎಂದು ಹೇಳಿದ್ದಾರೆ. ಅದನ್ನೆ ಪರಮಾತ್ಮ ಒಂದೇ ಇದೆ. ನಂತರ ಜೀವಾತ್ಮ ಎನ್ನುವುದು ಸಹ ಇಲ್ಲ ಎಂದು ಹೇಳುವುದು ಪ್ರಾರಂಭಿಸಿದ್ದಾರೆ. ಈ ವಿಧವಾಗಿ ಎರಡು ಆತ್ಮಗಳ ದ್ವೈತ ಸಿದ್ಧಾಂತದಿಂದ ಕೊನೆಗೆ ಏಕಾತ್ಮವಾದ ಪರಮಾತ್ಮ ಹೊರತು ಯಾವುದೂ ಇಲ್ಲವೆನ್ನುವ ಅದ್ವೈತ ಸಿದ್ಧಾಂತದೊಳಗೆ ಬಂದಿದ್ದಾರೆ. ಅದ್ವೈತ ಸಿದ್ಧಾಂತವನ್ನು ತಮ್ಮ ಆಯುಧವಾಗಿ ಮಾಡಿಕೊಂಡು, ಒಂದು ಬಾರಿ ದ್ರಾವಿಡರಲ್ಲಿರುವ ತ್ರೈತ

ಸಿದ್ಧಾಂತವನ್ನು ಸಮೂಲವಾಗಿ ಇಲ್ಲದಂತೆ ಮಾಡಿದ್ದಾರೆ. ಆ ನಂತರ ದ್ವೈತ ಸಿದ್ಧಾಂತದಿಂದ ಕೂಡಿಕೊಂಡವರನ್ನು ಸಹ ಇಲ್ಲದಂತೆ ಮಾಡಿ, ಕೊನೆಗೆ ಅದ್ವೈತ ಸಿದ್ಧಾಂತವನ್ನು ಪ್ರಕಟಿಸಿದ್ದಾರೆ. ಕೃತಯುಗದ ನಂತರ ತ್ರೇತಾಯುಗದಲ್ಲಿ ಪ್ರಾರಂಭವಾದ ಆರ್ಯರ ಪ್ರಯತ್ನಗಳು ತ್ರೇತಾಯುಗ, ದ್ವಾಪರಯುಗ ಎನ್ನುವ ಎರಡು ಯುಗಗಳು ಮುಂದುವರೆದು, ಎರಡು ಯುಗಗಳ ನಂತರ ಕಲಿಯುಗದಲ್ಲಿ ಪ್ರವೇಶಿಸಿವೆ.

ಎರಡು ಯುಗಗಳ ಕಾಲ ಆರ್ಯರು ತಾವು ಏನೆಂದುಕೊಂಡರೆ ಅದು ಮಾಡಿದ್ದಾರೆ. ಒಟ್ಟಾರೆ ದ್ರಾವಿಡ ಜಾತಿಮೇಲೆ ಆಧಿಪತ್ಯವನ್ನು ಪ್ರಕಟಿಸಿಕೊಂಡಿದ್ದಾರೆ. ದ್ರಾವಿಡ ಜ್ಞಾನವನ್ನು ಇಲ್ಲದಂತೆ ಮಾಡಿ, ದ್ರಾವಿಡರನ್ನು ತಮ್ಮಲ್ಲಿ ಸೇರಿಸಿಕೊಂಡು ಆರ್ಯರಾಗಿ ಹೇಳಿಕೊಳ್ಳುವಹಾಗೂ ಸಹ ಮಾಡಿದ್ದಾರೆ. ಕೆಲವರು ದ್ರಾವಿಡರು ತಮ್ಮ ಜ್ಞಾನವನ್ನು ಕಳೆದುಕೊಂಡರೂ, ತಮ್ಮನ್ನು ದ್ರಾವಿಡರಾಗಿಯೇ ಹೇಳಿಕೊಳ್ಳುವವರು ಸಹ ಇದ್ದಾರೆ. ಆದರೆ ಲಂಕೆಗೆ ಸಮೀಪವಾಗಿರುವ ತಮಿಳನಾಡು ಅದರ ಸರಹದ್ದು ಪ್ರಾಂತವಾದ ಆಂಧ್ರ, ಕರ್ನಾಟಕ ರಾಷ್ಟ್ರಗಳಲ್ಲಿ ಸ್ವಲ್ಪ ಭಾಗ ಪ್ರಜೆಗಳು ಆರ್ಯರಿಗೆ ಬಗ್ಗದೆ ತಮ್ಮ ದ್ರಾವಿಡ ಸಂಸ್ಕೃತಿಯನ್ನು ಬಲವಾಗಿ ಸಾಗಿಸುತ್ತಿದ್ದರು. ಆದರೂ ಇಂದಿಗೂ ಕೆಲವು ದ್ರಾವಿಡ ಆಚರಣೆಗಳಿದ್ದರೂ, ಅರ್ಥವಿಲ್ಲದವುಗಳಾಗಿ, ಅರ್ಥಗಳು ತಿಳಿಯದ ಆಚರಣೆಗಳಾಗಿ ಉಳಿದುಹೋಗಿವೆ. ಉದಾಹರಣೆಗೆ ಕರ್ನಾಟಕ, ಆಂಧ್ರ, ತಮಿಳನಾಡು ಪ್ರಾಂತಗಳಲ್ಲಿ ದೇವಾಲಯ ನಿರ್ಮಾಣಗಳು ದ್ರಾವಿಡ ಸಾಂಪ್ರದಾಯ ಬದ್ದವಾಗಿ, ದ್ರಾವಿಡ ಜ್ಞಾನಕ್ಕೆ ಹತ್ತಿರವಾಗಿ ಇವೆ. ಇಂದಿಗೂ ತಮಿಳನಾಡಿನವರು ಎಲ್ಲಿ ದೇವಸ್ಥಾನಗಳು ಕಟ್ಟಿದರೂ, ಆ ನಿರ್ಮಾಣಗಳೆಲ್ಲವೂ ಪೂರ್ತಿ ದ್ರಾವಿಡ ಸಂಪ್ರದಾಯದಿಂದಲೇ ಕೂಡಿಕೊಂಡು ಇರುವಹಾಗೆ ಕಟ್ಟುತ್ತಿರುವರು. ಆದರೆ ಪೂರ್ತಿ ವಿವರ ತಿಳಿಯದಂತೆ ಹೋಗಿದೆ. ದೇವಸ್ಥಾನದಲ್ಲಿನ ಯಾವ ಕಟ್ಟಡ, ದ್ರಾವಿಡರ ಸಾಂಪ್ರದಾಯಗಳಲ್ಲಿ, ಯಾವ ಸಾಂಪ್ರದಾಯವನ್ನು ತಿಳಿಸುತ್ತಿದೆಯೋ, ಯಾವ ಜ್ಞಾನವನ್ನು ಸೂಚಿಸುತ್ತಿದೆಯೋ,

ತಿಳಿಯದ ಸ್ಥಿತಿಯಲ್ಲಿ ನಿರ್ಮಾಣಗಳು ನಡೆಯುತ್ತಿವೆ. ಎರಡು ಯುಗಗಳ ನಂತರ ಅಲ್ಲಾದರೂ, ದ್ರಾವಿಡ ಸಂಪ್ರದಾಯ ದೇವಸ್ಥಾನಗಳು ಉಳಿದಿರುವುದಕ್ಕೆ, ಈಗಲೂ ಸಹ ಅದೇ ಸಂಪ್ರದಾಯದಲ್ಲಿ ನಿರ್ಮಾಣಗಳು ನಡೆಯುತ್ತಿರುವುದಕ್ಕೆ, ಸ್ವಲ್ಪವಾದರೂ ನಾವು ಸಂತೋಷಪಡಬೇಕು. ದ್ರಾವಿಡ ಸಂಪ್ರದಾಯಬದ್ಧವಾಗಿ, ದ್ರಾವಿಡ ಜ್ಞಾನ ಪ್ರಕಾರವಾಗಿರುವ ದೇವಾಲಯ ನಿರ್ಮಾಣಗಳ, ರಹಸ್ಯಗಳನ್ನು ಕುರಿತು **ನಮ್ಮ ರಚನೆಗಳಲ್ಲಿ "ದೇವಾಲಯ ರಹಸ್ಯಗಳು" ಎನ್ನುವ ಗ್ರಂಥದಲ್ಲಿ ತಿಳಿಸಲಾಗಿದೆ**. ದೇವಾಲಯಗಳಲ್ಲಿನ ದ್ರಾವಿಡ ಸಂಸ್ಕೃತಿಯನ್ನು ಕುರಿತು, ದ್ರಾವಿಡ ಜ್ಞಾನವನ್ನು ಕುರಿತು ಪ್ರಪಂಚದಲ್ಲಿಯೆ ಮೊದಲಬಾರಿಗೆ ತಿಳಿಸಿದ ನಮ್ಮ ಸಂಚಲನಾತ್ಮಕ ಗ್ರಂಥವೇ **"ದೇವಾಲಯ ರಹಸ್ಯಗಳು."**

ಕಲಿಯುಗ ಬಾರದ ಮುನ್ನ ಏಕ ಕುಟುಂಬವಾಗಿದ್ದ ದ್ರಾವಿಡ ಪ್ರಜೆಗಳನ್ನು ಕುಲದವರಂತೆ ವಿಭಜಿಸಿ ಚಿನ್ನಾಭಿನ್ನ ಮಾಡುವುದೇ ಅಲ್ಲದೆ, ಆರ್ಯರು ತಮ್ಮನ್ನು ಬ್ರಾಹ್ಮಣರಾಗಿ, ಗುರುಗಳಾಗಿ ಪ್ರಕಟಿಸಿಕೊಂಡು ರಾಜರ ಹತ್ತಿರ, ಗ್ರಾಮ ಮಟ್ಟದ ಹಿರಿಯರ ಹತ್ತಿರ ಒಳ್ಳೆ ಸ್ಥಾನವನ್ನು ಸಂಪಾದಿಸಿಕೊಂಡು, ಅವರ ಪಕ್ಕದಲ್ಲಿದ್ದು ರಾಜನನ್ನೂ, ರಾಜ್ಯವನ್ನು ನಡೆಸುವ ಸಾಮರ್ಥ್ಯ ಹೊಂದಿದ್ದರು. ನಾಲ್ಕು ವೇದಗಳು ಬಾಯಿಪಾಠ ಹೇಳುವವರಾಗಿ, ಉಪನಿಷತ್ತುಗಳನ್ನು, ಪುರಾಣಗಳನ್ನು ಹೇಳುತ್ತಾ, ಪ್ರಜೆಗಳಲ್ಲಿ ಪೂಜ್ಯರಾಗಿ ಗೌರವಾನ್ವಿತರಾಗಿ ಕಾಲ ಕಳೆಯುತ್ತಾ, ಆರ್ಯರು ಪೂರ್ತಿ ಗೌರವಕ್ಕೂ, ಸುಖಕ್ಕೂ ಅಭ್ಯಾಸವಾಗಿ ಸುಖ ಜೀವನವನ್ನು ಕಳೆಯುತ್ತಿದ್ದರು. ಕವಿಗಳು, ಪಂಡಿತರು, ಆಧ್ಯಾತ್ಮಿಕ ಗುರುಗಳು ಆರ್ಯರೆ ಆಗಿರುವುದರಿಂದ ಅವರ ಮಾತಿಗೆ ಅಡ್ಡಿ ಇಲ್ಲದಂತಿತ್ತು. ಕಲಿಯುಗ ಬಂದನಂತರ ಸುಮಾರು ಎರಡು ಸಾವಿರ ಐದುನೂರು (2500) ವರ್ಷಗಳು ಕಳೆದ ನಂತರ ಗೌತಮ ಬುದ್ಧನು ಜನ್ಮಿಸಿ, ಆತನು ದೊಡ್ಡವನಾಗಿ ತಾನು ಅನುಭವದಲ್ಲಿ ಹೊಂದಿದ ಜ್ಞಾನವನ್ನು ಪ್ರಜೆಗಳಿಗೆ ಹೇಳುವುದಕ್ಕೆ ಪ್ರಾರಂಭಿಸಿದನು. ಇಂದಿಗೂ 2660 ವರ್ಷಗಳ ಕೆಳಗೆ ಆರ್ಯರಿಗೆ ಬುದ್ಧನು ಕಡಿಯಲಾರದ ಕಟ್ಟೆಗೆಯಂತೆ ಬದಲಾಗಿದ್ದಾನೆ. ಬುದ್ಧನು ತನಗೆ ತಿಳಿದ ಅಷ್ಟಾಂಗ ಸೂತ್ರಗಳನ್ನು ಪ್ರಚಾರ

ಮಾಡಿರುವಾಗ, ಆಗಾಗಲೆ ಕುಲ ವಿಪಕ್ಷಗಳಿಂದ ಕಷ್ಟ ಪಡುತ್ತಿದ್ದ ಪ್ರಜೆಗಳೆಲ್ಲರೂ ಬುದ್ಧನು ಪ್ರತಿಪಾದಿಸಿದ "ಎಲ್ಲರೂ ಸಮಾನವೇ. ಯಾರನ್ನೂ ಕಡಿಮೆಯಾಗಿ ನೋಡಬಾರದು. ಎಲ್ಲರಿಗೂ ಒಳ್ಳೆಯದು ನಡೆಯಬೇಕೆಂದು ಕೋರಿಕೊಳ್ಳಬೇಕು. ಎಲ್ಲರನ್ನೂ ಕ್ಷಮಿಸುವ ಸ್ವಭಾವವಿರಬೇಕು. ಇತರರ ಆನಂದವೇ ತಮ್ಮ ಆನಂದವೆಂದು ತಿಳಿಯಬೇಕು. ಇತರರು ಬಾಧೆಪಡುವ ಕೆಲಸಗಳನ್ನು ಮಾಡಬಾರದು. ಎಲ್ಲರ ಕ್ಷೇಮವನ್ನೂ ಕೋರಿಕೊಳ್ಳಬೇಕು. ಸರ್ವ ಪ್ರಾಣಿಗಳನ್ನು ಸಮದೃಷ್ಠಿಯಿಂದ ನೋಡಬೇಕು" ಅನ್ನುವ ಎಂಟು ಸೂತ್ರಗಳ ಕಡೆ ಆಕರ್ಷಿತರಾಗಿ, ಆರ್ಯರಿಂದ ಬುದ್ಧನಕಡೆ ಬದಲಾವಣೆಯಾಗುವುದಕ್ಕೆ ಪ್ರಾರಂಭಿಸಿದ್ದಾರೆ.

ಯುದ್ಧಗಳಲ್ಲಿ ಎಲ್ಲರನ್ನೂ ಹಿಂಸಿಸಿ ಬೇಸರಗೊಂಡ ಅಶೋಕ ಚಕ್ರವರ್ತಿ ಬುದ್ಧನ ಸೂತ್ರಗಳಿಗೆ ಪೂರ್ತಿಯಾಗಿ ಆಸಕ್ತನಾಗಿದ್ದಾನೆ. ಅಷ್ಟೇ ಅಲ್ಲದೆ ಅಶೋಕಚಕ್ರವರ್ತಿ ಮಗಳು, ಮಗ ಇಬ್ಬರೂ ದೇಶದಲ್ಲೂ, ಇತರ ಪ್ರಾಂತಗಳಲ್ಲೂ, ಬುದ್ಧನ ಸೂತ್ರಗಳನ್ನು ಪ್ರಚಾರ ಮಾಡಲಾರಂಭಿಸಿದ್ದಾರೆ. ಆತನು ಹೇಳಿದ ಅಷ್ಟ ಸೂತ್ರಗಳನ್ನು ದೊಡ್ಡ ಸ್ಥೂಪಗಳ ಮೇಲೆ ಬರೆಯಿಸಿ ಎಲ್ಲರಿಗೂ ತಿಳಿಯುವಹಾಗೆ ಮಾಡಿದ್ದಾರೆ. ಇದೆಲ್ಲವೂ ಪಕ್ಕದಲ್ಲಿದ್ದು ಗಮನಿಸಿದ ಆರ್ಯರು ಬುದ್ಧನು ಪ್ರಚಾರ ಆಗುವುದು ಇಷ್ಟವಿಲ್ಲದೆ ಬುದ್ಧನ ಮೇಲೆ ಸಹ ಅಸೂಯೆ ಪಡುತ್ತಿದ್ದರು. ದ್ರಾವಿಡರನ್ನೇ ಭ್ರಷ್ಟು ಹಿಡಿಸಿದ ಆರ್ಯರಿಗೆ ಬುದ್ಧನು ಒಂದು ಲೆಕ್ಕನಾ ಎನ್ನುವಹಾಗೆ, ಬುದ್ಧನು ಹಿಂದೂ ಮತದವನೇ ಅಲ್ಲ ಎಂದು ಪ್ರಚಾರ ಮಾಡಿ, ಯಾರನ್ನೂ ಬುದ್ಧನ ಕಡೆಗೆ ಹೋಗದಂತೆ ನೋಡಬೇಕೆಂದು ಪಥಕ ಹಾಕಿದ್ದಾರೆ. ಅದರ ಪ್ರಕಾರವೇ ಬುದ್ಧನು ಪರಮತದವನೆಂದು, ಹಿಂದೂಗಳಾದ ಆರ್ಯರಿಗೆ ವಿರುದ್ಧವಾಗಿ ಬೋಧಿಸುತ್ತಿದ್ದಾನೆಂದು, ಹಾಗೆ ಬೋಧಿಸುವುದರಿಂದ ಹಿಂದೂಮತ ಕ್ಷೀಣಿಸಿ ಕೊನೆಗೆ ಎಲ್ಲರೂ ಬೌದ್ಧ ಮತಸ್ಥರಾಗಿ ಬದಲಾಗುವರೆಂದು ಪ್ರಚಾರ ಮಾಡಿದ್ದಾರೆ. ಅಲ್ಲಿಯವರೆಗು ಮತಗಳ ಪ್ರಸ್ತಾವನೆ ಇಲ್ಲದ ಹಿಂದೂಗಳಲ್ಲಿ ಬೌದ್ಧಮತವೆನ್ನುವುದನ್ನು ಆರ್ಯರೇ ಮೊದಲು ಹೆಸರು ಇಟ್ಟು ಹೇಳಿದ್ದಾರೆ.

ಗೌತಮಬುದ್ಧನು ಮೊದಲಿನಿಂದ ಹಿಂದೂ ಸಮಾಜದಲ್ಲೇ ಇದ್ದರೂ, ಆತನು ತಮಗಿಂತ ಬೇರೆ ಮತಸ್ಥನಾಗಿ ಇದ್ದಾನೆಂದು ಆರ್ಯರು ಪ್ರಚಾರ ಮಾಡಿದ್ದಾರೆ.

ಹಿಂದೂದೇಶವಾಗಿ ಬದಲಾದ ಇಂದೂದೇಶದಲ್ಲಿ, ಕಲಿಯುಗ ಬಂದ ನಂತರ ಸಹ 2500 ವರ್ಷಗಳು ಮತ ಎನ್ನುವ ಮಾತೇ ಇಲ್ಲ. ಇರುವುದು ಹಿಂದೂ ಸಮಾಜ ಅಥವಾ ಆರ್ಯ ಸಮಾಜ. ಅಂತಹ ಸಮಯದಲ್ಲಿ ಬುದ್ಧನು ಹಿಂದೂಸಮಾಜದಲ್ಲೇ ಹುಟ್ಟಿದ್ದಾನೆ. ಬುದ್ಧನು ಸನ್ಯಾಸತ್ವ ತೆಗೆದುಕೊಂಡು, ಕಾಷಾಯ ವಸ್ತ್ರಗಳು ಧರಿಸಿ ಬೋಳು ಮಾಡಿಸಿಕೊಂಡು, ಹಿಂದೂ ಸನ್ಯಾಸಿಗಳ ಹಾಗೆ ಹೆಂಡತಿಯನ್ನು ಸಹ ಬಿಟ್ಟು, ಎಲ್ಲವನ್ನು ಸನ್ಯಸಿಸಿದ ಹಿಂದೂ ಸನ್ಯಾಸಿಯೇ. ಅಂತಹ ಸನ್ಯಾಸಿ ಆದ ಬುದ್ಧನ ಸೂತ್ರಗಳಿಗೆ, ಆತನ ಜ್ಞಾನಕ್ಕೆ ಪ್ರಜೆಗಳು, ಪ್ರಭುಗಳು ಆಕರ್ಷಿತರಾಗುತ್ತಿದ್ದಾರೆಂದು ಸಹಿಸದೆ ತಮ್ಮ ಆರ್ಯರ ಪ್ರಾಬಲ್ಯ ಬುದ್ಧನಿಂದ ಕಡಿಮೆ ಆಗುತ್ತದೇನೋ ಎನ್ನುವ ಅನುಮಾನದಿಂದ, ಬುದ್ಧನ ಮೇಲೆ ಅಸೂಯೆಪಟ್ಟು, ಬುದ್ದನು ಹಿಂದೂ ಸನ್ಯಾಸಿಯಾಗಿ ಇದ್ದರೂ ಆತನನ್ನು ಪರಮತಸ್ಥನೆಂದು, ಹಿಂದೂ ಮತದವನು ಅಲ್ಲ ಎಂದು, ಬೌದ್ಧಮತ ಬೇರೆ ಹಿಂದೂ ಮತ ಬೇರೆ ಎಂದು, ಬುದ್ಧನನ್ನು ಹಿಂದೂ ಸಮಾಜದಿಂದ ಬೇರೆಮಾಡಿ, ಬೌದ್ಧಮತಸ್ಥನಾಗಿ ವರ್ಣಿಸಿ ಹೇಳಿದ್ದಾರೆ. ಆ ಸಮಯಕ್ಕೆ ಸ್ವಲ್ಪ ಕಾಲದಿಂದ ಪ್ರಚಾರವಾಗುತ್ತಿರುವ ಬೌದ್ಧ ಸೂತ್ರಗಳನ್ನು ಭಾರತದೇಶದಲ್ಲಿ ಯಾರೂ ತಿಳಿದುಕೊಳ್ಳದಂತೆ ಇರುವಹಾಗೆ ಆರ್ಯರು ಕಟ್ಟುನಿಟ್ಟು ಮಾಡಿದ್ದಾರೆ. ಆರ್ಯರ ಮಾತುಗಳು ಕೇಳುತ್ತಿರುವವರೆಲ್ಲರೂ ಬೌದ್ಧ ಸೂತ್ರಗಳನ್ನು ಬಿಟ್ಟಾಗ, ಬೌದ್ಧ ಮತ ಭಾರತದೇಶದಲ್ಲಿ ಅಭಿವೃದ್ಧಿ ಹೊಂದದೆ ಹೋಗಿದೆ. ಆದರೆ ಆರ್ಯರ ಪ್ರಭಾವವಿಲ್ಲದ ಚೈನಾ, ಟಿಬೆಟ್, ಜಪಾನ್, ಶ್ರೀಲಂಕ, ರಷ್ಯಾ ಮೊದಲಾದ ಏಷ್ಯಾ ದೇಶಗಳಲ್ಲೂ, ಐರೋಪಾ(ಯೂರೋಪ್) ಖಂಡದಲ್ಲೂ ಬೌದ್ಧಮತ ಚೆನ್ನಾಗಿ ಅಭಿವೃದ್ಧಿ ಹೊಂದಿದೆ. ಆರ್ಯರ ಅಸೂಯೆಯಿಂದ ಭಾರತದೇಶದಲ್ಲಿ ಹುಟ್ಟಿದ ಬೌದ್ಧಮತ ಭಾರತದೇಶದಲ್ಲಿ ಅಭಿವೃದ್ಧಿ ಹೊಂದಲಾರದೆ ಹೋದರೂ, ಈ ದಿನ ಉಳಿದ ದೇಶಗಳಲ್ಲಿ ಹಿಂದೂ ಮತಕ್ಕಿಂತ ದೊಡ್ಡದಾಗಿ ಇದೆ.

ಆ ದಿನ ಅಸೂಯದಿಂದ ಹಿಂದುಗಳಲ್ಲಿನ ಬುದ್ಧನನ್ನು ಹಿಂದುಗಳಿಂದ ಹೊರಹಾಕದೆ ಬುದ್ಧನು ಸಹ ಭಾರತದೇಶದಲ್ಲಿನ ಹಿಂದುವೇ ಅಲ್ಲವೆ ಎಂದು ಅಂದುಕೊಂಡಿದ್ದರೆ ಬೌದ್ಧವು ಈದಿನ ಹಿಂದುಗಳಲ್ಲಿ ಹಿಂದೂ ಸಮಾಜವಾಗಿಯೇ ಇರುತ್ತಿತ್ತು. ಹಾಗೆ ಬೌದ್ಧವು ಹಿಂದೂ ಸಮಾಜವಾಗಿದ್ದಿದ್ದರೆ ಈದಿನ ಬೌದ್ಧಮತ ಅನ್ನುವುದು ಇರುವ ದೇಶಗಳಲ್ಲಿ ಸಹ ಹಿಂದೂ ಮತವಿದೆಯೆಂದು ಹೇಳಿಕೊಳ್ಳುವ ಅವಕಾಶ ಇರುತ್ತಿತ್ತು. ಹಾಗೆ ಹಿಂದೂ ಮತ ಎಷ್ಟೋ ದೇಶಗಳಲ್ಲಿ ವಿಸ್ತರಿಸಿರುವುದಾಗಿ ಇರುತ್ತಿತ್ತು. ಆದರೆ ಆರ್ಯರು ಸ್ವಾರ್ಥ ಬುದ್ಧಿಯಿಂದ ಮಾಡಿದ ಕೆಲಸದಿಂದ, ಬುದ್ಧನನ್ನು ಹಿಂದೂ ಮತದಿಂದ ಹೊರಹಾಕಿರುವುದಿರಿಂದ, ಆರ್ಯರು ಹಿಂದೂ ಸಮಾಜವನ್ನು ನಾಶ ಮಾಡಿದ್ದಾರೆಂದೇ ಹೇಳಬಹುದಾಗಲೀ, ಉದ್ಧರಿಸಿದ್ದಾರೆಂದು ಹೇಳಲಾರೆವು. ತಮ್ಮ ಅಧಿಕಾರಕ್ಕೋಸ್ಕರ, ತಮ್ಮ ಸುಖಗಳಿಗೋಸ್ಕರ ಹಿಂದೂ ಮತಕ್ಕೆ ಬಹಳ ದ್ರೋಹ ಮಾಡಿದ್ದಾರೆಂದು ಹೇಳಬಹುದು. ಆರ್ಯರು ಬುದ್ಧಿವಂತರು ಆದ್ದರಿಂದ ಅವರು ತಪ್ಪು ಮಾಡಿದರೂ ಯಾವಕಾರಣಕ್ಕು ಹೊರಬೀಳದಂತೆ ಇತರರ ದೃಷ್ಠಿಯಲ್ಲಿ ತಮ್ಮ ತಪ್ಪು ಇಲ್ಲವೆನ್ನುವಹಾಗೆ ಈ ದಿನ ಹಿಂದೂ ಧರ್ಮರಕ್ಷಣೆ ಎನ್ನುವ ನಿನಾದವನ್ನು ಪ್ರಾರಂಭಿಸಿದ್ದಾರೆ. ಅವರು ಹಾಗಿರುವಾಗ ಆರ್ಯ ಸಂತತಿ ಅಲ್ಲದ ದ್ರಾವಿಡರು ಬುದ್ಧಿಇಲ್ಲದಂತಿದ್ದು ಸಮಾಜದಲ್ಲಿ ಆರ್ಯರಿಂದ ಯಾವ ಕೆಲಸ ನಡೆದರೂ, ಇದು ಒಳ್ಳೆಯದಾ ಕೆಟ್ಟದಾ ಎಂದಾಗಲಿ, ಆರ್ಯರು ಹಿಂದೂ ಸಮಾಜವನ್ನು ಉದ್ಧರಿಸುತ್ತಿದ್ದಾರಾ, ಇಲ್ಲವೆ ನಾಶ ಮಾಡುತ್ತಿದ್ದಾರಾ, ಎಂದಾಗಲೀ ಗ್ರಹಿಸಲಾರದೆ ಹೋಗುತ್ತಿದ್ದಾರೆ. ಅಷ್ಟೇ ಅಲ್ಲದೆ ದ್ರಾವಿಡ ಜಾತಿಯಿಂದ ಮೋಸಹೋಗಿ ಶೂದ್ರರಾದವರನ್ನು ಆರ್ಯರಾದವರು ಬಳಸಿಕೊಳ್ಳುತ್ತಾ, ತಮಗೆ ಯಾರಾದರೂ ಶತ್ರುಗಳಾಗಿಯೊ, ವಿಮರ್ಶಕರಾಗಿಯೊ ಕಾಣಿಸಿದರೆ ಶೂದ್ರರನ್ನೇ ಪ್ರೇರೇಪಿಸಿ ಅವರನ್ನೇ ಬಳಸಿಕೊಂಡು, ಅವರಿಂದಲೇ ಇತರರನ್ನು ಅಡಗಿಸಿ ಹಾಕುತ್ತಿದ್ದಾರೆ. ತಮಗೆ ಆತಂಕವಾಗಿರುವ ಶೂದ್ರರನ್ನು ಶೂದ್ರರಿಂದಲೇ ಹೊಡೆಸಿ, ಬೈಯ್ಯುವಂತೆ ಮಾಡಿ ತಮಗೆ ಅಡ್ಡಿ ಇಲ್ಲದಂತೆ ಮಾಡಿಕೊಳ್ಳುತ್ತಿದ್ದಾರೆ.

ಹಿಂದೂಗಳಲ್ಲಿ ಶೂದ್ರನಾದ ಬುದ್ಧನನ್ನು ತಮ್ಮವನು ಅಲ್ಲವೆನ್ನುತ್ತಾ ದುರ್ಬುದ್ಧಿಯಿಂದ, ಶೂದ್ರರಿಂದಲೇ ದೂರ ಮಾಡಿಸಿದ ಆರ್ಯರು, ಯಾರಾದರೂ ಶೂದ್ರನು ತಮಗೆ ವಿರುದ್ಧವಾಗಿ ಕಾಣಿಸಿದರೆ, ಅವರನ್ನು ಪರಮತದವನೆಂದು ಮುದ್ರೆ ಹಾಕಿ, ಶೂದ್ರನಾದವನನ್ನು ಶೂದ್ರರಿಂದಲೇ ಹಿಂಸಿಸಿ, ಅವರ ದಾರಿಗೆ ಅಡ್ಡಿ ಇಲ್ಲದಂತೆ ಮಾಡಿಕೊಳ್ಳುವುದು ನಡೆಯುತ್ತಿದೆ. ಆದರೆ ಶೂದ್ರರು ಆರ್ಯರ ಕೈಯಲ್ಲಿನ ಆಯುಧಗಳಂತೆ ತಯಾರಾಗಿ, ಶೂದ್ರರಾದವರನ್ನೇ ಶೂದ್ರರೆ ಹಿಂಸಿಸುವುದರಲ್ಲಿ ಆರ್ಯರ ತಿಳುವಳಿಕೆ ಕಾಣಿಸಿದರೂ, ಅವರಿಗೆ ಉಪಯೋಗವಾಗುವ ಶೂದ್ರರ ಬುದ್ಧಿ ಇಲ್ಲದ ಕೆಲಸ ಚೆನ್ನಾಗಿ ಕಾಣಿಸುತ್ತಿದೆ. ಈ ದಿನ ಶೂದ್ರರಾದವರು ಎಷ್ಟೋ ಕಲಿಯಬೇಕಾಗಿದೆ. ಯಾರೊ ಏನೊ ಹೇಳಿದರೆ ಅದೇ ನಿಜವೆಂದು ನಂಬಿ, ಒಬ್ಬ ಶೂದ್ರನು ಮತ್ತೊಬ್ಬ ಶೂದ್ರನನ್ನು ಬಾಧಿಸುವುದು, ಹಿಂಸಿಸುವುದು ಶೂದ್ರರ ಬುದ್ಧಿ ಇಲ್ಲದ ಕೆಲಸವಲ್ಲವೆ! ಎಂದು ಕೇಳುತ್ತಿದ್ದೇವೆ. ಶೂದ್ರರು ಆರ್ಯರ ಮನೆ ನಾಯಿಗಳ ಹಾಗೆ ವ್ಯವಹರಿಸುತ್ತಾ, ಅವರು ಯಾರನ್ನು ಕಚ್ಚು ಎಂದರೆ ಅವರನ್ನು ಕಚ್ಚುತ್ತಾ ಹೋದರೆ, ಹಿಂದೂ ಸಮಾಜ ಕ್ಷೀಣಿಸದೆ ಹೇಗೆ ಅಭಿವೃದ್ಧಿ ಆಗುತ್ತದೆ? ಹಿಂದೂ ಧರ್ಮ ರಕ್ಷಣೆ ಅನ್ನುವ ನೆಪದಿಂದ ಹಿಂದುವನ್ನೇ ಹಿಂದುಗಳ ಮೇಲೆ ಪ್ರೇರೇಪಿಸುವ ಆರ್ಯರು ಇರುವವರೆಗು, ಆರ್ಯರು ಪ್ರೇರೇಪಿಸಿದರೆ ಹಿಂದೆ ಮುಂದೆ ನೋಡದಂತೆ ಇತರರ ಮೇಲೆ ದಾಳಿ ಮಾಡುವ ಶೂದ್ರರು ಇರುವವರೆಗು, ಹಿಂದೂ ಸಮಾಜ ಕ್ಷೀಣಿಸುವುದು ಹೊರತು, ಅಭಿವೃದ್ಧಿ ಆಗುವುದು ಇರುವುದಿಲ್ಲ.

ಈ ಗ್ರಂಥವನ್ನು ಓದುವವರು ಯಾರಾದರೂ ನ್ಯಾಯವಾಗಿ ಬುದ್ಧನ ವಿಷಯವನ್ನು ಕುರಿತು ಹೇಳಿರಿ. ಅಲ್ಲಿಯವರೆಗು ಕಿಂಚಿತ್ತಾದರೂ ಇತರ ಮತವೇ ಇಲ್ಲದ ಆ ದಿನಗಳಲ್ಲಿ, ಬುದ್ಧನು ನನ್ನ ಮತ ಬೇರೆಯೆಂದು, ಎಲ್ಲಾದರೂ ಹೇಳಿದ್ದಾನಾ? ನಾನು ಸಹ ಹಿಂದೂ ಸಮಾಜದವನೆಯೆಂದು ಹಿಂದೂತ್ವಕ್ಕೆ ಗುರುತು ಬಣ್ಣವಾಗಿರುವ ಕಾಷಾಯವನ್ನು ಧರಿಸಿದರೂ, ಸನ್ಯಾಸಿಯಾಗಿ ಬದಲಾದರೂ, ನೀನು ಬೇರೆ, ನಿನ್ನ ಜ್ಞಾನ ಬೇರೆ, ನಿನ್ನ ಮತ ಬೇರೆಯೆಂದು

ಹಿಂದೂ ಸಮಾಜದಿಂದ ಹೊರಹಾಕಿದವರು ಹಿಂದೂತ್ವವನ್ನು ಉದ್ಧರಿಸುವವರಾ? ಹಿಂದೂ ಧರ್ಮರಕ್ಷಣೆ ಮಾಡುವವರಾ? ಈ ಪ್ರಶ್ನೆಗಳಿಗೆ ಉತ್ತರವನ್ನು ನ್ಯಾಯವಾಗಿ ಹೇಳಿದರೆ ಹಿಂದೂತ್ವವನ್ನು ಸರ್ವನಾಶ ಮಾಡಿದವರೆಂದು ಹೇಳಬಹುದು. ಹಿಂದೂ ಧರ್ಮಗಳನ್ನು ಭಕ್ಷಿಸಿದವರೆಂದು ಹೇಳಬಹುದು. ಆ ದಿನ ಶೂದ್ರನು ಅಸೂಯದಿಂದ ಬುದ್ಧನನ್ನು ಹೊರಹಾಕಿ, ಈದಿನ ಬೌದ್ಧವು ಹಿಂದೂತ್ವದಲ್ಲಿನ ಭಾಗವೇ ಎಂದು ಹೇಳಿಕೊಳ್ಳದ ಸ್ಥಿತಿಗೆ ಹೋಗಿ, ಹಿಂದೂತ್ವಕ್ಕು, ಹಿಂದೂ ಧರ್ಮಗಳಿಗೂ ಬಹಳ ದ್ರೋಹ ಮಾಡಿದ್ದಾರೆಂದೇ ಹೇಳಬಹುದು.

**ಪ್ರಶ್ನೆ :–** ಇಲ್ಲಿಯವರೆಗು ಆರ್ಯರಿಗೆ ಯಾರೂ ಅಡ್ಡಿ ಆಗಲಿಲ್ಲವೆ? ಅವರ ಬುದ್ಧಿಗಿಂತ ಮೀರಿದವರು ಹುಟ್ಟಲಿಲ್ಲವೆ?

**ಉತ್ತರ :–** ಆರ್ಯರಿಗೆ ಅಡ್ಡಿ ಆದವನು ಗೌತಮ ಬುದ್ಧನು, ಕಲಿಯುಗ ಎರಡು ಸಾವಿರದ ಐದು ನೂರು (2500) ವರ್ಷಗಳು ಕಳೆದ ನಂತರ ಇಂದೂದೇಶವೆಂದು ಹೇಳಲಾಗುತ್ತಿರುವ ಭಾರತದೇಶದಲ್ಲಿ ಕಾಶೀಗೆ ಉತ್ತರದಲ್ಲಿ, ಅಯೋಧ್ಯಗೆ ಈಶಾನ್ಯದಲ್ಲಿ ಭುಯಿಲಾ ಎಂಬ ಗ್ರಾಮದಲ್ಲಿ ಗೌತಮ ಬುದ್ಧನು ಜನ್ಮಿಸಿದ್ದಾನೆ. ತಾಯಿ ಮಾಯಾದೇವಿ, ತಂದೆ ಶುದ್ಧೋಧನ ಆದರೆ ಬುದ್ಧನು ಎನ್ನುವ ಹೆಸರು ಆತನಿಗೆ ಜ್ಞಾನೋದಯವಾದ ನಂತರ ಬಂದಿದೆ. ಹುಟ್ಟಿದಾಗ ಇಟ್ಟಿರುವ ಹೆಸರು ಸಿದ್ಧಾರ್ಥ. ಸಿದ್ಧಾರ್ಥನು ಅಂದರೆ ಮೋಕ್ಷವನ್ನು ಅರ್ಥಿಸುವವನು ಅಥವಾ ಮುಕ್ತಿಯನ್ನು ಕೇಳುವವನೆಂದು ಅರ್ಥ. ಆ ದಿನ ಅವರ ತಾಯಿ ತಂದೆಯರಾದ ಶುದ್ಧೋಧನನು ಮಾಯಾದೇವಿ ತಿಳಿದೋ, ತಿಳಿಯದೋ ಒಳ್ಳೆಯ ಅರ್ಥವಿರುವ ಹೆಸರನ್ನು ಸಿದ್ಧಾರ್ಥನೆಂದು ಇಡುವುದು ನಡೆದಿದೆ. ಸಿದ್ಧಾರ್ಥನು ಹುಟ್ಟಿದ ಸ್ವಲ್ಪ ಕಾಲಕ್ಕೆ, ವರ್ಷ ಮುಗಿಯದ ಮೊದಲೆ ತಾಯಿ ಕ್ಷಯ ರೋಗದಿಂದ ಸತ್ತುಹೋದರೆ, ಆತನ ಚಿಕ್ಕಮ್ಮ ಆದ ಗೌತಮೀದೇವಿ ಚಿಕ್ಕಂದಿನಿಂದ ಬೆಳೆಸಿರುವುದರಿಂದ, ಆತನನ್ನು ಎಲ್ಲರೂ ಗೌತಮನೆಂದು ಕರೆಯುತ್ತಿದ್ದರು. ಈ ವಿಧವಾಗಿ ಗೌತಮನೆನ್ನುವ ಎರಡನೆ ಹೆಸರು ಆತನಿಗೆ

ಬರುವುದು ನಡೆದಿದೆ. ಗೌತಮನು ಬೆಳೆದು ದೊಡ್ಡವನಾಗಿ ವಿವಾಹ ನಡೆದು, ಕುಮಾರನು ಹುಟ್ಟಿದ ನಂತರ ಜ್ಞಾನ ಜಿಜ್ಞಾಸೆ ಇರುವವನಾಗಿ, ವೈರಾಗ್ಯವನ್ನು ಹೊಂದಿ ಒಂದು ದಿನ ಅರ್ಧರಾತ್ರಿ ಹೆಂಡತಿ ಯಶೋಧರಾದೇವಿಯನ್ನೂ, ಒಂದು ವರ್ಷದ ಕುಮಾರನನ್ನೂ ಬಿಟ್ಟು ಮನೆಯಿಂದ ಹೋದವನು ಮತ್ತೆ ಮನೆಗೆ ಬರಲಿಲ್ಲ. ಭಾರತದೇಶದಲ್ಲಿನ ಬೀಹಾರು ರಾಷ್ಟ್ರ ಪ್ರಾಂತದಲ್ಲಿ ಹುಟ್ಟಿದವನಾದ್ದರಿಂದ ಭಾರತದೇಶದಲ್ಲಿನ ಇಂದೂ ಸಾಂಪ್ರದಾಯಗಳ ಪ್ರಕಾರ ಶಿರೋಮುಂಡನ ಮಾಡಿಸಿಕೊಂಡು, ಕಾಷಾಯ ವಸ್ತ್ರಗಳನ್ನು ಧರಿಸಿ, ಸರ್ವಸಂಗ ಸನ್ಯಾಸಿಯಾಗಿ ಬದಲಾಗಿ ಹೋದ ಗೌತಮನು ಜನ್ಮದಿಂದ ಮುಕ್ತಿಗೊಳಿಸುವ ಜ್ಞಾನಕ್ಕೋಸ್ಕರ ಅನೇಕ ಗುರುಗಳನ್ನೂ, ಮಹರ್ಷಿಗಳನ್ನೂ, ಪಂಡಿತರನ್ನು ಸೇರಿ ಜ್ಞಾನವನ್ನು ತಿಳಿದುಕೊಂಡರೂ, ಅವರು ಹೇಳಿದ ಮಾತುಗಳಿಗೆ ಅಸಂತೃಪ್ತಿ ಹೊಂದಿ, ಕೊನೆಗೆ 'ಗಯ' ಎನ್ನುವ ಪ್ರಾಂತದಲ್ಲಿ ಬೋಧಿ ಮರದ (ಆಲದ ಮರದ) ಕೆಳಗೆ ಕುಳಿತುಕೊಂಡು ಯೋಚಿಸುತ್ತಿರುವಾಗ ಆತನಿಗೆ ಜ್ಞಾನೋದಯವಾಯಿತೆಂದು ತಿಳಿದಿದೆ. ಅಂದಿನಿಂದ ಗೌತಮನು ಗೌತಮ ಬುದ್ಧನಾಗಿ ಕರೆಯಲ್ಪಟ್ಟನು. ಈ ವಿಧವಾಗಿ ಬುದ್ಧನು ಎಂದು ಮೂರನೆ ಹೆಸರು ಬಂದಿದೆ. ಬುದ್ಧನು ಎಂದರೆ ಬುದ್ಧಿ ಪ್ರಕಾಶಿಸಿದವನೆಂದು, ಜ್ಞಾನಿ ಎಂದೂ ಅರ್ಥ ಬರುತ್ತದೆ. ಈ ವಿಧವಾಗಿ ಜ್ಞಾನಿಯಾಗಿ ಬದಲಾದ ಗೌತಮನು ಆತನು ಪ್ರತಿಪಾದಿಸಿದ ಎಂಟು ಸೂತ್ರಗಳನ್ನು ಎಲ್ಲರಿಗೂ ಬೋಧಿಸಿದನು. ಅಷ್ಟಾಂಗ ಮಾರ್ಗಗಳೆನ್ನುವ ಆ ಎಂಟು ಸೂತ್ರಗಳೇ ಬುದ್ಧನ ಬೋಧನೆಯಲ್ಲಿ ಮುಖ್ಯ ಅಂಶಗಳು.

ಆಗಿನ ಆರ್ಯರು ಸೃಷ್ಟಿಸಿದ ಕುಲ ವಿಪಕ್ಷಗಳಿಗೆ ಬುದ್ಧನ ಸೂತ್ರಗಳು ಆತಂಕಗಳಾಗಿ ಕುಳಿತುಕೊಳ್ಳುವುದೂ, ಅದಕ್ಕೆ ಬುದ್ಧನ ಮೇಲೆ ಅಸೂಯೆ ಹೊಂದಿದ ಆರ್ಯರು ಹಿಂದೂ ಆದ ಬುದ್ಧನನ್ನು ಪರ ಮತದವನಾಗಿ ಸೃಷ್ಟಿಸಿ, ಹಿಂದೂ ಸಾಮಾಜದಿಂದ ಬೌದ್ಧಮತವೆನ್ನುವುದನ್ನು ಬೇರೆ ಮಾಡುವುದೂ ಎಲ್ಲರಿಗೂ ತಿಳಿದ ವಿಷಯವೇ, ಈ ದಿನ ಅದೇ ಬೌದ್ಧೀಯವು ಏಷ್ಯಾ ಖಂಡದಲ್ಲೇ

ಅಲ್ಲದೆ ಯೂರೋಪ್ ಖಂಡದೊಳಗೂ ಸಹ ಹರಡಿದೆ. ಈ ದಿನ ಎಷ್ಟೋ ದೊಡ್ಡ ಸಮಾಜವಾಗಿ ತಯಾರಾದ ಬೌದ್ಧ ಸಮಾಜವನ್ನು ಆರ್ಯರು ಅಸೂಯದಿಂದ ಹಿಂದೂ ಸಮಾಜದಿಂದ ಬೇರೆ ಮಾಡಿ ಹೊರಹಾಕಿ ರುವುದೆಯೆಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಇದರ ಪ್ರಕಾರ ಆರ್ಯರು ಹಿಂದೂ ಸಮಾಜಕ್ಕೆ ಬಹಳ ದ್ರೋಹ ಮಾಡಿದ್ದಾರೆ. ಅಷ್ಟೇ ಅಲ್ಲದೆ ಬುದ್ಧನು ಹುಟ್ಟಿದ ನಂತರ ಸುಮಾರು ಐದು ನೂರು ವರ್ಷಗಳ ಕಾಲದಲ್ಲಿ ಭಾರತದೇಶದಲ್ಲಿ ಎಷ್ಟೋ ಮಂದಿ ಆರ್ಯ ಸಾಂಪ್ರದಾಯಗಳನ್ನು ಬಿಟ್ಟು ಬೌದ್ಧ ಸೂತ್ರಗಳನ್ನು ಅನುಸರಿಸುತ್ತಿರುವುದನ್ನು ಸಹಿಸಲಾರದೆ ಭಾರತದೇಶ ದಲ್ಲಿರುವ ಬುದ್ಧ ಸಮಾಜವನ್ನು ಇಲ್ಲದಂತೆ ಮಾಡುವುದಕ್ಕೆ, ಬುದ್ಧನ ಹಾಗೆ ಪೂರ್ತಿಯಾಗಿ ಸನ್ಯಸಿಸಿದವನಾಗಿ, ಬುದ್ಧನ ಹಾಗೆ ಶಿರೋಮುಂಡನ ಮಾಡಿಸಿಕೊಂಡು ಬುದ್ಧನ ಹಾಗೆ ಪೂರ್ತಿಯಾಗಿ ಮನೆ ಬಿಟ್ಟವನಾಗಿ ಇರುವಹಾಗೆ, ದಕ್ಷಿಣ ದೇಶದಲ್ಲಿ ಪೂರ್ತಿ ದ್ರಾವಿಡ ದೇಶವೆಂದೆನಿಸಿಕೊಂಡ ಕೇರಳ (ಮಳಯಾಳ) ಬ್ರಾಹ್ಮಣನನ್ನು ಅತಿ ಚಿಕ್ಕ ವಯಸ್ಸಿನಲ್ಲೇ ಹೊರಗೆ ತಂದು, ಆತನಿಗೆ ಶಂಕರನೆಂದು ಹೆಸರು ಇಟ್ಟಿದ್ದಾರೆ. ಅತನೇ ಆದಿಶಂಕರಾಚಾರ್ಯ ರಾಗಿ ಹೇಳಲಾಗಿದ್ದಾನೆ. ಆದಿಶಂಕರಾಚಾರ್ಯರು ಆ ದಿನ ಬೌದ್ಧಮತದಿಂದ ಹಿಂದೂ ಮತವನ್ನು ಕಾಪಾಡುವುದಕ್ಕೆ ದಿವಿಯಿಂದ ಭುವಿಗೆ ಬಂದ ಸಾಕ್ಷಾತ್ತು ಕೈಲಾಸ ಶಂಕರನೆಂದು ಆರ್ಯರು ಪ್ರಚಾರ ಮಾಡಿದ್ದಾರೆ. ತಮ್ಮ ಪರವಾಗಿ ಬುದ್ಧನಿಗೆ ಸಮಾನರೂಪವಾಗಿ ಕಾಣಿಸುವ ಶಂಕರಾಚಾರ್ಯನನ್ನು ತಯಾರುಮಾಡಿ, ಆದಿನ ಆರ್ಯರ ಮಾತೃಭಾಷೆ ಆದ ಸಂಸ್ಕೃತ ಭಾಷೆಯನ್ನು ಶಂಕರಾಚಾರ್ಯನಿಗೆ ಪೂರ್ತಿಯಾಗಿ ಕಲಿಸಿ, ಇಪ್ಪತ್ತು ವರ್ಷಗಳ ವಯಸ್ಸಿನಲ್ಲಿ ಆತನನ್ನು ಹಿಂದೂ ಸಮಾಜಕ್ಕೆಲ್ಲದಕ್ಕೂ ಗುರುವಾಗಿ ಪ್ರಕಟಿಸಿದ್ದಾರೆ.

ಬುದ್ಧನ ಸೂತ್ರಗಳಿಗೆ ಆಕರ್ಷಿತರಾದವರನ್ನು ಪುನಃ ಹಿಂದೂ ಸಮಾಜದೊಳಗೆ ಬರುವಹಾಗೆ, ಬುದ್ಧನಿಗೆ ಬದ್ಧ ಶತ್ರುವಾಗಿ ಶಂಕರಾ ಚಾರ್ಯನನ್ನು ತಯಾರು ಮಾಡಿ ಕಳುಹಿಸಿದ್ದಾರೆ. ದಕ್ಷಿಣ ಭಾರತದೇಶದಿಂದ

ಉತ್ತರ ಭಾರತದೇಶದವರೆಗು ಅಂದರೆ ಆಸೇತು ಹಿಮಾಲಯಗಳವರೆಗು (ದಕ್ಷಿಣದಲ್ಲಿ ಭಾರತದೇಶ ಕೊನೆಯಲ್ಲಿರುವ ಸಮುದ್ರ ತೀರ ಮರಳಿನ ದಿನ್ನೆಗಳಿಂದ ಹಿಮಾಲಯಗಳಲ್ಲಿನ ಪರ್ವತಗಳ ವರೆಗು) ಶಂಕರಾಚಾರ್ಯರು ಎರಡು ಬಾರಿ ಕಾಲ್ನಡಿಗೆಯಲ್ಲಿ ಪ್ರಯಾಣವನ್ನು ಸಾಗಿಸಿದ್ದಾನೆ. ಹಾಗೆ ಕಾಲ್ನಡಿಗೆಯಲ್ಲಿ ತಿರುಗುತ್ತಾ ಎಲ್ಲಿ ಬುದ್ಧನ ಸೂತ್ರಗಳಿವೆಯೋ ಅಲ್ಲಿ ವಾದೋಪವಾದಗಳಿಗೆ ಇಳಿದು ತನ್ನ ವಾದವೇ ದೊಡ್ಡದೆಂದು ಹೇಳಿ ವಾದಿಸುವುದೇ ಆತನ ಕೆಲಸ ನಂತರ ಶಂಕರನೇ ಗೆದ್ದಿದ್ದಾನೆಂದು ಪ್ರಚಾರ ಮಾಡುವುದು ಆರ್ಯರ ಕೆಲಸ. ಈ ವಿಧವಾಗಿ 20 ವರ್ಷಗಳ ಚಿಕ್ಕ ಹುಡುಗನಾದ ಶಂಕರನಿಗೆ ಆಚಾರ್ಯನೆಂದು ಹೆಸರು ಇಟ್ಟು, ಎರಡು ಬಾರಿ ಭಾರತದೇಶವೆಲ್ಲಾ ಕಾಲ್ನಡಿಗೆಯಿಂದ ತಿರುಗಾಡುವಹಾಗೆ ಮಾಡಿದ್ದಾನೆ. ಎರಡು ಬಾರಿ ತಿರುಗುವುದಕ್ಕೆ ಹನ್ನೆರಡು ವರ್ಷಗಳು ಬೇಕಾಗಿದೆ. ಹನ್ನೆರಡು ವರ್ಷಗಳು ನಡೆಯುವುದಕ್ಕೆ ಶರೀರದಲ್ಲಿನ ಸಾರವೆಲ್ಲವೂ ಮುಗಿದುಹೋಗಿ ಕೊನೆಗೆ ನಡಿಗೆಯಿಂದಲೆ ಆತನು ಮುವ್ವತ್ತೆರಡು (32) ವರ್ಷಗಳಿಗೆ ಸತ್ತುಹೋಗಿದ್ದಾನೆ. ಹದಿನಾರು ವರ್ಷಗಳ ವಯಸ್ಸಿನಲ್ಲೇ ಸನ್ಯಾಸತ್ವ ತೆಗೆದುಕೊಂಡ ಶಂಕರನು ಪೂರ್ತಿಯಾಗಿ ನಾಲ್ಕು ವರ್ಷಗಳು ಸಂಸ್ಕೃತದಲ್ಲಿನ ವೇದಗಳನ್ನು, ಉಪನಿಷತ್ತುಗಳನ್ನು ಕಲಿತುಕೊಂಡಿದ್ದಾನೆ. ನಂತರ ಪ್ರಣಾಳಿಕೆ ಪ್ರಕಾರ ಎಲ್ಲರೊಂದಿಗೆ ವಾದಿಸುತ್ತಾ ಹನ್ನೆರಡು ವರ್ಷಗಳು ತಿರುಗಾಡಿ ಕೊನೆಗೆ ಚಿಕ್ಕವಯಸ್ಸಿನಲ್ಲೇ ಸತ್ತುಹೋಗಿದ್ದಾನೆ.

ಶಂಕರಾಚಾರ್ಯರ ಪರ್ಯಟನೆಯಲ್ಲಿ ಎಷ್ಟೋ ಪಂಡಿತರು, ಜ್ಞಾನಿಗಳು ಸೇರಿ ಶಂಕರಾಚಾರ್ಯರು ಬೋಧಿಸುವ ಅದ್ವೈತ ಸಿದ್ಧಾಂತವನ್ನು ಕುರಿತು ವಾದಿಸಿದ್ದಾರೆ. ಆದರೆ ಎಲ್ಲಾ ಕಡೆ ಶಂಕರಾಚಾರ್ಯನು ವಾದನೆಯಲ್ಲಿ ಗೆಲ್ಲಲಿಲ್ಲ. ಎಷ್ಟೋ ಕಡೆ ತನ್ನ ಮಾತುಗಳ ಚತುರತೆಯಿಂದ ಗೆದ್ದರೂ, ಕೆಲವು ಕಡೆ ತಪ್ಪದೆ ಸೋಲಬೇಕಾಯಿತು. ಹಾಗೆ ಸೋತವುಗಳನ್ನು ಹೊರಗೆ ತಿಳಿಯದಂತೆ ಮಾಡಿ, ಗೆದ್ದಿರುವ ವಾದನೆಗಳನ್ನು ಮಾತ್ರ ಹೊರಗೆ ತಿಳಿಸಿ ಶಂಕರನು ದೊಡ್ಡವನು ಶಂಕರನ ಅದ್ವೈತ ಸಿದ್ಧಾಂತ ದೊಡ್ಡದೆಂದು ಆರ್ಯರು ಶಂಕರಾಚಾರ್ಯನನ್ನು

ಹಿಂದೆ ಹಾಕಿಕೊಂಡು ಬರುತ್ತಿದ್ದರು. ಈ ವಿಧವಾಗಿ ಶಂಕರಾಚಾರ್ಯನನ್ನು ದ್ರಾವಿಡರಿಂದಲೆ ತೆಗೆದು, ಅವರ ಸ್ವಾರ್ಥಕ್ಕಾಗಿ ಆರ್ಯರು ಶಂಕರನನ್ನು ಬೊಂಬೆಯಂತೆ ಬಳಸಿಕೊಂಡಿದ್ದಾರೆ. ಉತ್ತರ ದೇಶ ಬ್ರಾಹ್ಮಣನನ್ನು ಶಂಕರಾ ಚಾರ್ಯರಾಗಿ ಪ್ರಕಟಿಸುವುದಕ್ಕಿಂತ, ದ್ರಾವಿಡಜಾತಿಯಿಂದಲೇ ತೆಗೆದುಕೊಂಡು ಗುರುವಾಗಿ ಮಾಡಿ, ದ್ರಾವಿಡರಿಗು ಬೌದ್ಧರಿಗು ಬುದ್ಧಿ ಹೇಳಿಸಿ ತಮ್ಮ ಕಡೆ ಮರಳಿಸಿಕೊಳ್ಳಬೇಕೆಂದು ಅಂದುಕೊಂಡಿದ್ದಾರೆ. ದ್ರಾವಿಡರಿಂದ ತಮಗೆ ಅನುಕೂಲವಾಗಿ ತಯಾರು ಮಾಡಿದರೆ, ಉಳಿದ ದ್ರಾವಿಡರೆಲ್ಲರೂ ದಾರಿಗೆ ಬರುತ್ತಾರೆನ್ನುವ ಉದ್ದೇಶದಿಂದ, ಶಂಕರಾಚಾರ್ಯರನ್ನು ಆರಿಸಿಕೊಂಡು ದಕ್ಷಿಣ ದೇಶದವನನ್ನೇ ತೆಗೆದುಕೊಂಡಿದ್ದಾರೆ. ಹಾಗೆ ತೆಗೆದುಕೊಳ್ಳುವುದೇ ಅಲ್ಲದೆ ಬುದ್ಧನು ಯಾವ ವಿಧವಾಗಿ ಸನ್ನ್ಯಾಸಿ ಆಗಿದ್ದಾನೋ, ಅದೇ ವಿಧವಾಗಿ ಕಾಣಿಸುವಹಾಗೆ ಸನ್ನ್ಯಾಸಿಯನ್ನು ಮಾಡಿದ್ದಾರೆ. (ಬುದ್ಧನು ಮುಸುಗು ಹಾಕದ ಸನ್ನ್ಯಾಸಿ ಆದಾಗ, ಶಂಕರಾಚಾರ್ಯನು ಮುಸುಗು ಹಾಕಿದ ಸನ್ನ್ಯಾಸಿಯಾಗಿದ್ದಾನೆ.) ಹಿಂದೂ ಸಮಾಜವೆಲ್ಲವೂ ಬೌದ್ಧ ಸಮಾಜದಲ್ಲಿ ಸೇರಿಹೋಗುವ ಸಮಯದಲ್ಲಿ, ಆದಿ ಶಂಕರಾಚಾರ್ಯರು ಬಂದು ಹಿಂದೂ ಸಮಾಜವನ್ನು ರಕ್ಷಿಸಿದ್ದಾನೆಂದು ಬಹಳ ಜನ ಹೇಳುತ್ತಿರುವಾಗ ನಾವು ಕೇಳಿದ್ದೇವೆ. ಚರಿತ್ರೆ ತಿಳಿಯದವರು ಮಾತನಾಡುವ ವಿಧಾನ ಅಷ್ಟೇ ಅಲ್ಲವೇ ಎಂದು ಅಂದುಕೊಂಡೆವು. ಹಿಂದೂ ಸಮಾಜವನ್ನು ವಿದೇಶಗಳಲ್ಲಿ ಇತರ ಖಂಡಗಳಲ್ಲಿ ಹರಡುವಹಾಗೆ ಮಾಡಿದ ಬುದ್ಧನನ್ನು ಪರಮತದವನೆಂದು ಹೇಳುವುದು, ಹಿಂದೂತ್ವವನ್ನು ರಕ್ಷಿಸುವುದೊ ಇಲ್ಲವೆ ಭಕ್ಷಿಸುವುದೊ ನೀವೇ ಅರ್ಥ ಮಾಡಿಕೊಳ್ಳಿ. ಇಂದಿಗೂ ತಮಗೆ ಮೀರಿದ ಬೋಧನೆಯನ್ನು ಯಾರು ಹೇಳಿದರೂ, ವೇದಗಳನ್ನು ಯಜ್ಞಗಳನ್ನು ಯಾರು ಖಂಡಿಸಿದರೆ ಅವರೆಲ್ಲರನ್ನೂ ಪರಮತದವರೆಂದು ಹೆಸರು ಇಟ್ಟು ಮುದ್ರೆ ಹಾಕುತ್ತಿದ್ದರು. ಈ ದಿನವೂ ಸಹ ಆರ್ಯರು ಅದೇ ಕೆಲಸವನ್ನೇ ಮಾಡುತ್ತಲೇ ಇದ್ದಾರೆ. ಆರ್ಯರ ಅದ್ವೈತ ಸಿದ್ಧಾಂತವನ್ನು ಅತಿಕ್ರಮಿಸಿದ ತ್ರೈತ ಸಿದ್ಧಾಂತವನ್ನು ನಾವು ಪ್ರತಿಪಾದಿಸಿದಾಗ, ನಮ್ಮನ್ನು ಸಹ ಪರಮತವೆಂದು ಹೇಳಿ, ಶೂದ್ರನಾದ

ನನ್ನ ಮೇಲೆ ಶೂದ್ರರನ್ನೇ ದಾಳಿ ಮಾಡುವುದಕ್ಕೆ ಕಳಿಸಿದ ಸಂಘಟನೆ, ಎರಡು ವರ್ಷಗಳ ಕೆಳಗೆ ಇಲ್ಲೇ ಅನಂತಪುರ ಜಿಲ್ಲೆಯಲ್ಲಿ ಗುಂತಕಲ್ಲಿನಲ್ಲೇ ನಡೆದಿದೆ. ಇದನ್ನನುಸರಿಸಿ ಆರ್ಯರು ಇಂದಿಗೂ ತಮಗಿಂತ ಇತರರು ಮುಂದಕ್ಕೆ ಬರಬಾರದೆನ್ನುವ ಕೆಟ್ಟ ಉದ್ದೇಶದಿಂದಲೇ ಇದ್ದಾರೆಂದು ತಿಳಿಯುತ್ತಿದೆ.

**ಪ್ರಶ್ನೆ :–** ಬುದ್ಧನ ನಂತರ ಭಾರತದೇಶದಲ್ಲಿ ಆರ್ಯರಿಗೆ ಗಟ್ಟಿಯಾಗಿ ಪೋಟಿ ನಿಲ್ಲುವವರು ಯಾರೂ ಬರಲಿಲ್ಲವೆ?

**ಉತ್ತರ :–** ಬುದ್ಧನು ಬಂದುಹೋದ ಐದು ನೂರು ವರ್ಷಗಳಿಗೆ ದ್ರಾವಿಡ ಬ್ರಾಹ್ಮಣನಾದ (ಕೇರಳ ಬ್ರಾಹ್ಮಣನಾದ) ಶಂಕರಾಚಾರ್ಯನನ್ನು ಒಂದು ಬೊಂಬೆಯಂತೆ ಬಳಸಿಕೊಂಡು, ತಮ್ಮ ಅದ್ವೈತವನ್ನು ಶಂಕರಾಚಾರ್ಯರಿಂದ ಪ್ರಚಾರ ಮಾಡಿಸಿ, ಮೊದಲಿನಿಂದ ಇರುವ ತಮ್ಮ ಅದ್ವೈತ ಸಿದ್ಧಾಂತವನ್ನು, ಆಗಲೇ ಶಂಕರನು ಕಂಡುಹಿಡಿದಹಾಗೆ ತೋರಿಸಿದ್ದಾರೆ. ಆದರೆ ಹಿಂದೂತ್ವದಲ್ಲಿ ಒಂದು ಸಿದ್ಧಾಂತ ಅದ್ವೈತ ಸಿದ್ಧಾಂತವೆಂದು ಅವರು ಹೇಳಿರುವಾಗ, ಇದು ಇಂತಹ ಸಿದ್ಧಾಂತವಾ ಎಂದು ಎಲ್ಲರಿಗೂ ತಿಳಿದಿದೆ. ಶಂಕರಾಚಾರ್ಯನು ಸತ್ತುಹೋದ ನಂತರ ಆರ್ಯರಿಗೆ ಆತಂಕ ಇಲ್ಲದೆ ಎರಡು ನೂರು ವರ್ಷಗಳು ಕಳೆದುಹೋಗಿದೆ. ನಂತರ ಪೂರ್ತಿ ದ್ರಾವಿಡ ರಾಜ್ಯವಾಗಿರುವ ತಮಿಳನಾಡಿನಲ್ಲಿ ಆರ್ಯ ಸಿದ್ಧಾಂತವನ್ನು ವಿರೋಧಿಸುತ್ತಾ ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ರಾಮಾನುಜಾಚಾರ್ಯರು ಹುಟ್ಟಿ ಬಂದಿದ್ದಾನೆ. ರಾಮಾನುಜಾಚಾರ್ಯರವರು ದ್ರಾವಿಡ ಬ್ರಾಹ್ಮಣನೆ ಆದರೂ, ಸ್ವಲ್ಪ ಆರ್ಯರಿಗೆ ವಿರುದ್ಧವಾಗಿದ್ದ ದ್ರಾವಿಡರಿಗೆ ಮಾತ್ರ ಅನುಕೂಲವಾಗಿ ಇರುವವನಲ್ಲ. ಆರ್ಯರು ತಮಗಿಂತ ದೊಡ್ಡವರು ಆಗಬೇಕೆಂದುಕೊಂಡವರನ್ನು ಯಾರನ್ನೂ ಬಿಡುವುದಿಲ್ಲ ಎನ್ನುವಹಾಗೆ, ರಾಮಾನುಜಾಚಾರ್ಯರವರನ್ನು ಆರ್ಯರು ಭಯವಿಟ್ಟು ರಹಸ್ಯ ಜೀವನ ಸಾಗಿಸುವಹಾಗೆ, ಹೊರಗೆ ಬಾರದಂತೆ ಮಾಡಿದ್ದಾರೆ. ಆದರೂ ರಾಮಾನುಜಾ ಚಾರ್ಯರವರು 120 ವರ್ಷಗಳು ಪೂರ್ತಿಯಾಗಿ ಬದುಕಿ, ತನ್ನ ವಿಶಿಷ್ಟಾದ್ವೈತ

ಸಿದ್ಧಾಂತವನ್ನು, ವೈಷ್ಣವ ಸಂಪ್ರದಾಯವಾಗಿ ಬೋಧಿಸಿದನು. ಆರ್ಯರದು ಶೈವ ಸಂಪ್ರದಾಯವಾದಾಗ, ರಾಮಾನುಜಾಚಾರ್ಯರವರದು ವೈಷ್ಣವ ಸಂಪ್ರದಾಯ. ರಾಮಾನುಜಾಚಾರ್ಯರಿಂದ ದೇಶದಲ್ಲಿ ಎಷ್ಟೋ ವೈಷ್ಣವರು ತಯಾರಾಗಿ ವಿಶಿಷ್ಟಾದ್ವೈತವನ್ನು ಅನುಸರಿಸಿದರು. ಅದನ್ನು ಸಹಿಸದ ಆರ್ಯರು ಅದ್ವೈತರೆನ್ನುವ ಹೆಸರಿಂದ ವಿಶಿಷ್ಟಾದ್ವೈತರ ಮೇಲೆ ಆಗಾಗ ವಾದಿಸುತ್ತಾ, ಸಮಯ ಸಿಕ್ಕಾಗ ದಾಳಿಗಳು ಮಾಡುತ್ತಾ ವೈಷ್ಣವರಾದವರನ್ನು ಅಡಗಿಸಬೇಕೆಂದು ಎಷ್ಟೋ ಪ್ರಯತ್ನ ಮಾಡಿದ್ದಾರೆ. ಆದರೂ ಅವರ ಪ್ರಯತ್ನ ಪೂರ್ತಿ ಆಗಲಿಲ್ಲ. ಇಂದಿಗೂ ವೈಷ್ಣವ ಸಂಪ್ರದಾಯಗಳಿಂದ ಕೂಡಿದ ವಿಶಿಷ್ಟಾದ್ವೈತ ಸಿದ್ಧಾಂತ ದೇಶವೆಲ್ಲಾ ಅಲ್ಲಲ್ಲಿ ಕಾಣಿಸುತ್ತಿದೆ. ರಾಮಾನುಜಾಚಾರ್ಯರು ಬಂದುಹೋದ ಸ್ವಲ್ಪ ಕಾಲಕ್ಕೆ ಮಧ್ವಾಚಾರ್ಯರವರು ಕರ್ನಾಟಕ ರಾಷ್ಟ್ರದಲ್ಲಿ ಹುಟ್ಟಿ, ತನ್ನದೆ ಆದ ದ್ವೈತ ಸಿದ್ಧಾಂತವನ್ನು ಬೋಧಿಸಿದ್ದಾನೆ. ದ್ವೈತ ಸಿದ್ಧಾಂತವೂ ಸಹ ಅದ್ವೈತ ಸಿದ್ಧಾಂತಕ್ಕೆ ಪೂರ್ತಿ ವಿರುದ್ಧವಾಗಿ ಇರುತ್ತದೆ. ಮಧ್ವಾಚಾರ್ಯರನ್ನು ಅನುಸರಿಸಿದವರು ಬಹು ಸ್ವಲ್ಪ ಜನ ಇದ್ದರೂ, ಅವರೂ ಸಹ ಇಂದಿಗೂ ಅಲ್ಲಲ್ಲಿ ಕಾಣಿಸುತ್ತಿದ್ದಾರೆ. ಮಂತ್ರಾಲಯ ರಾಘವೇಂದ್ರಸ್ವಾಮಿ ಅವರು ದ್ವೈತ ಸಿದ್ಧಾಂತಕ್ಕೆ ಸಂಬಂಧಿಸಿದವನೇ. ದ್ವೈತ ಸಿದ್ಧಾಂತ ಬೇರೆಯಾಗಿದ್ದರೂ ಮೇಲಕ್ಕೆ ಮಾತ್ರ ಕಟ್ಟುಬೊಟ್ಟು (ವೇಷಧಾರಣೆ) ರೂಪದಲ್ಲಿ ವಿಶಿಷ್ಟಾದ್ವೈತದವರನ್ನು ಹೋಲಿರುತ್ತದೆ. ವಿಶಿಷ್ಟಾದ್ವೈತರು, ದ್ವೈತರು ಇಬ್ಬರೂ ವೈಷ್ಣವ ನಾಮವನ್ನೇ ಧರಿಸುವುದು ವಿಶೇಷ.

ಈ ದಿನ ಪ್ರಸ್ತುತ ಕಾಲದಲ್ಲಿ ತ್ರೈತ ಸಿದ್ಧಾಂತ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರೆನ್ನುವ ನಮ್ಮಿಂದಲೇ ಪ್ರಾರಂಭವಾಗಿದೆ. ತ್ರೈತ ಸಿದ್ಧಾಂತ ಇಂದೂತ್ವದಲ್ಲಿ ಮುಖ್ಯವಾದ ಸಿದ್ಧಾಂತವಾದರೂ, ಇದು ಉಳಿದ ಅದ್ವೈತ, ದ್ವೈತ ಸಿದ್ಧಾಂತಗಳಿಗೆ ಪೂರ್ತಿ ಭಿನ್ನವಾಗಿರುತ್ತದೆ. ಆದರೆ ತ್ರೈತ ಸಿದ್ಧಾಂತ ಸೃಷ್ಟ್ಯಾದಿಯಲ್ಲಿ ದೇವರಿಂದ ಮೊಟ್ಟಮೊದಲು ಬೋಧಿಸಲ್ಪಟ್ಟ ಮೂರು ಆತ್ಮಗಳ ಜ್ಞಾನ, ಇದನ್ನೇ ಆಕಾಶವಾಣಿ ಹೇಳಿರುವಾಗ, ಸೂರ್ಯನು ಸಹ ಇದನ್ನೇ ಭೂಮಿಮೇಲೆ ಮನುಷ್ಯರಿಗೆ ಹೇಳುವುದು ನಡೆದಿದೆ. ಇಲ್ಲಿಯವರೆಗು ಆರ್ಯರ

ಅದ್ವೈತಕ್ಕೆ ಮೊದಲು ಬುದ್ಧನ ಸೂತ್ರಗಳು ಅಡ್ಡ ಬಂದಾಗ, ಅದನ್ನು ಆರ್ಯರು ಪೂರ್ತಿಯಾಗಿ ಜಯಿಸಿದ್ದಾರೆ. ನಂತರ ಬಂದ ವಿಶಿಷ್ಟಾದ್ವೈತ, ದ್ವೈತಗಳಿಂದ ಸ್ವಲ್ಪ ಘರ್ಷಣೆ ಏರ್ಪಟ್ಟರೂ, ಅವುಗಳನ್ನು ಆರ್ಯರು ಪೂರ್ತಿಯಾಗಿ ತೊಲಗಿಸಲಾರದೆ ಹೋಗಿದ್ದಾರೆ. ಆದರೆ ಈಗ ಬಂದಿರುವುದು ಆದಿಯಲ್ಲಿನ ತ್ರೈತ ಸಿದ್ಧಾಂತ ಜ್ಞಾನ ಆಗಿರುವುದರಿಂದ, ಅಸಲಾದ ದ್ರಾವಿಡರ ಮೂರು ಆತ್ಮಗಳ ಜ್ಞಾನ ಆಗಿರುವುದರಿಂದ, ಪೂರ್ವದಹಾಗೆ ಪ್ರಸ್ತುತ ಕಾಲದಲ್ಲಿ ಬುದ್ಧಿ ಕಡಿಮೆ ಇರುವ ದ್ರಾವಿಡರು ಇಲ್ಲದಿರುವುದರಿಂದ, ಇರುವವರೆಲ್ಲರೂ ತಿಳುವಳಿಕೆ ಇರುವ ದ್ರಾವಿಡರೇ ಇರುವುದರಿಂದ, ಮುಖ್ಯವಾಗಿ ಮೂರು ಆತ್ಮಗಳ ದ್ರಾವಿಡ ಜ್ಞಾನ ಈ ದಿನ ಸಿದ್ಧಾಂತವನ್ನು ಸಂತೃಸಿಕೊಂಡು ತ್ರೈತ ಸಿದ್ಧಾಂತವಾಗಿ ಬಂದಿರುವುದರಿಂದ, ತ್ರೈತ ಸಿದ್ಧಾಂತವನ್ನು ಪ್ರತಿಪಾದಿಸಿರುವುದು, ಮಹರ್ಷಿ ಯಾಗಲಿ, ತಪಸ್ವಿಯಾಗಲಿ, ವೇದಾಂತಿಯಾಗಲಿ ಅಲ್ಲದೆ ಯೋಗಿ ಆದ **ಪ್ರಬೋಧಾನಂದ ಯೋಗೀಶ್ವರರು** ಆಗಿರುವುದರಿಂದ, ಈ ಜ್ಞಾನ ಆರ್ಯರಿಗೆ ಹೆಜ್ಜೆ ಹೆಜ್ಜೆಗೂ ಆತಂಕವಾಗಿರುತ್ತದೆ.

ಕೃತಯುಗ ಅಂತ್ಯದಿಂದ, ತ್ರೇತಾಯುಗ ಪ್ರಾರಂಭದಿಂದ, ಆತಂಕವಿಲ್ಲದ ದೊಡ್ಡಸ್ತಿಕೆಯನ್ನು ನಡೆಸಿದ ಆರ್ಯರು ಈ ದಿನ ತ್ರೈತ ಜ್ಞಾನದ ಮುಂದೆ ತಮ್ಮ ದೊಡ್ಡಸ್ತಿಕೆಯನ್ನು ಮೂಟೆಕಟ್ಟಿ ಪಕ್ಕಕ್ಕೆ ಇಡಬೇಕಾಗಿ ಬರುತ್ತಿದೆ. ಆದ್ದರಿಂದ ಬುದ್ಧನ ಕಾಲದಿಂದ ಪ್ರಾರಂಭವಾಗಿ ಕೊನೆಗೆ ಆರ್ಯರಿಗೆ ಈಗ ಗಟ್ಟಿ ಪೋಟಿ ಏರ್ಪಡುತ್ತಿದೆ. “ಸಾವಿರ ಆನೆಗಳನ್ನು ತಿಂದ ರಾಬಂದುಗಳಾದರೂ ಒಂದು ಗಾಳಿ ಮಳೆಗೆ ಸತ್ತುಹೋಗುವವೆಂದು” ಹಿರಿಯರು ಹೇಳಿದ ವಾಕ್ಯದ ಪ್ರಕಾರ ಎರಡು ಯುಗಗಳ ಕಾಲ ಭಾರತದೇಶದಲ್ಲಿ ದೊಡ್ಡಸ್ತಿಕೆ ಚಲಾಯಿಸಿದ ಆರ್ಯರು ಈ ದಿನ ತ್ರೈತ ಸಿದ್ಧಾಂತದ ಮುಂದೆ ತಲೆಬಗ್ಗಿಸಬೇಕಾದ ಅವಸರ ಬರುತ್ತದೆಂದು ಹೇಳುವುದು ತಪ್ಪುವುದಿಲ್ಲ. ಆರ್ಯರು ಗತದಲ್ಲಿ ಮಾಡಿದ ತಪ್ಪುಗಳಿಗೆ ತಪ್ಪದೆ ಶಿಕ್ಷೆಯನ್ನು ಅನುಭವಿಸಬೇಕಾಗಿ ಬರುತ್ತದೆ.

**ಪ್ರಶ್ನೆ :–** ಭಾರತದೇಶದಲ್ಲಿ ಹುಟ್ಟಿದ ಗೌತಮ ಬುದ್ಧನದು ಇತರ ಮತವಾಗಿ ಹೇಳಿದ ಆರ್ಯರು, ರಾಮಾನುಜಾಚಾರ್ಯರನ್ನು ರಹಸ್ಯ ಜೀವನ ಮಾಡುವಹಾಗೆ ಭಯವಿಟ್ಟ ಆರ್ಯರು, ಈ ಮಧ್ಯೆ ಕಾಲದಲ್ಲಿ ಪದ್ಯ ರೂಪದಲ್ಲಿ ಜ್ಞಾನವನ್ನು ಹೇಳಿದ ವೇಮನನನ್ನು ಸಹ ಕೆಟ್ಟದಾಗಿ ಹೇಳದೆ ಬಿಟ್ಟಿರುತ್ತಾರಾ?

**ಉತ್ತರ :–** ತಮ್ಮನ್ನು ಬಿಟ್ಟು ಯಾರೂ ತಮಗಿಂತ ದೊಡ್ಡದಾಗಿ ಇರಬಾರದೆನ್ನುವ ಸ್ವಭಾವವಿರುವವರು ಆರ್ಯರು. ಆದ್ದರಿಂದ ಕೈಲಾದರೂ ಕೈಲಾಗದಿದ್ದರೂ ತಮ್ಮ ಅಸೂಯೆ ಕೆಲಸಗಳು ಮಾಡುತ್ತಲೇ ಇದ್ದಾರೆ. ನಾವು ಬುದ್ಧಿವಂತರೆನ್ನುವ ಅಹಂಕಾರ ಅವರನ್ನು ಹಾಗೆ ಮಾಡುತ್ತಿದೆ. ಮೊದಲಿನಿಂದ ತಂತ್ರಗಳನ್ನು ಮಾಡಿ, ಕುತಂತ್ರಗಳನ್ನು ಮಾಡಿ, ಯಾರ ಕಣ್ಣನ್ನು ಅವರ ಬೆರಳಿಂದಲೆ ಚುಚ್ಚುವುದು ಆರ್ಯರಿಗೆ ಬೆಣ್ಣೆಯಿಂದ ಇಟ್ಟಿರುವ ವಿದ್ಯೆ ಆಗಿದೆ. ಆದ್ದರಿಂದ ಶೂದ್ರರಾದ ಬ್ರಹ್ಮಯ್ಯನವರನ್ನಾಗಲಿ, ವೇಮನ ಯೋಗಿಯನ್ನಾಗಲಿ ಅವರು ಬಿಟ್ಟಿಲ್ಲ. ಒಂದು ಗ್ರಂಥದಲ್ಲಿನ ಸಾರಾಂಶವನ್ನು ಒಂದು ಪದ್ಯದಲ್ಲಿ ಹೊಂದಿಸಿ ಹೇಳಿದ ಘನತೆ ವೇಮನ ಯೋಗಿಗೆ (ವೇಮಾರೆಡ್ಡಿಗೆ) ಇದೆ. ವೇಮನಯೋಗಿ ಪ್ರತಿ ವಿಷಯವನ್ನು ನೇರವಾಗಿ ಚಿಕ್ಕ ವಾಕ್ಯಗಳಲ್ಲಿಯೇ ಹೇಳಿದ ಮನುಷ್ಯ. ವೇಮನ ಯೋಗಿ ಯಾರು ತಪ್ಪುಮಾಡಿದರೂ ಬಿಡದಂತೆ ಅವರ ಬಂಡಾರವನ್ನು ಇದ್ದದ್ದು ಇದ್ದ ಹಾಗೆ ಹೇಳಿದ ವ್ಯಕ್ತಿ. ತನ್ನ ಪದ್ಯಗಳಲ್ಲಿ ಆರ್ಯರನ್ನು ಯಾವ ಮಾತ್ರ ಬಿಡದೆ, ಪ್ರಜೆಗಳಿಗೆ ಅವರು ಮಾಡಿದ ಮೋಸಗಳನ್ನು ಕೆಲವು ಪದ್ಯಗಳಲ್ಲಿ ಬಿಚ್ಚಿ ಹೇಳಿದ್ದಾನೆ. ವೇಮನ ತಮ್ಮನ್ನು ನೂರಕ್ಕೆ ನೂರುಪಾಲು ವಿಮರ್ಶಿಸಿರುವುದಕ್ಕೆ ಬದುಲು ಆರ್ಯರು ವೇಮನನನ್ನು ಹುಚ್ಚನ ಕೆಳಗೆ ಜಮಕಟ್ಟಿ ಹೇಳಿದ್ದಾರೆ. ವೇಮನಗೆ ಹುಚ್ಚುಹಿಡಿದು ಬಟ್ಟೆ ಬಿಚ್ಚಿಕೊಂಡು ತಿರುಗುತ್ತಾ ಹೇಳಿದ ಮಾತುಗಳು ಹುಚ್ಚು ಮಾತುಗಳು ಅಲ್ಲದೆ ಏನಾಗುತ್ತವೆಂದು, ಆರ್ಯರಾದ ಬ್ರಾಹ್ಮಣರು ಕೆಲವರು ವೇಮನನ್ನು ಕುರಿತು ಅನ್ನುವುದು ಕೇಳಿದ್ದೇನೆ. ಹುಚ್ಚನ ಮಾತುಗಳನ್ನು ಹುಚ್ಚರಲ್ಲದೆ ಒಳ್ಳೆಯವರು ಕೇಳುವುದಿಲ್ಲವೆಂದು, ವೇಮನ ಮಾತನ್ನು ಕೇಳುವವರೆಲ್ಲರನ್ನೂ ಆರ್ಯರು ಹುಚ್ಚರೆಂದು ಹೇಳಿದ ಸಂದರ್ಭಗಳು ಇವೆ. ವೇದಗಳು ತಿಳಿದವರು

ಜ್ಞಾನಿಗಳಾಗುವುದಕ್ಕೆ ಅವಕಾಶವಿದೆಯೆಂದು, ವೇದಗಳು ತಿಳಿಯದವರಿಗೆ ನಿಜಜ್ಞಾನ ತಿಳಿಯದೆಂದು ಹೇಳಿದವರು, ವೇದಗಳು ವೇಶ್ಯರಂತವುಗಳೆಂದು ಹೇಳಿದ ವೇಮನ ಜ್ಞಾನಿ ಹೇಗಾಗುತ್ತಾನೆಂದು ಆರ್ಯರು ಪ್ರಶ್ನಿಸಿದ ಸಂದರ್ಭಗಳು ಸಹ ಇವೆ. ತಮ್ಮ ಶಾಯಶಕ್ತಿಯಾಗಿ ಕೆಲಸ ಮಾಡಿ, ವೇಮನ ಪದ್ಯಗಳನ್ನು ತಾವು ಎಲ್ಲೂ ಹೇಳದಂತೆ ಮುಚ್ಚಿಹಾಕಿದ್ದಾರೆ. ಕೆಲವರೊಂದಿಗೆ ವೇಮನ ಪದ್ಯಗಳಲ್ಲಿ ಜ್ಞಾನವಿಲ್ಲವೆಂದು ಹೇಳಿದ್ದಾರೆ. ಹೀಗೆ ತಮಗೆ ಕೈಲಾದಷ್ಟು ವೇಮನ ಪದ್ಯಗಳನ್ನು ಆರ್ಯರು ಎಲ್ಲೂ ಹೊರಗೆ ಹೇಳುತ್ತಿಲ್ಲ. ಆರ್ಯರು ಎಲ್ಲಿ ಉಪನ್ಯಾಸ ಮಾಡಿದರೂ ಅಲ್ಲಿ ಸಂಸ್ಕೃತ ಶ್ಲೋಕಗಳನ್ನು ಹೇಳುತ್ತಾರಾಗಲಿ, ವೇಮನ ಪದ್ಯವನ್ನು ಮಾತ್ರ ಹೇಳುವುದಿಲ್ಲ. ಉಳಿದ ಬ್ರಾಹ್ಮಣರೆಲ್ಲರಿಗೂ ವೇಮನ ಸಾಹಿತ್ಯವನ್ನು ಯಾರೂ ಓದಬಾರದೆಂದು ಹೇಳುವುದೇ ಅಲ್ಲದೆ, ವೇಮನ ಬ್ರಾಹ್ಮಣ ದ್ವೇಷಿ ಎಂದು ಪ್ರಚಾರ ಮಾಡಿದ್ದಾರೆ. ಅಷ್ಟೇ ಅಲ್ಲದೆ ವೇಮನ ಯೋಗಿ ಎಂದು ಹೆಸರು ಇಟ್ಟುಕೊಂಡು ಪ್ರಜೆಗಳಲ್ಲಿ ನಾಸ್ತಿಕತ್ವವನ್ನು ಪ್ರಜೆಗಳಿಗೆ ಬೋಧಿಸಿದ್ದಾನೆಂದು, ಕಲ್ಲಿನ ಗೊಂಬೆಗಳು ದೇವರುಗಳು ಹೇಗೆ ಆಗುತ್ತವೆಂದು ಹಿಂದೂ ದೇವತೆಗಳನ್ನು ವೇಮನ ದೂಷಿಸಿದ್ದಾನೆಂದು, ವೇಮನನಲ್ಲಿ ದೈವಭಕ್ತಿ ಇಲ್ಲವೆಂದು, ಬಹಳ ಪದ್ಯಗಳಲ್ಲಿ ದೇವತೆಗಳನ್ನು, ಬ್ರಾಹ್ಮಣರನ್ನು ದೂಷಿ ಸಿದ್ದಾನೆಂದೂ ಸಹ ಹೇಳಿದ್ದಾರೆ. ಈ ವಿಧವಾಗಿ ತಮಗೆ ಕೈಲಾದಷ್ಟು ವೇಮನನನ್ನು ಕುರಿತು ಕೆಟ್ಟದಾಗೇಪ್ರಚಾರ ಮಾಡಿದ್ದಾರೆ.

ಇನ್ನು ಪೋತುಲೂರಿ ವೀರಬ್ರಹ್ಮಯ್ಯನವರು ಕಾಲಜ್ಞಾನವೆನ್ನುವ ಹೆಸರಿಂದ ನಡೆಯುವ ಎಷ್ಟೋ ವಿಷಯಗಳನ್ನು ಬರೆದು ಹೆಸರು ಹೊಂದಿದ ವ್ಯಕ್ತಿ. ಆದರೆ ಆಚಾರಿ (ವಿಶ್ವಬ್ರಾಹ್ಮಣ) ಕುಲದಲ್ಲಿ ಹುಟ್ಟಿದವನಾದ್ದರಿಂದ, ಬ್ರಹ್ಮಯ್ಯನವರು ಆರ್ಯ ಬ್ರಾಹ್ಮಣನು ಅಲ್ಲದಿರುವುದರಿಂದ, ಆಚಾರಿ ಕುಲ ಶೂದ್ರರ ಕುಲದಲ್ಲಿ ಇರುವುದರಿಂದ ಬ್ರಹ್ಮಯ್ಯರವರನ್ನು ಸಹ ಹೇಳನವಾಗಿ ಮಾತನಾಡಿ, ಬ್ರಹ್ಮಯ್ಯನವರು ಆಚಾರಿಗಳ ಕುಲದವರಿಗೆ ಮಾತ್ರವೇ ಗುರುವೆಂದೂ, ಉಳಿದ ಯಾರಿಗೂ ಗುರುವು ಅಲ್ಲವೆಂದು, ಅವರ ಕುಲದವರಿಗೇ ಜ್ಞಾನ

ಹೇಳಿದ್ದಾನೆಂದೂ, ಬ್ರಹ್ಮಯ್ಯನವರು ಆಚಾರಿಗಳ ಕುಲಗುರುವಾಗಿ ಇದ್ದಾನೆಂದು ಆರ್ಯರು ಹೇಳಿದ್ದಾರೆ. ಅಷ್ಟೇ ಅಲ್ಲದೆ ಆತ್ಮಜ್ಞಾನವನ್ನು ತತ್ತ್ವಗಳ ರೂಪದಲ್ಲಿ ಬರೆದ ಬ್ರಹ್ಮಯ್ಯರವರನ್ನು, ಪದ್ಯಗಳ ರೂಪದಲ್ಲಿ ಬರೆದ ವೇಮನ ಯೋಗಿಯನ್ನೂ ಅವರ ರಚನೆಗಳಲ್ಲಿ ಬರೆದ ವಿಧಾನವನ್ನು ಅನುಸರಿಸಿ, ಬಳಸಿದ ಭಾಷೆಯನ್ನನುಸರಿಸಿ ಶೂದ್ರರಾದ ಬ್ರಹ್ಮಯ್ಯರವರ ಮೇಲೆ, ವೇಮನ ಮೇಲೆ ಎಷ್ಟು ಅಸೂಯೆ ಇದೆಯೋ ತಿಳಿಯುತ್ತದೆ. ನಿಮಗೆ ಸ್ವತಹವಾಗಿ ಅರ್ಥ ವಾಗುವಹಾಗೆ "ಜ್ಞಾನ ಸೂರ್ಯೋದಯ" ಎನ್ನುವ ಗ್ರಂಥದಲ್ಲಿ ಬರೆದ ಕೆಲವು ವಾಕ್ಯಗಳನ್ನು ಯಥಾತಥವಾಗಿ ಹೊಂದಿಸುತ್ತಿದ್ದೇವೆ ನೋಡಿರಿ. ಹಾಗೇ ನಾವು ಈ ಗ್ರಂಥದಲ್ಲಿ ವೇದಗಳು ಆರ್ಯರ ಕಲ್ಪನೆ ಎಂದೂ, ರಾಮಾಯಣವೂ ಸಹ ಆರ್ಯರಾದವರು ಬರೆಯಿಸಿರುವುದೇ ಎಂದೂ, ಅದು ಅಸತ್ಯಗಳಿಂದ ಕೂಡಿಕೊಂಡಿದೆಯೆಂದು ಹೇಳಿದ್ದೇವೆ ಅಲ್ಲವೆ! ನಾನೇ ಅಲ್ಲ ನನ್ನಂತವರು ನನಗಿಂತ ಮೊದಲು ಸಹ ಹೇಳಿರುತ್ತಾರೆ. ಕಲ್ಪಿತವೆಂದು ನಾವು ಹೇಳಿದ ಮಾತುಗಳಿಗೆ ಬದುಲು, ಅವರ ಗ್ರಂಥದಲ್ಲಿ ಹೇಗೆ ಬರೆದಿದ್ದಾರೋ ಒಂದು ಬಾರಿ ನೀವೇ ಗ್ರಹಿಸಿರಿ.

**"ಸ್ವಯಂಭುಗಳಾದ ವೇದಗಳನ್ನು ಕೆಲವರು ಕಲ್ಪಿತಗಳೆನ್ನುತ್ತಿದ್ದಾರೆ. ಹಾಗೇ ರಾಮಾಯಣವನ್ನು ಸಹ ಕಲ್ಪಿಸಿದ್ದಾರೆಂದು ಎನ್ನುತ್ತಿದ್ದಾರೆ. ಕಲ್ಪಿಸಿದ್ದಾರೆಂದರೆ ಯಾರು ಕಲ್ಪಿಸಿದ್ದಾರೆ? ಕಲ್ಪಿತವಾದವುಗಳನ್ನು ಸಮಕಾಲೀನರು ಒಪ್ಪಿಕೊಳ್ಳುತ್ತಾರಾ? ಭಿನ್ನಾಭಿಪ್ರಾಯಗಳು ಇರುವವರೊಬ್ಬರು ಸೃಷ್ಟಿಸಿರುವುದನ್ನು ಮತ್ತೊಬ್ಬರು ಸಹಿಸುತ್ತಾರಾ? ರಾಮಾಯಣ ಕಲ್ಪಿತವೆಂದರೆ ಇಂದಿಗೂ ಸರ್ವ ಪ್ರಪಂಚದಲ್ಲಿ ಅನುಸರಿಸುವ ರಾಮಜಯಂತಿ (ಶ್ರೀರಾಮನವಮಿ) ಹೇಗೆ ಪ್ರಜೆಗಳಲ್ಲಿ ಪ್ರವೇಶಿಸಿದೆ? ಆಯಾ ಗ್ರಂಥ ಪ್ರತಿಪಾದಿತಗಳಾದ ಮಹಾ ವಿಷಯಗಳು ಕಾಲ ಪರಿಮಾಣದಲ್ಲಿ ಅಜ್ಞಾನಿಗಳಾದ ಈಗಿನವರಿಗೆ ವಿಚಿತ್ರವಾಗಿ ಕಾಣಿಸಬಹುದು. ಅಷ್ಟು ಮಾತ್ರಕ್ಕೆ ಅವು ಕಲ್ಪಿತಗಳಾ? ವಾಲ್ಮೀಕಿ ಇಲ್ಲದ ಸಲ್ಲದ ಕಲ್ಪಿತ ವಿಷಯಗಳೆಲ್ಲವನ್ನೂ ರಾಮಾಯಣ ಗ್ರಂಥವಾಗಿ ಹೊಂದಿಸಿ ಲೋಕವನ್ನು ಮೋಸಮಾಡುತ್ತಿರುವಾಗ, ಅಂದಿನ**

ಸಮಕಾಲೀನರು ಹೇಗೆ ಸುಮ್ಮನಿದ್ದಾರೆ? ಸಮಕಾಲೀನರೆಲ್ಲರೂ ವಾಲ್ಮೀಕಿ ಮಾಡುತ್ತಿರುವುದು ಮೋಸವೆಂದು ತಿಳಿಯಲಾರದಷ್ಟು ಮೂರ್ಖರಾ? ಹಾಗಾದರೆ ಮೂಢ ನಿಕ್ಷಿಪ್ತವಾಗುವ ಅಪವಿತ್ರ ಗ್ರಂಥವೇ ಆದರೆ, ಅದು ಇಂದಿನವರೆಗು ನಮ್ಮ ಮಧ್ಯದಲ್ಲಿ ಹೇಗೆ ನಿಂತಿದೆ? ಒಂದು ವೇಳೆ ಅಂದಿನವರು ರಾಮಾಯಣ ಕಲ್ಪಿತವೆಂದು ವಿಮರ್ಶಿಸಿದ್ದರೆ ರಾಮಾಯಣ ಇಂದಿನವರೆಗು ಬಂದಹಾಗೆ ಅವರ ವಿಮರ್ಶೆಗಳು ಇಂದಿನವರೆಗು ಆ ಗ್ರಂಥದ ಹಿಂದೆ ಏಕೆ ಬರಲಿಲ್ಲ?

ಒಂದೊಂದು ಶಾಸ್ತ್ರ (ವೇದ, ರಾಮಾಯಣ) ಎಷ್ಟು ವಿಸ್ತಾರವಾಗಿ, ಎಷ್ಟು ಪ್ರೌಢವಾಗಿ, ಎಷ್ಟು ಗಂಭೀರವಾಗಿದೆಯೋ ಪರಿಶೀಲಿಸಿ. ಗುರು ಮುಖದಲ್ಲಿ ಕೇಳಿದರೂ ಅರ್ಥ ಮಾಡಿಕೊಳ್ಳಲಾರದೆ ಬಾಧೆಪಡುತ್ತಿದ್ದೇವೆ. ಅಂತಹವುಗಳನ್ನು ಯಾರೋ ಗಾಳಿಗೆ ಹೋಗುವವನು ಕಲ್ಪಿತಗಳೆಂದರೆ ಸರಿಹೋಗುತ್ತದಾ? ಗುರುಕುಲ ವಾಸ ಮಾಡಿ ಶಾಸ್ತ್ರಗಳನ್ನು, ವೇದಗಳನ್ನು ಅಭ್ಯಾಸಿಸಿದವರಿಗೆ ಅವುಗಳ ಯಥಾರ್ಥ ಸ್ವರೂಪವೂ, ಅವುಗಳ ಮಹಿಮೆ ಅರ್ಥವಾಗುತ್ತದೆ. ಹಾಗೆ ಗುರುಕುಲ ವಾಸ ಮಾಡದೆ, ವೇದ, ಪುರಾಣ, ಇತಿಹಾಸ ಗ್ರಂಥಗಳನ್ನು ಸವಿಯದೆ, ಭಾಷಾ ಪರಿಜ್ಞಾನವನ್ನು ಕಲಿಯದೆ, ಆ ಗ್ರಂಥಗಳನ್ನು ಬರೆದ ಮಹರ್ಷಿಗಳ ಶಕ್ತಿ ಎಂತಹುದೋ ತಿಳಿಯದೆ, ಆರ್ಯ ಸಂಪ್ರದಾಯಗಳನ್ನು ಪರಿಶೀಲಿಸದೆ, ಇಂದ್ರಿಯಲೋಲನಾಗಿ ಇಚ್ಛೆ ಬಂದಹಾಗೆ ಮುಗಿಯುತ್ತಾ, ಇಷ್ಟ ಬಂದಹಾಗೆ ನಡೆಸುತ್ತಾ, ಬಾಯಿಗೆ ಬಂದಹಾಗೆ ಮಾತನಾಡುತ್ತಾ, ಬೊಜ್ಜು, ಸೊಂಡಿಲನ್ನು ನೋಡಿ ಬ್ರಹ್ಮದೇವರೆಂದು ಅಂದುಕೊಂಡಿದ್ದೇನೆ ಅನ್ನುವಹಾಗೆ, ವೇದ ಉಪನಿಷತ್ ಶಾಸ್ತ್ರಗಳನ್ನು ನೋಡಿ ಕಲ್ಪಿತಗಳೆಂದೂ, ಅಸತ್ಯಗಳೆಂದೂ ವದರಿದರೆ ಲಾಭವೇನು? ಯಾರು ಏನೆಂದರೂ ಸಾಮಾನ್ಯ ಮಾನವನ ಯುಕ್ತಿ ವಾದ ವೇದಗಳನ್ನು ಅಸತ್ಯವೆಂದು ಹೇಳಿದರೂ, ಸಿಂಹದ ಮುಂದೆ ನರಿ ಮೌನ ವಹಿಸಿದ ಹಾಗೆ, ವೇದಾಂತಶಾಸ್ತ್ರದ ಮುಂದೆ ವಿಮರ್ಶಕರು ಮೌನ ವಹಿಸುವುದು ತಪ್ಪುವುದಿಲ್ಲ. ಎಂದು ಒಬ್ಬ ಸುಭಾಷಿತಕಾರನು ಸಮಸ್ತ ಶಾಸ್ತ್ರಸಾರವಾದ ವೇದಗಳನ್ನು ಪ್ರಶಂಸಿಸಿದನು. ಆದ್ದರಿಂದ ವೇದಾಂತಶಾಸ್ತ್ರಗಳು (ವೇದಗಳು) ಸರ್ವದಾ ಸತ್ಯಗಳು.

(ವೈದಿಕ ವೇಷಧಾರಣೆ ಅನ್ನುವ ಹೆಸರಿನಿಂದ ಬ್ರಾಹ್ಮಣರಾದವರು ಇದೇ ವಸ್ತ್ರಧಾರಣೆ, ಇದೇ ವೇಷಧಾರಣೆ ಇರಬೇಕೆನ್ನುವ ನಿಯಮವನ್ನು ಪಾಲಿಸುತ್ತಿದ್ದಾರೆ. ಹಾಗೆ ವೇಷಧಾರಣೆ ವಸ್ತ್ರಧಾರಣೆ ಬ್ರಾಹ್ಮಣರಿಗೆ ಬೇರೆಯಾಗಿರುವುದನ್ನು ನೋಡಿ, ಉಳಿದ ಪ್ರಜೆಗಳೆಲ್ಲರಲ್ಲಿ ಬ್ರಾಹ್ಮಣರು ಪವಿತ್ರರಾಗಿ ಕಾಣಿಸುತ್ತಿರುವಾಗ ಆ ವೇಷಧಾರಣೆ ಇಲ್ಲದ ಉಳಿದ ಪ್ರಜೆಗಳೆಲ್ಲರೂ ಅಪವಿತ್ರರಾಗಿ ಕಾಣಿಸುತ್ತಿದ್ದಾರೆ. ಆ ವಿಧ ವೇಷಧಾರಣೆ ಉಳಿದವರೆಲ್ಲರೂ ನೀಚರು, ಶೂದ್ರರು, ಮುಟ್ಟಬಾರದವರು ಎಂದು ಸೂಚಿಸುವಂತಿದೆ. ಆದ್ದರಿಂದ ವೈದಿಕ ವೇಷಧಾರಣೆ ಅನ್ನುವುದು ಜೀವನೋಪಾಧಿಗೋಸ್ಕರವಾಗಲೀ, ಭಕ್ತಿ ಅಲ್ಲ. ಅದರಲ್ಲಿ ಇತರರನ್ನು ಹೀಯಾಳಿಸುವುದೇ ಹೆಚ್ಚಾಗಿ ಕಾಣಿಸುತ್ತಿದೆಯೆಂದು, ಭಕ್ತಿ ಶ್ರದ್ಧೆಗಳು ಮನಸ್ಸಿನಲ್ಲಿ ಇರಬೇಕಾಗಲೀ, ಶರೀರದ ಮೇಲೆ ವಸ್ತ್ರಧಾರಣೆಯಿಂದ ಭಕ್ತಿ ಶ್ರದ್ಧೆಗಳು ಬರುವುದಿಲ್ಲ ಅನ್ನುವ ನಮ್ಮಂತಹವರಿಗೆ ಬದುಲು ಅವರು ಗ್ರಂಥದಲ್ಲಿ ಹೀಗೆ ಬರೆದಿದ್ದಾರೆ ನೋಡಿರಿ.)

**ವೈದಿಕ ವೇಷಧಾರಣೆ ಜೀವನೋಪಾಯ ಹೇಗಾಗುತ್ತದೆ? ತಮಗೆ ಇಲ್ಲಿಯವರೆಗು ಇರುವ ಜೀವನಗಳನ್ನು ತೃಣಪ್ರಾಯವಾಗಿ ವಿಸರ್ಜಿಸಿ, ಇಂದ್ರಿಯಗಳ ಸಹಜ ಪ್ರವೃತ್ತಿಯನ್ನು ಕಷ್ಟದ ಮೇಲೆ ನಿಲ್ಲಿಸಿ, ಯಮ ನಿಯಮಾದಿಗಳನ್ನು ಆಚರಿಸಿ, ಭಗವಂತನ ಆರಾಧನಾ ತತ್ಪರರಾಗಿ, ಲೋಕವನ್ನು ಬಿಟ್ಟು ತಮ್ಮ ಮಾರ್ಗವನ್ನು ಅನುಸರಿಸಲು ಬಂದವರಿಗೆ ವೇದಗಳು ಬೋಧಿಸುವ ವೈದಿಕರು ವಂಚಕರಾ? ವೇಷಧಾರಿಗಳಾ? ಇತರರನ್ನು ಹೀಯಾಳಿಸುವವರಾ? ಎಂತಹ ಅನ್ಯಾಯವಾದ ಮಾತು?**

**ವೈದಿಕ ಜ್ಞಾನ ಶೂನ್ಯರಾದವರು, ಈ ಲೋಕವೇ ಸತ್ಯವೆಂದುಕೊಂಡು, ಅದರಲ್ಲೇ ಲಗ್ನರಾದವರ ದೃಷ್ಟಿಯಲ್ಲಿ ಲೋಕವನ್ನು ತಿಳಿದು ವೇದ ಶಾಸ್ತ್ರಗಳ ದೃಷ್ಟಿಯಿಂದ ದೂರವಾಗಿರುವ ಪರಲೋಕಗಳನ್ನು ಸಹ ದರ್ಶಿಸುವ ಕೂಪಸ್ಥಮಂಡೂಕ ಹೇಗಾಗುತ್ತಾರೆ? (ಬಾವಿಯಲ್ಲಿನ ಕಪ್ಪೆಗಳು ಹೇಗಾಗುತ್ತಾರೆ)**

**ಪುತ್ರಕಾಮೇಷ್ಠಿ ಯಜ್ಞ ಮೊದಲಾದ ಕಾರ್ಯಗಳಿಂದಲೇ ಅವುಗಳ ಫಲಿತಗಳು ಪ್ರತ್ಯಕ್ಷವಾಗಿ ಸಿಕ್ಕಿದಾಗಲೂ, ವೈದಿಕ ಕರ್ಮಗಳು, ಯಜ್ಞಗಳು ಸತ್ಯ ಅಲ್ಲವೆನ್ನುತ್ತೀರಾ? ಅವು ಜೀವನೋಪಾಧಿಯೆಂದು ಅನ್ನುತ್ತೀರಾ? ಆರ್ಯ ಸಾಂಪ್ರದಾಯಗಳನ್ನು ಅಸತ್ಯಗಳೆಂದು ಅನ್ನುತ್ತೀರಾ?**

(ಇಲ್ಲಿ ವೇಮನನನ್ನೂ, ವೀರಬ್ರಹ್ಮಯ್ಯನವರನ್ನೂ ಸೇರಿಸಿ ಆರ್ಯ ಬ್ರಾಹ್ಮಣರು ಏನೆಂದು ಹೇಳುತ್ತಿದ್ದಾರೋ ನೋಡಿರಿ.)

**“ಐಹಿಕ ವಶ್ಯತತ್ತ್ವವನ್ನು ತಿಳಿದು ನಿತ್ಯ ಸುಖಾಭಿಲಾಷಿಗಳಾಗುವ ಸರಿಯಾದ ಮಾರ್ಗ ಸಿಗದೆ, ಸದ್‌ಗುರುವು ಲಭಿಸದೆ, ಸತ್ಸಾಂಗತ್ಯವಿಲ್ಲದೆ, ಶಾಸ್ತ್ರ ಪರಿಚಯ ಯಾವಮಾತ್ರ ಇಲ್ಲದೆ, ವೇದಗಳ ಜ್ಞಾನ ತಿಳಿಯದೆ, ಕುಮತ ಪ್ರತಿಷ್ಠರಾಗಿ ಪರದಾಡುತ್ತಾ, ಅಚಲ ಸಾಂಪ್ರದಾಯವೆಂದು ಇಲ್ಲದ್ದನ್ನು ಹೇಳುತ್ತಾ, ಕೆಲವರು ಪದ್ಯಗಳನ್ನು, ಕೆಲವರು ಹಾಡುಗಳನ್ನು (ತತ್ತ್ವಗಳನ್ನು) ಹಾಡುತ್ತಾ ಗುರುಗಳಾಗಿ ಚಲಾವಣೆ ಆಗಬೇಕೆಂದು ಪರದಾಡುವವರು ಕೆಲವರು ಇದ್ದಾರೆ. ಅಂತಹವರು ಪಾಂಡಿತ್ಯವಿಲ್ಲದ ಜನರ ಮಧ್ಯದಲ್ಲಿ ಚಲಾವಣೆ ಆಗುತ್ತಾ, ನಾಸು ಕವಿತ್ವವನ್ನು ಹೇಳುತ್ತಿರುವರು. ಅದರಲ್ಲಿ ತತ್ತ್ವಜ್ಞರೆಂದು ಕೆಲವರು ಹೀಗೆ ಹಾಡು ಹೇಳುತ್ತಿದ್ದಾರೆ.**

1) **ಚೂಡಚಕ್ಕನಿ ಚಿನ್ನದಿ ಕಡಮೇಡ ಗದಿಲೋನುನ್ನದಿ.**
**ಏಡು ರಂಗುಲ ಮಡುಗುಲೋ ಜಲಕ್ರೀಡಲಾಡುಚುನ್ನದಿ.**

1) **ರೆಕ್ಕಮುಕ್ಕು ಲೇನಿ ಪಕ್ಷಿ ರೇಯಿಂಬವಲು ತಪಸ್ಸು ಚೇಸಿ**
**ಒಕ್ಕ ಚೆರುವುಲೋ ಚೇಪಲನ್ನೀ ಒಕ್ಕಟೇ ಮ್ರಿಂಗೆರಾ.**

1) **ಪೋಗಾ ಪೋಗಾ ಗೋಡುಂದಿ**
**ಗೋಡಕು ತಗ್ಗ ಗೂಡುಂದಿ**
**ಗೂಡುಕು ತಗ್ಗ ಪ್ರಮಿದುಂದಿ.**

1) **ಚೆಪ್ಪುಲೋನ ರಾಯಿ ಚೆವಿಲೋನಿ ಜೋರೀಗ**
**ಕಂಟಿಲೋನಿ ನಲುಸು ಕಾಲಿಮುಲ್ಲು**
**ಇಂಟಿಲೋನಿ ಪೋರು ಇಂತಿಂತ ಗಾದಯಾ**
**ವಿಶ್ವದಾಭಿರಾಮ ವಿನುರ ವೇಮಾ!**

1) **ಪನ್ನೆಂಡು ಕೊಮ್ಮಲ ಪಟ್ಟಾಮರ್ರಿ**
**ದಾನಿಪೈ ಪಂಚವನ್ನೆಲ ರಾಮ ಚಿಲುಕ**
**ದಾನಿಮೀದ ಚುಕ್ಕವಲೆ ಪ್ರಕಾಶಿಂಚು ನಕ್ಕ**
**ದಾನಿಲೋನೇ ಭಗವಂತುಡುಂಡು.**

1) **ಗುಂಟೂರು ಕವತಲಾಗುನ್ನ ಚಿಂತಲಕಾಡ**
**ಗುರ್ರಂ ಕಡುಪುನ ಗೊರ್ರೆ ಪುಟ್ಟೇನಯಾ**
**ನಂದಾಮಯಾ ಉರುಡ ನಂದಾಮಯಾ**
**ಆನಂದ ದೇವಿಕಿ ನಂದಾಮಯಾ**

**ಇವು ಇವರ ಉಪನಿಷತ್ ಸೂಕ್ತಿಗಳು, ತತ್ತ್ವ ವಾಚಕಗಳು. ಇವನಿಗೇನೋ ಅಂತರಾರ್ಥವಂತೆ! ಇವರ ಶ್ರಾದ್ಧವಂತೆ!! ಉಭಯ ಭ್ರಷ್ಟರಾಗಿ ಕೆಡುವುದು ಹೊರತು ಇವರಿಗೆ ಬೇರೆ ಫಲವಿಲ್ಲ. ಇದಾ ಇವರ ವೇದಾಂತ? ಇಂತಹ ಹುಚ್ಚು ಮತಗಳನ್ನು ನೋಡೇ ನವೀನರು ಮಹಾಪವಿತ್ರಗಳಾದ ವೈದಿಕ ಮತಗಳನ್ನು ಸಹ ದೂಷಿಸುತ್ತಿದ್ದಾರೆ.**

"ಎಲ್ಲಾ ತಿಳಿದಿದೆ ಎನ್ನುವವನಿಗೆ ಏನೂ ತಿಳಿಯದು, ಏನೂ ತಿಳಿಯದು ಅಂದುಕೊಳ್ಳುವವನಿಗೆ ಎಲ್ಲಾ ತಿಳಿದಿದೆ" ಎನ್ನುವ ಗಾದೆ ಮಾತಿನ ಪ್ರಕಾರ ಮೇಲಿನ ವಿಷಯಗಳನ್ನು ಬರೆದ ಗ್ರಂಥಕರ್ತ ತನ್ನನ್ನು ತಾನು ಎಲ್ಲಾ ತಿಳಿದಿದೆಯೆಂದು ಕೊಳ್ಳುವುದರಿಂದ, ಏನೂ ತಿಳಿಯದವನಾಗಿದ್ದಾನೆಂದು ಹೇಳಬಹುದು. ಮೇಲಿನ ಉದಾಹರಣೆಗೆ ಗ್ರಂಥಕರ್ತ ಬರೆದ ತತ್ತ್ವಗಳ ವಾಕ್ಯಗಳು, ಪದ್ಯಗಳ ವಾಕ್ಯಗಳು ಎಷ್ಟೋ ದೊಡ್ಡ ಅರ್ಥದಿಂದ ಕೂಡಿಕೊಂಡಿವೆಯೆಂದು

ತಿಳಿಯುತ್ತಿದೆ. ಆದರೂ ಗ್ರಂಥಕರ್ತನಿಗೆ ವೇದಗಳ, ಉಪನಿಷತ್ತುಗಳ ಸ್ಥೂಲ ಜ್ಞಾನ ತಿಳಿದಿರುವುದರಿಂದ, ಶರೀರದಲ್ಲಿನ ಆತ್ಮಗಳ ವಿಷಯ ತಿಳಿಯದೆ ಹೋಗುವುದರಿಂದ, ನಾಲಿಗೆ ಇಲ್ಲದವನಿಗೆ ರುಚಿಯೆ ತಿಳಿಯದಂತೆ, ತತ್ತ್ವಗಳಲ್ಲಿನ ಜ್ಞಾನ, ಪದ್ಯಗಳಲ್ಲಿನ ಜ್ಞಾನ ಯಾವಮಾತ್ರ ತಿಳಿಯದಂತೆ ಹೋಗಿದೆ.

ಇಲ್ಲಿ ವಿವರವಾಗಿ ಜ್ಞಾನದಿಂದ ಕೂಡಿಕೊಂಡ ತತ್ತ್ವಗಳನ್ನು, ಪದ್ಯಗಳನ್ನು ಬರೆದು, ಅವುಗಳಿಗು ಸಹ ಬೆಲೆಕೊಡದೆ ಅವುಗಳನ್ನು ದೂಷಿಸುವುದೂ, ಅವುಗಳನ್ನು ಓದುವವರನ್ನು ಇವರ ಶ್ರಾದ್ಧವಂತೆ ಎಂದು ದೂಷಿಸುವುದು ನೋಡಿದರೆ, ವೇಮನ ಯೋಗಿ ಮೇಲೆ, ಕಾಲಜ್ಞಾನಿ ಆದ ಬ್ರಹ್ಮಯ್ಯನವರ ಮೇಲೆ ಎಷ್ಟು ಅಸೂಯೆ ಇದೆಯೋ ನೋಡದೆ ಹೊರಗೆ ಕಾಣಿಸುತ್ತಾ ಇದೆ. ಆರ್ಯರಾದ ಅವರ ದೃಷ್ಠಿಯಲ್ಲಿ ವೇದಗಳು, ಉಪನಿಷತ್ತುಗಳೇ ಮುಖ್ಯವಾದ ಶಾಸ್ತ್ರಗಳಾಗಿ ಇವೆ. ವೇದಗಳನ್ನು ಶಾಸ್ತ್ರಗಳೆನ್ನುವುದು ಎಮ್ಮೆಯನ್ನು ಎತ್ತು ಅಂದಂತಿದೆ. ವೇದಗಳು ಬೇರೆ, ಶಾಸ್ತ್ರಗಳು ಬೇರೆ. ವೇದಗಳು ನಾಲ್ಕು, ಶಾಸ್ತ್ರಗಳು ಆರು ಎಂದು ತಿಳಿಯದವರು ವೇದ ಶಾಸ್ತ್ರಗಳೆಂದು ಹೇಳುತ್ತಾ ವೇದಗಳನ್ನು ಶಾಸ್ತ್ರಗಳೆನ್ನುವುದು ತಪ್ಪಾಗುತ್ತದೆ. ಇದನ್ನನುಸರಿಸಿ ಮುಂದಿರುವವರನ್ನು ಅಣಕಿಸುವ ಜ್ಞಾನ ಹೊರತು, ಮುಂದಿರುವ ವಿಷಯವನ್ನು, ಮುಂದಿರುವ ವ್ಯಕ್ತಿಯನ್ನು ಅರ್ಥ ಮಾಡಿಕೊಳ್ಳುವ ಶಕ್ತಿ ಆರ್ಯ ಬ್ರಾಹ್ಮಣರಿಗೆ ತಿಳಿಯದೆಂದು ಅರ್ಥವಾಗುತ್ತಿದೆ.

**ಪ್ರಶ್ನೆ :–** ಆರ್ಯ ಬ್ರಾಹ್ಮಣರು ಹೇಳಿದಹಾಗೆ ವೇಮನ ಯೋಗಿ ಪದ್ಯಗಳಲ್ಲಾಗಲಿ, ಪೋತುಲೂರಿ ವೀರಬ್ರಹ್ಮಯ್ಯರವರು ಹೇಳಿದ ತತ್ತ್ವಗಳಲ್ಲಾಗಲಿ ಜ್ಞಾನ ಇಲ್ಲವೇನೋ ಎನ್ನುವ ಅಭಿಪ್ರಾಯ ಇಂದಿನ ಪ್ರಜೆಗಳಲ್ಲಿ ಸಹ ಇದೆ. ಇದಕ್ಕೆ ನೀವೇನನ್ನುತ್ತೀರಾ?

**ಉತ್ತರ :–** ಪೂರ್ವದಲ್ಲಿ ಹಿರಿಯರು ಹೇಳುವಾಗ ಒಂದು ಚಿಕ್ಕ ಕಥೆಯನ್ನು ಕೇಳಿದ್ದೇನೆ ಅದೇನೆಂದರೆ! ಒಂದು ಊರಲ್ಲಿ ಒಂದು ಕೊನೆಯ ಬೀದಿಯಲ್ಲಿ,

ಒಂದು ನಾಯಿ ಇತ್ತು. ಆ ನಾಯಿ ಆ ಬೀದಿಗೆ ಮಾತ್ರ ಪರಿಮಿತಿಯಾಗಿತ್ತು. ಪಕ್ಕದ ಬೀದಿಯೊಳಗೆ ಹೋಗುವುದಕ್ಕೆ ಅವಕಾಶವಿಲ್ಲ. ಏಕೆಂದರೆ ಊರಲ್ಲಿನ ನಾಯಿಗಳು ಇಲ್ಲಿಯವರೆಗು ನನ್ನ ಜಾಗ ಎಂದು, ಇಲ್ಲಿಂದ ನಿನ್ನ ಜಾಗಾಯೆಂದು ಸ್ಥಳ ನಿರ್ಣಯ ಮಾಡಿಕೊಂಡು, ತಮ್ಮ ತಮ್ಮ ಜಾಗಗಳಲ್ಲಿ ತಮ್ಮ ಬಾವುಟವನ್ನು ಇಟ್ಟುಕೊಂಡ ಹಾಗೆ ತಮ್ಮ ಜಾಗಾ ಹದ್ದುಗಳಲ್ಲೂ, ಹದ್ದುಗಳ ಹತ್ತಿರವೂ ಮೂತ್ರವಿಸರ್ಜನೆ ಮಾಡಿ ಗುರುತುಗಳು ಇಟ್ಟುಕೊಂಡಿರುತ್ತವೆ. ಯಾವ ಊರಲ್ಲಿನ ನಾಯಿಗಳಾದರೂ ಈ ಸರಹದ್ದನ್ನು ಇಟ್ಟುಕೊಂಡಿರುತ್ತವೆ. ಯಾವ ನಾಯಿಯಾದರೂ ತನ್ನ ಸರಹದ್ದು ದಾಟಿ ಬಂದರೆ ಪಕ್ಕದ ಜಾಗದಲ್ಲಿರುವ ನಾಯಿಗಳು ಬರಲು ಬಿಡುವುದಿಲ್ಲ. ನಾಯಿಗಳೇ ಅಲ್ಲದೆ ಆ ಊರಲ್ಲಿ ಹತ್ತು ಕೋತಿಗಳಿವೆ. ಆದರೆ ಕೋತಿಗಳಿಗೆ ಹದ್ದು, ಸರಹದ್ದು ಗುರುತುಗಳು ಏನೂ ಇರುವುದಿಲ್ಲ. ಕೋತಿಗಳು ಊರೆಲ್ಲಾ ಮರಗಳ ಮೇಲೆ ತಿರುಗುತ್ತಿದ್ದವು. ನಾಯಿಗಳು ಮಾತ್ರ ತಮ್ಮ ಪ್ರಾಂತಕ್ಕೆ ಪರಿಮಿತಿಯಾಗಿದ್ದು, ಅಲ್ಲಿ ದೊರಕಿದ ಆಹಾರವನ್ನು ಮಾತ್ರ ತಿನ್ನಬೇಕು. ಕೋತಿಗಳಾದರೆ ಊರೆಲ್ಲಾ ಅಲೆದು ಯಾವುದು ಸಿಕ್ಕರೆ ಅದನ್ನು ತಿನ್ನುತ್ತಿದ್ದವು. ಈ ವಿಧವಾಗಿ ಆ ಊರಿನಲ್ಲಿನ ಕೋತಿಗಳು, ನಾಯಿಗಳ ಜೀವನ ವಿಧಾನ ಇತ್ತು.

ಅದೇ ಊರಲ್ಲಿ ಒಬ್ಬ ವ್ಯಾಧಿಗ್ರಸ್ತನು ತನ್ನ ವ್ಯಾಧಿಯನ್ನು ಕುರಿತು, ಒಬ್ಬ ಭೂತ ವೈದ್ಯನ ಹತ್ತಿರಕ್ಕೆ ಹೋಗಿ ತನ್ನ ವ್ಯಾಧಿಯನ್ನು ತೋರಿಸಿ ಕೇಳಿದರೆ, ಆ ವೈದ್ಯನು 20 ದಿನಗಳು ಪ್ರತಿ ದಿನ ಒಂದು ತೆಂಗಿನಕಾಯನ್ನು ಇಳೆ ತೆಗೆದು ಊರಿನ ಕೊನೆಯ ಬೀದಿಯಲ್ಲಿ ಕೊನೆ ದಾರಿಯಲ್ಲಿ ಹಾಕೆಂದು ಹೇಳಿದ್ದಾನಂತೆ. ಅಂದಿನಿಂದ ಆತನು ಪ್ರತಿ ದಿನವೂ ಒಂದು ತೆಂಗಿನಕಾಯನ್ನು ಇಳೆತೆಗೆದುಕೊಂಡು ತಂದು ಊರಿನ ಕೊನೆಯಲ್ಲಿ ಹಾಕುತ್ತಿದ್ದನು. ಅದೇ ಕೊನೇ ಬೀದಿಯಲ್ಲಿರುವ ನಾಯಿ, ಬೀದಿ ಕೊನೆಯಲ್ಲಿರುವ ತೆಂಗಿನಕಾಯನ್ನು ಬಾಯಿಂದ ಕಚ್ಚಿಕೊಂಡು ತಂದು, ಅದನ್ನು ತಿನ್ನಬೇಕೆಂದು ಪ್ರಯತ್ನ ಮಾಡುತ್ತಿತ್ತು. ಆದರೆ ನಾಯಿಗೆ ತೆಂಗಿನಕಾಯಿ ಸರಿಹೋಗುತ್ತದಾ? ಅನ್ನುವ ಗಾದೆ ಪ್ರಕಾರ ನಾಯಿಗೆ

ತೆಂಗಿನಕಾಯನ್ನು ತಿನ್ನುವುದಕ್ಕೆ ಆಗುತ್ತಿರಲಿಲ್ಲ. ಕಾಯಲ್ಲಿ ಕೊಬ್ಬರಿ ಇದ್ದರೂ ಅದರಲ್ಲಿ ಏನೂ ಇಲ್ಲವೆನ್ನುವ ಉದ್ದೇಶದಿಂದ ನಾಯಿ ಕಾಯನ್ನು ಬಿಟ್ಟುಹಾಕುತ್ತಿತ್ತು. ಊರೆಲ್ಲಾ ತಿರುಗುವ ಒಂದು ಕೋತಿ ಆ ವಿಷಯವನ್ನು ಗ್ರಹಿಸಿ ನಾಯಿ ಬಿಟ್ಟ ತೆಂಗಿನಕಾಯನ್ನು ಮರದಮೇಲಕ್ಕೆ ತಂದುಕೊಂಡು, ಕಾಯಿ ಮೇಲಿನ ಚಿಪ್ಪೆಯನ್ನು ಕಿತ್ತುಹಾಕಿ ತೆಂಗಿನಕಾಯನ್ನು ಹೊಡೆದು ಕೊಬ್ಬರಿಯನ್ನು ನಾಯಿ ನೋಡುವಂತೆ ತಿನ್ನುತ್ತಿತ್ತು. ಇದೇ ರೀತಿ ಪ್ರತಿ ದಿನ ನಾಯಿ ಬೀದಿ ಕೊನೆಯಲ್ಲಿರುವ ತೆಂಗಿನಕಾಯನ್ನು ತಂದುಕೊಂಡು ಪ್ರಯತ್ನ ಮಾಡಿ, ಇದರಲ್ಲಿ ಏನೂ ಇಲ್ಲವೆನ್ನುವ ನಿರ್ಣಯಕ್ಕೆ ಬಂದು ಆ ಕಾಯನ್ನು ಬಿಟ್ಟುಹೋಗುತ್ತಿತ್ತು. ನಂತರ ಬಂದಿರುವ ಕೋತಿ ಅದೇ ಕಾಯನ್ನು ತೆಗೆದುಕೊಳ್ಳುವುದೂ ಕೊನೆಗೆ ನಾಯಿ ನೋಡುತ್ತಿದ್ದಹಾಗೆ ತಿನ್ನುವುದೂ ನಡೆಯುತ್ತಿತ್ತು.

ಅದೇ ವಿಧವಾಗಿ ತೆಂಗಿನಕಾಯಿಯಂತಿರುವ ತತ್ತ್ವವನ್ನು ಬಿಚ್ಚಿಕೊಳ್ಳದ ಆರ್ಯರು, ಅದೇ ತತ್ತ್ವವನ್ನು ಬಿಚ್ಚಿ ಹೇಳುತ್ತಾ ಅದರ ಅರ್ಥವನ್ನು ತಿಳಿಯುವವರನ್ನು ನೋಡುತ್ತಿದ್ದರೂ, ಆ ಕೆಲಸ ತಮ್ಮಿಂದ ಅಲ್ಲವೆಂದು ಬಿಟ್ಟುಹಾಕಿ, ತತ್ತ್ವಗಳಲ್ಲಿ ಅರ್ಥವೇ ಇಲ್ಲವೆಂದು ನಾಯಿಗಳು ತೆಂಗಿನಕಾಯನ್ನು ತಿನ್ನುವ ಉಪಾಯ ತಿಳಿಯದೆ ಕಾಯಲ್ಲಿ ಏನೂ ಇಲ್ಲವೆಂದು ಬಿಟ್ಟಹಾಗೇ ತತ್ತ್ವಗಳನ್ನು ಬಿಟ್ಟು ಹಾಕುತ್ತಿದ್ದಾರೆ. ನಾಯಿಗಳಿಗೆ ಕೈಲಾಗದ ಕೆಲಸವನ್ನು ಕೋತಿಗಳು ಮಾಡಿ ತೋರಿಸಿದಹಾಗೆ, ಆರ್ಯರಿಗೆ ತಿಳಿಯದ ತತ್ತ್ವ ವಿವರಗಳನ್ನು ದ್ರಾವಿಡರು ಅರ್ಥವನ್ನು ಬಿಡಿಸಿ ಹೇಳುತ್ತಿದ್ದಾರೆ. ಆದ್ದರಿಂದ ಆರ್ಯರು ಅರ್ಥವಿಲ್ಲವೆಂದು ಬಿಟ್ಟಿರುವ ತತ್ತ್ವಗಳಿಗು, ಪದ್ಯಗಳಿಗು ವಿವರಗಳನ್ನು ದ್ರಾವಿಡ ಬ್ರಾಹ್ಮಣನಾದ **ನಾನು ನನ್ನ ರಚನೆಗಳಲ್ಲಿನ "ತತ್ತ್ವಗಳ ವಿವರಗಳು" ಎನ್ನುವ ಗ್ರಂಥದಲ್ಲಿ ವಿವರವಾಗಿ ಬರೆಯುವುದು ನಡೆದಿದೆ**. ಇಂದಿನ ಪ್ರಜೆಗಳೆಲ್ಲರೂ ಒಂದು ಸಮಯದಲ್ಲಿ ದ್ರಾವಿಡರೇ ಆದರೂ, ಅವರಲ್ಲಿ ಈ ದಿನ ಆರ್ಯರ ಸಾಂಪ್ರದಾಯಗಳು ಸೇರಿರುವುದರಿಂದ, ತತ್ತ್ವಗಳ ವಿವರಗಳು ಪ್ರಜೆಗಳೆಲ್ಲರಿಗೂ ಅರ್ಥವಾಗದೆ

ಹೋಗಿವೆಯೆಂದು ಹೇಳಬಹುದು. ಶರೀರದಲ್ಲಿನ ಆತ್ಮ ವಿವರ ತಿಳಿದ ದ್ರಾವಿಡರು ಮಾತ್ರ ತತ್ತ್ವಗಳನ್ನು ಬರೆಯಬಲ್ಲರು, ಅವುಗಳಿಗೆ ವಿವರವನ್ನು ಹೇಳಬಲ್ಲರು. ಇಂದಿಗಾದರೂ ದ್ರಾವಿಡ ಜ್ಞಾನವಾದ ಆತ್ಮಗಳ ಜ್ಞಾನವನ್ನು ತಿಳಿದರೆ, ಅವನು ದ್ರಾವಿಡನಾಗಿ ಕರೆಯಲ್ಪಡುತ್ತಾನೆ. ಹಾಗಿರುವಾಗ ದ್ರಾವಿಡ ಬ್ರಹ್ಮಜ್ಞಾನವನ್ನು ತಿಳಿದವನಾದ್ದರಿಂದ ಅವನನ್ನು ದ್ರಾವಿಡ ಬ್ರಾಹ್ಮಣನೆಂದು ಅನ್ನಬಹುದು. ದ್ರಾವಿಡ ಬ್ರಾಹ್ಮಣನಾದವನು ಯಾರಾದರೂ ಶರೀರದಲ್ಲಿನ ತತ್ತ್ವವನ್ನು ಕುರಿತು ಹೇಳಿದ ನಿಗೂಢವಾದ ತತ್ತ್ವಗಳ ರಚನೆಗಳನ್ನು ಬಿಚ್ಚಿ ಹೇಳಬಲ್ಲರು. ಅಂತಹ ತತ್ತ್ವಗಳನ್ನಾಗಲಿ, ಪದ್ಯಗಳನ್ನಾಗಲಿ, ವಾಕ್ಯಗಳನ್ನಾಗಲಿ, ದ್ರಾವಿಡ ಜ್ಞಾನ ತಿಳಿದು ದ್ರಾವಿಡರಲ್ಲಿ ಯೋಗೀಶ್ವರನಾದ ನಾವು ಸುಲಭವಾಗಿ ಬಿಚ್ಚಿ ಹೇಳಬಲ್ಲೆವು. ಇಂದಿನವರೆಗೂ ನಾವು ಬರೆದ ಐವತ್ತು ಗ್ರಂಥಗಳ ರಚನೆಗಳಲ್ಲಿ ಪ್ರತ್ಯೇಕಿಸಿ **"ತತ್ತ್ವಗಳ ವಿವರ"** ಎಂದು ಬ್ರಹ್ಮಯ್ಯನವರು ಬರೆದ ತತ್ತ್ವಗಳಿಗೆ ವಿವರವನ್ನು ಹೇಳುವುದು ನಡೆದಿದೆ. ಅಷ್ಟೇ ಅಲ್ಲದೆ ಪ್ರಥಮ ದೈವಗ್ರಂಥವಾದ ಭಗವದ್ಗೀತೆಯಲ್ಲೂ, ದ್ವಿತೀಯ ದೈವಗ್ರಂಥವಾದ ಬೈಬಲ್ ಗ್ರಂಥದಲ್ಲೂ, ಅಂತಿಮ ದೈವಗ್ರಂಥವಾದ ಖುರ್‌ಆನ್ ಗ್ರಂಥದಲ್ಲೂ ಅನೇಕವಾಗಿರುವ ಆತ್ಮಜ್ಞಾನ ವಿಷಯಗಳು, ಮೂರು ಮತದವರಿಗೂ ಅರ್ಥವನ್ನು ಬಿಡಿಸಿಕೊಳ್ಳುವುದಕ್ಕೆ ಕೈಲಾಗದೆ, ಅವುಗಳಲ್ಲಿನ ಮಾಧುರ್ಯವನ್ನು ತಿಳಿಯದಿರುವಾಗ, ಅಂತಹ ವಾಕ್ಯಗಳಿಗೆ ಪೂರ್ತಿ ಅರ್ಥವನ್ನು ಕೊಟ್ಟು ಬರೆದು ತೋರಿಸಿದ ವಿಷಯಗಳು ಎಷ್ಟೋ ಇವೆ. ಯಾರಿಗೂ ಅರ್ಥವಾಗದ ಆತ್ಮಜ್ಞಾನ ವಿಷಯಗಳು, ವಾಕ್ಯಗಳು ಇರುವಹಾಗೆ ತಿಳಿಯದೆ ಎಲ್ಲ ಮತಗಳಲ್ಲಿ ತಪ್ಪಾಗಿ ಅರ್ಥೈಸಿಕೊಂಡು ಬಿಟ್ಟಿರುವವರು ಇದ್ದಾರೆ. ಆದರೂ ಎಲ್ಲ ಗ್ರಂಥಗಳಲ್ಲಿನ ನಿಗೂಢ ಆತ್ಮ ಜ್ಞಾನವನ್ನು ನಾನು ಬಿಟ್ಟಿಲ್ಲ. ದ್ರಾವಿಡ ಜ್ಞಾನ ತಿಳಿದವನಾದ್ದರಿಂದ ಅವುಗಳನ್ನು ಸುಲಭವಾಗಿ ವಿವರಿಸಿ ಹೇಳುತ್ತಿದ್ದೇನೆ. ಜ್ಞಾನ ವಾಕ್ಯದಲ್ಲಿನ ಅರ್ಥ ತಿಳಿದುಕೊಳ್ಳಲಾಗದವರು ಯಾರಾದರೂ, ದ್ರಾವಿಡ (ಮೂರು ಆತ್ಮಗಳ) ಜ್ಞಾನವನ್ನು ತಿಳಿಯುವುದಾದರೆ, ಅಂತಹವರು ಯಾವ ವಾಕ್ಯದಲ್ಲಿರುವ ಜ್ಞಾನವನ್ನಾದರೂ ತಿಳಿಯಬಲ್ಲರು.

**ಪ್ರಶ್ನೆ :–** ಪ್ರಸ್ತುತ ಕಾಲದಲ್ಲಿ ನಾವು ಆರ್ಯರೆಂದು ಹೇಳಿಕೊಳ್ಳುವವರು ಇದ್ದಾರಾ?

**ಉತ್ತರ :–** ಏಕಿಲ್ಲ? ಚಿಕ್ಕ ಚಿಕ್ಕ ಊರುಗಳಲ್ಲಿ ಅಂತಹವರು ಯಾರೋ ಕಾಣಿಸದೆ ಇರಬಹುದು. ಆದರೆ ದೊಡ್ಡ ಪಟ್ಟಣಗಳಲ್ಲೂ, ಜಿಲ್ಲಾಮಟ್ಟದ ನಗರಗಳಲ್ಲೂ, ನಾವು ಆರ್ಯರು, ನಮ್ಮ ಕಾರ್ಯಕಲಾಪಗಳು ಇವುಯೆಂದು ತಿಳಿಸುವವರು ಇದ್ದಾರೆ. ಕ್ರೀ॥ಶ॥ 1931ನೇ ವರ್ಷ ಬೊಂಬಾಯಿನಲ್ಲಿ ಅಂದರೆ ಈಗಿನ ಮುಂಬಾಯಿ ನಗರದಲ್ಲಿ "ಆರ್ಯಸಮಾಜ" ಎನ್ನುವ ಹೆಸರಿನಿಂದ ದಯಾನಂದ ಸರಸ್ವತಿ ಅನ್ನುವಾತನು ಒಂದು ಸಮಾಜವನ್ನು ಸ್ಥಾಪಿಸಿದ್ದಾನೆ. ಆ ಸಮಾಜಕ್ಕೆ ಅನುಬಂಧವಾಗಿ ಎಷ್ಟೋ ನಗರಗಳಲ್ಲಿ ಆರ್ಯಸಮಾಜಗಳು ತಯಾರಾಗಿವೆ. ಹಾಗೆ ತಯಾರಾದ ಸಮಾಜಗಳಲ್ಲಿ ಆರ್ಯ ಸಾಂಪ್ರದಾಯಗಳು ಸ್ವಲ್ಪವೂ ಕಳೆಯದಂತೆ ಪ್ರತಿ ದಿನ ಆಚರಿಸಲಾಗುತ್ತಿವೆ. ಆ ಆರ್ಯ ಸಮಾಜದಲ್ಲಿರುವ ವರೆಲ್ಲರೂ ನಾವು ಆರ್ಯರೆ ಎಂದು ಹೇಳಿಕೊಳ್ಳುತ್ತಿದ್ದಾರೆ. ಆರ್ಯರು ಕೃತಯುಗದ ಅಂತ್ಯದಿಂದ ಇಂದೂದೇಶವಾಗಿದ್ದ ದ್ರಾವಿಡದೇಶವಾದ ನಮ್ಮದೇಶದಲ್ಲಿ ಮಧ್ಯೆ ಏಷ್ಯಾ ಖಂಡದಿಂದ ಬಂದಿರುವ ಏಷೀಯರೇ ಆರ್ಯರೆನ್ನುವ ಹೆಸರಿಂದ ಇಂದೂದೇಶವನ್ನು ಆಕ್ರಮಿಸಿ ಕೊಂಡಿದ್ದಾರೆಂದು ಹೇಳಬಹುದು. ಭವಿಷ್ಯತ್ತನ್ನು ದೊಡ್ಡದಾಗಿ ಮಾಡಿಕೊಳ್ಳಬೇಕೆನ್ನುವ ನಿರ್ಣಯದಿಂದ ತ್ರೇತಾಯುಗದಲ್ಲೇ 'ಆರ್ಯಪರಿವರ್ತನೆ' ಎನ್ನುವ ಹೆಸರಿನಿಂದ ಕೆಲವು ಋಷಿಗಳ ಗುಂಪುಗಳನ್ನು ತಯಾರುಮಾಡಿ, ಅವರಿಗೆ ಮೊದಲೇ ವೇದಗಳಲ್ಲೂ, ಯಜ್ಞಗಳಲ್ಲೂ ತರಭೇತಿ ಕೊಟ್ಟು ಆರ್ಯಪರಿವರ್ತನೆ ಗುಂಪುಗಳನ್ನು ಮುಖ್ಯವಾಗಿ ಎಲ್ಲಾದರೆ ದ್ರಾವಿಡರಿದ್ದಾರೋ ಅಲ್ಲೆಲ್ಲಾ ಕಳುಹಿಸಿ, ಅವರಿಂದ ಆರ್ಯ ಸಾಂಪ್ರದಾಯಗಳನ್ನು ದ್ರಾವಿಡರಿಗೆ ಬೋಧಿಸಿ, ದ್ರಾವಿಡರನ್ನು ಆರ್ಯರಾಗಿ ಬದಲಾಯಿಸಿಕೊಳ್ಳುತ್ತಿದ್ದರು. ಆ ವಿಧವಾಗಿ ಭಾರತದೇಶವೆಲ್ಲಾ ಆರ್ಯಪರಿವರ್ತನೆ ಸಂಘಗಳು ಚುರುಕಾಗಿ ಕೆಲಸಮಾಡಿ, ದ್ರಾವಿಡರಲ್ಲಿ ಆರ್ಯಸಂಪ್ರದಾಯಗಳನ್ನು ಪ್ರಚಾರ ಮಾಡಿ, ಆರ್ಯರಾಗಿ ಮಾಡಿಕೊಂಡಿದ್ದಾರೆ.

ಅಂತಹ ಸಮಯದಲ್ಲಿ ಆರ್ಯಪರಿವರ್ತನ ಸಂಘಗಳಲ್ಲಿನ ಮಹರ್ಷಿಗಳು, ದಕ್ಷಿಣ ದೇಶದಲ್ಲಿ ಪ್ರವೇಶಿಸಿ, ಎಷ್ಟೋ ದ್ರಾವಿಡರಿಗೆ ವೇದಗಳ, ಯಜ್ಞಗಳ ಶಿಕ್ಷಣ ಕೊಡುತ್ತಿರುವಾಗ, ಯಜ್ಞಗಳನ್ನು ಹೇಗೆ ಮಾಡಬೇಕೆನ್ನುವ ತರಭೇತಿ ಕೊಡುತ್ತಿರುವಾಗ ರಾವಣಬ್ರಹ್ಮ ವಿಷಯವನ್ನು ತಿಳಿದುಕೊಂಡು, ಎಷ್ಟೋ ಬಾರಿ ಆರ್ಯ ಪರಿವರ್ತನೆ ಸಂಘಗಳು, ಅವರು ಮಾಡುತ್ತಿರುವ ಕೆಲಸಗಳನ್ನು ಭಂಗ ಮಾಡಿ ಅಲ್ಲಿಂದ ಅವರನ್ನು ಓಡಿಸುವುದು ನಡೆದಿದೆ. ಈ ವಿಧವಾಗಿ ಎಷ್ಟೋ ಬಾರಿ ರಾವಣಬ್ರಹ್ಮ ಓಡಿಸಿದರೂ, ಮರೆಯಿಂದ ಹೋಗಿ ಸ್ವಲ್ಪ ಮಂದಿ ದ್ರಾವಿಡರನ್ನಾದರೂ ಆರ್ಯರಾಗಿ ಬದಲಾಯಿಸಿದ್ದಾರೆ. ಆ ವಿಧವಾಗಿ ಅಂದಿನ ತ್ರೇತಾಯುಗ ಕಾಲದಲ್ಲಿ ನಿರ್ಮಾಣವಾದ ಆರ್ಯಪರಿವರ್ತನೆ ಸಂಘಗಳೇ ಸ್ವಲ್ಪ ಬದಲಾವಣೆಯಾಗಿ ಕಲಿಯುಗದಲ್ಲಿ ಕ್ರೀ॥ಶ॥ 1931ನೇ ವರ್ಷದಿಂದ "ಆರ್ಯ ಸಮಾಜಗಳು" ಎನ್ನುವ ಹೆಸರಿಂದ ತಯಾರಾಗಿ ಬಂದಿವೆಯೆಂದು ಹೇಳಬಹುದು. ಆರ್ಯ ಸಮಾಜಗಳನ್ನು ಸ್ಥಾಪಿಸಿದವನು ದಯಾನಂದ ಸರಸ್ವತಿ. ಆರ್ಯ ಸಮಾಜಗಳು, ಆರ್ಯರು ಇಂದಿಗೂ ಇದ್ದಾರೆ.

**ಪ್ರಶ್ನೆ :–** ಇಂದಿನ ಕಾಲದಲ್ಲಿ ನಾವು ಆರ್ಯರೆಂದು ಕೆಲವರು ಹೇಳಿಕೊಳ್ಳುವಹಾಗೆ, ನಾವು ದ್ರಾವಿಡರು ಎಂದು ಹೇಳಿಕೊಳ್ಳುವವರು ಯಾರಾದರೂ ಎಲ್ಲಾದರೂ ಇದ್ದಾರಾ?

**ಉತ್ತರ :–** ನಾವು ದ್ರಾವಿಡರು ಎಂದು ಹೇಳಿಕೊಳ್ಳುವವರು ದಕ್ಷಿಣದಲ್ಲಿ ತಮಿಳನಾಡು ರಾಷ್ಟ್ರದಲ್ಲಿ ಇದ್ದಾರೆ. ಅಲ್ಲಿ ಮಾತ್ರ ಚೆನ್ನೈ ಪ್ರಾಂತದಲ್ಲಿ ದ್ರಾವಿಡ ಎನ್ನುವ ಹೆಸರಿದ್ದರೂ ಹೆಸರಿಗೆ ಮಾತ್ರ ಇದ್ದಾರಾಗಲೀ, ಆರ್ಯರಷ್ಟು ಪಟಿಷ್ಟ ಆಚರಣೆಗಳು ಮಾಡುತ್ತಿಲ್ಲವೆಂದು ಹೇಳಬಹುದು. ಆರ್ಯರು ಇಂದಿಗೂ ಆರ್ಯ ಸಮಾಜಗಳೆನ್ನುವ ಹೆಸರಿಂದ ಅವರ ಸಾಂಪ್ರದಾಯಗಳನ್ನು ಬೆಳೆಸಿ ಪೋಷಿಸುತ್ತಿದ್ದರೂ, ಆ ವಿಧವಾಗಿ ದ್ರಾವಿಡರು ದ್ರಾವಿಡ ಸಮಾಜಗಳನ್ನು ಸ್ಥಾಪಿಸಿ ಪ್ರಚಾರ ಮಾಡುವ ಸಾಮರ್ಥ್ಯದಲ್ಲಿಲ್ಲ. ಸಾಮರ್ಥ್ಯ ಎಂದರೆ ಆರ್ಥಿಕ

ಸಾಮರ್ಥ್ಯ ಅಲ್ಲ ಆದರೇ, ಆತ್ಮಜ್ಞಾನ ಸಾಮರ್ಥ್ಯ ಇಲ್ಲ ಎಂದು ಹೇಳುತ್ತಿದ್ದೇವೆ. ದ್ರಾವಿಡರು ತಮ್ಮನ್ನು ತಾವು ಮರೆತುಹೋಗಿ, ತಮ್ಮ ಚರಿತ್ರೆಯನ್ನು ಮರೆತುಹೋಗಿ, ಕೊನೆಗೆ ತಮ್ಮ ಜ್ಞಾನವನ್ನೇ ಮರೆತುಹೋಗಿದ್ದಾರೆ. ದ್ರಾವಿಡ ಎನ್ನುವ ಮೂರಕ್ಷರಗಳಿಗೆ ಮೂರು ಆತ್ಮಗಳು ಗುರುತಾಗಿ ಇವೆಯೆಂದೂ, ಪ್ರಪಂಚದಲ್ಲಿ ದೇವರು ಹೇಳಿದ ಜ್ಞಾನವೇ ದ್ರಾವಿಡ ಜ್ಞಾನವೆಂದೂ, ಎಂದಾದರೆ ದ್ರಾವಿಡ ಜ್ಞಾನವನ್ನು ತಿಳಿಯುತ್ತೀವೋ ಆಗ ಯಾರಾದರೂ ದ್ರಾವಿಡನಾಗಿ ಬದಲಾವಣೆಯಾಗಿದ್ದಾನೆಂದು ಹೇಳಬಹುದು. ಸೃಷ್ಠಿಯಲ್ಲಿ ಮೊದಲು ಹೇಳಲಾಗಿರುವ ದೈವಜ್ಞಾನ ಪರಮಾತ್ಮ, ಆತ್ಮ, ಜೀವಾತ್ಮ ಎನ್ನುವ ಮೂರು ಆತ್ಮಗಳ ಜ್ಞಾನ. ಅದೇ ಮೂರು ಅಕ್ಷರಗಳ ದ್ರಾವಿಡ ಜ್ಞಾನ. ಆದ್ದರಿಂದ ಕ್ಷರ, ಅಕ್ಷರ, ಪುರುಷೋತ್ತಮ ಎನ್ನುವ ಆತ್ಮಗಳ ಜ್ಞಾನವನ್ನು ತಿಳಿದವನು ನಾನು ದ್ರಾವಿಡ ಜ್ಞಾನ ತಿಳಿದವನೆಂದು ಧೈರ್ಯದಿಂದ ಹೇಳಿಕೊಳ್ಳಬಹುದು. ನಿನ್ನ ಪ್ರಶ್ನೆಯಲ್ಲಿ ದ್ರಾವಿಡರೆನ್ನುವವರು ಎಲ್ಲಾದರೂ, ಯಾರಾದರೂ ಇದ್ದಾರಾ ಎಂದು ಕೇಳಿದ್ದೀಯ ಅಲ್ಲವೆ! ಆದರೇ ನಿನ್ನ ಪ್ರಶ್ನೆಗೆ ಉತ್ತರವಾಗಿ ಈಗ ಈ ಗ್ರಂಥವನ್ನು ಬರೆಯುತ್ತಿರುವ ನಾನು ಸ್ವಚ್ಛವಾದ ದ್ರಾವಿಡ ಜ್ಞಾನಕ್ಕೆ ಸಂಬಂಧಿಸಿದವನಾದ್ದರಿಂದ, ಈ ದಿನ ನಾನು ದ್ರಾವಿಡನೇಯೆಂದು ಹೇಳುತ್ತಿದ್ದೇನೆ. ನಾನು ಈದಿನವೇ ಅಲ್ಲ, ನಡೆದುಹೋದ ಭೂತಕಾಲದಲ್ಲೂ, ನಡೆಯಬೇಕಾಗಿರುವ ಭವಿಷ್ಯತ್ ಕಾಲದಲ್ಲೂ, ನಡೆಯುತ್ತಿರುವ ವರ್ತಮಾನ ಕಾಲದಲ್ಲೂ ಎಂದಿಗೂ ದ್ರಾವಿಡನೇ ಎಂದು ಹೇಳುತ್ತಿದ್ದೇನೆ. ಹಾಗೆಂದು ಈ ಜನ್ಮದಲ್ಲೇ ಎಂದು ಮಾತ್ರ ಅಲ್ಲ. ನಾನು ಯಾವ ಜನ್ಮದಲ್ಲಿದ್ದರೂ ಅಲ್ಲಿ ದ್ರಾವಿಡ ಜ್ಞಾನದಲ್ಲೇ ಇರುತ್ತೇನೆ ಆದ್ದರಿಂದ ನಾನು ಶಾಶ್ವತವಾಗಿ ದ್ರಾವಿಡನೇ ಎಂದು ನನ್ನನ್ನು ನೆನಪಲ್ಲಿಟ್ಟುಕೊಳ್ಳಿ.

**ಪ್ರಶ್ನೆ :–** ಸೃಷ್ಟ್ಯಾದಿಯಿಂದ ಸ್ವಲ್ಪ ಕಾಲ ಅಂದರೆ ಕೃತಯುಗದಲ್ಲಿ ಜ್ಞಾನವನ್ನನುಸರಿಸಿ ಮನುಷ್ಯರನ್ನು ಎರಡು ಭಾಗಗಳಾಗಿ ವಿಭಜಿಸಿ ನಮ್ಮ ಬ್ರಾಹ್ಮಣರು, ಮಾದಿಗರು ಎಂದು ಅನ್ನುತ್ತಿದ್ದರೆಂದು ನೀವೇ ಹೇಳಿದ್ದೀರ. ಆದಿನ ಜ್ಞಾನವನ್ನನುಸರಿಸಿ ಬಂದಿರುವ ಮಾತುಗಳಿವು. ಆ ಎರಡು ವರ್ಗಗಳು ಕುಲಗಳಾಗಿ ಕುಳಿತುಕೊಂಡಿವೆ

ಅಲ್ಲವೆ! ಬ್ರಾಹ್ಮಣ, ಮಾದಿಗ ಅನ್ನುವ ಎರಡು ಕುಲಗಳೇ ಅಲ್ಲದೆ ಇನ್ನೂ ಎಷ್ಟೋ ವಿಧಗಳ ಕುಲಗಳು ಸಹ ಇವೆ. ಅವುಗಳ ಮಧ್ಯದಲ್ಲಿ ಈ ದಿನ ಜ್ಞಾನವನ್ನು ಅನುಸರಿಸಿ ಯಾವ ಮನುಷ್ಯರನ್ನು ಏನೆಂದು ಕರೆಯಬೇಕು, ಯಾವ ಕುಲವಾಗಿ ನಿರ್ಣಯಿಸಬೇಕು?

**ಉತ್ತರ :–** ಜ್ಞಾನ ಅಂದರೆ ದೈವಜ್ಞಾನ ಅಲ್ವಾ! ದೇವರು ಹೇಗಿದ್ದಾನೆಂದು ತಿಳಿಯುವುದೇ ದೇವರ ಜ್ಞಾನವನ್ನು ತಿಳಿದಂತಾಗುತ್ತದೆ. ತ್ರೇತಾಯುಗದಲ್ಲಿ ಆರ್ಯರು ದೇವರ ಜ್ಞಾನವನ್ನು ತಿಳಿಯದೆ, ಅವರು ವೈದಿಕ ಜ್ಞಾನವನ್ನು, ವೈದಿಕ ಆಚಾರಗಳನ್ನು ಆಧಾರ ಮಾಡಿಕೊಂಡು ಅವುಗಳನ್ನು ಅನುಸರಿಸಿ, ಮನುಷ್ಯರನ್ನು ಕುಲಗಳಂತೆ ಬೇರ್ಪಡಿಸಿದ್ದಾರೆ. ವಾಸ್ತವವಾಗಿ ದೈವಜ್ಞಾನದ ಪ್ರಕಾರ ಮನುಷ್ಯರಲ್ಲಿ ಕುಲಗಳ ಪ್ರಸ್ತಾವನೆಯೇ ಇರಬಾರದು. ಈ ದಿನ ಮನುಷ್ಯ ಪುನಃ ದೈವಜ್ಞಾನವನ್ನು ತಿಳಿಯುವುದಾದರೇ, ಪೂರ್ವವಿರುವ ಪದ್ಧತಿ ಪ್ರಕಾರವೇ ಬ್ರಹ್ಮಜ್ಞಾನ ತಿಳಿದ ಮನುಷ್ಯರನ್ನು ಬ್ರಾಹ್ಮಣರೆಂದೂ, ತಿಳಿಯದ ಪ್ರಜೆಗಳನ್ನು ಮಾದಿಗ (ನಮ್ಮ ಕೆಳಗಿನವ) ರೆಂದು ಹೇಳಬೇಕಾಗಿಬರುತ್ತದೆ. ಜ್ಞಾನ ತಿಳಿಯದವರು ತಿಳಿದವರನ್ನು ಬ್ರಾಹ್ಮಣರೆಂದು ಅಂದರೆ, ಬ್ರಾಹ್ಮಣರಾಗಿರುವವರು ಜ್ಞಾನವನ್ನು ತಿಳಿಯದವರನ್ನು ಮಾದಿಗದವರು (ನಮ್ಮ ಕೆಳಗಿನವರು) ಎಂದು ಎನ್ನುವುದು ನಡೆದಿದೆ. ಉದಾಹರಣೆಗೆ ಒಬ್ಬ ವ್ಯಕ್ತಿ ಸಮಾಜದಲ್ಲಿ ಕುಂಬಾರ ಕೆಲಸ ಮಾಡುತ್ತಾ, ಆಚಾರಿ ಎಂದು ಕರೆಯಲ್ಪಡುವವನು ದೈವಜ್ಞಾನವನ್ನು ತಿಳಿದುಕೊಂಡರೆ, ಆತನು ಕುಂಬಾರ ಕೆಲಸವನ್ನು ಮಾಡಿದರೂ, ಆತನನ್ನು ಬ್ರಾಹ್ಮಣನಾಗಿಯೇ ಕರೆಯಬೇಕಾಗಿ ಬರುತ್ತದೆ. ಜ್ಞಾನದಲ್ಲಿರುವ ದೊಡ್ಡತನ ಅಂಥಾದು. ಜ್ಞಾನ ತಿಳಿಯದವನು ರೆಡ್ಡಿ ಮನೆಯಲ್ಲಿ ಹುಟ್ಟಿದ್ದರೂ, ಅವನನ್ನು ಜ್ಞಾನಿ ಆದವನು ಜ್ಞಾನದ ಪ್ರಕಾರ ಮಾದಿಗನೆಂದೆ ಭಾವಿಸುವನು. ಹೊರಗಡೆ ರೆಡ್ಡಿ ಎಂದರೂ ಒಳಗಿನ ಭಾವದಲ್ಲಿ ಮಾತ್ರ ಕೆಳಗಿನವನಾಗಿಯೇ ಲೆಕ್ಕಹಾಕಲಾಗಿರುತ್ತದೆ. ಪೂರ್ವದಲ್ಲಾಗಲಿ, ಈಗಾಗಲೀ ಜ್ಞಾನದಲ್ಲಿನ ಬೆಲೆಗಳು ಬದಲಾಗುವುದಿಲ್ಲ, ಹಾಗೇ ಧರ್ಮಗಳು ಬದಲಾಗುವುದಿಲ್ಲ. ದೇವರಾಗಲಿ, ದೇವರ ಧರ್ಮಗಳಾಗಲಿ,

ದೇವರ ಜ್ಞಾನವಾಗಲಿ, ದೇಶ, ಕಾಲ, ಪರಿಸ್ಥಿತಿಗಳನ್ನನುಸರಿಸಿ ಬದಲಾಗುವವಲ್ಲ. ದೇಶ ಕಾಲ ಪರಿಸ್ಥಿತಿಗಳನ್ನನುಸರಿಸಿ ಬದಲಾಗುವದು ಇದ್ದರೆ ಅದು ಜ್ಞಾನವೇ ಅಲ್ಲ. ಆದ್ದರಿಂದ ಈದಿನ ನೀನು ಜ್ಞಾನವನ್ನು ತಿಳಿದುಕೊಂಡರೆ, ಜ್ಞಾನವನ್ನು ತಿಳಿದ ನಾನು ನಿನ್ನನ್ನು ದ್ರಾವಿಡ ಬ್ರಾಹ್ಮಣ ಎಂದು ಅನ್ನಬೇಕಾಗಿದ್ದೇ. ನಾನು ಒಬ್ಬನೇ ಅಲ್ಲ, ಜ್ಞಾನವನ್ನು ತಿಳಿದ ಯಾರಾದರೂ ಬ್ರಾಹ್ಮಣ ಎಂದು ಅನ್ನುತ್ತಾರೆ. ಮುಂಬರುವ ಕಾಲದಲ್ಲಿ ಕುಲವ್ಯವಸ್ಥೆ ಕುಸಿದು ಹೋಗುತ್ತದೆ. ಮತ ರೋಗಗಳು ಬದಲಾಗಿಹೋಗುತ್ತವೆ. ಆಗ ದೈವಜ್ಞಾನ ತಿಳಿದವನು ಬ್ರಾಹ್ಮಣನಾಗಿ, ತಿಳಿಯದವನು ಕೆಳಗಿನವನಾಗಿ ಕರೆಯಲ್ಪಡುತ್ತಾನೆ.

**ಪ್ರಶ್ನೆ :–** ಈ ಕಾಲದಲ್ಲಿ ದೈವಜ್ಞಾನವನ್ನು ತಲೆಗೇರಿಸಿಕೊಳ್ಳದ ಮನುಷ್ಯರು ತಯಾರಾಗಿದ್ದಾರೆ. ಅಂತಹ ಮನುಷ್ಯರನ್ನು ಜ್ಞಾನಿಗಳಾಗಿ ಬದಲಾಯಿಸಿ ಕುಲವ್ಯವಸ್ಥೆಯನ್ನು ದೂರ ಮಾಡಬಲ್ಲಿರಾ? ಹಾಗೆ ಮಾಡುವುದಕ್ಕೆ ಅವಕಾಶವಿದೆಯಾ?

**ಉತ್ತರ :–** ಕುಲಗಳಾಗಿ ಇರುವ ಇಂದಿನ ಮನುಷ್ಯರಲ್ಲಿ ಕೆಲವು ಕುಲಗಳಾಗಿ ಇರುವವರು ದೈವಜ್ಞಾನವನ್ನು ಗ್ರಹಿಸಿಕೊಳ್ಳುವ ಸ್ಥಿತಿಯಲ್ಲಿ ಇದ್ದಾರೆ. ಆದ್ದರಿಂದ ಅವರನ್ನು ಸುಲಭವಾಗಿ ಜ್ಞಾನಿಗಳಾಗಿ ಬದಲಾಯಿಸಬಹುದು. ಕೆಲವು ಕುಲದವರಿದ್ದಾರೆ ಅವರನ್ನು ಬದಲಾಯಿಸುವುದಕ್ಕೆ ಪೂರ್ತಿ ಕಷ್ಟವೆಂದೇ ಹೇಳಬಹುದು. ಅಂತಹವರು ಹೊರಗಿನ ಜೀವನ ವ್ಯವಸ್ಥೆಯಲ್ಲಿ ಪೂರ್ತಿಯಾಗಿ ಲಗ್ನವಾಗಿ ತಾವು ಹೇಗೆ ಸಂಪಾದಿಸಿಕೊಳ್ಳಬೇಕು? ಹೇಗೆ ಕೂಡಿಟ್ಟುಕೊಳ್ಳಬೇಕು? ಹೇಗೆ ಧನಿಕರೆಂದನಿಸಿಕೊಳ್ಳಬೇಕು ಎನ್ನುವ ಭವಿಷ್ಯತ್ ಪ್ರಣಾಳಿಕೆಯಲ್ಲಿ ಇರುತ್ತಾರೆ. ಅಂತಹವರಿಗೆ ಏನು ಹೇಳಿದರೂ, ಕೋಣನ ಮೇಲೆ ಮಳೆ ಸುರಿದಂತೆ ಯಾವುದಕ್ಕು ಪ್ರತಿಕ್ರಿಯಿಸುವುದಿಲ್ಲ, ಏನನ್ನು ಮಾತನಾಡುವುದಿಲ್ಲ. ಮೇಲಾಗಿ ಹೇಳುವ ವ್ಯಕ್ತಿಯನ್ನು ತಿಳುವಳಿಕೆ ಇಲ್ಲದವನೆಂದು ಜಾಲಿಯಾಗಿ ನೋಡುತ್ತಾರೆ. ಅಂದರೆ ಅಂತಹವರ ಲೆಕ್ಕದಲ್ಲಿ ಹೇಳುವುದಕ್ಕೆ ಹೋದವನೇ ಕೆಟ್ಟುಹೋಗುವವ

ನೆಂದು ಅಂದುಕೊಳ್ಳುತ್ತಿದ್ದಾರೆ. ಅಂತಹವರನ್ನು ಯಾರೂ ಬದಲಾಯಿಸಲಾರರು, ಆದ್ದರಿಂದ ಅವರ ಕರ್ಮಕ್ಕೆ ಅವರನ್ನು ಬಿಡುವುದು ಒಳ್ಳೆಯದು. ಹಾಗೆ ಕೆಲವು ಕುಲಗಳು ಮಾತ್ರ ಇವೆ. ಸಮಾಜದಲ್ಲಿ ಕೆಲವು ಕುಲಗಳ ಮನುಷ್ಯರು ಸಹಜವಾಗಿ ದೇವರಿಗೆ ಹತ್ತಿರವಾಗಿರುತ್ತಾರೆ. ಅವರು ಸುಲಭವಾಗಿ ಬದಲಾಗಬಲ್ಲರು. ಕೆಲವು ಕುಲದವರು ಇತ್ತ ಪ್ರಪಂಚಕ್ಕೂ, ಅತ್ತ ದೇವರಿಗು ಮಧ್ಯೆ ದೂರದಲ್ಲಿ ಇರುತ್ತಾರೆ. ಅಂತಹವರನ್ನು ಸ್ವಲ್ಪ ಪ್ರಯತ್ನ ಮಾಡಿ ಬದಲಾಯಿಸಬಹುದು. ಬ್ರಾಹ್ಮಣರು ಅಂಟಬಾರದವರೆಂದು ಪಕ್ಕಕ್ಕಿಟ್ಟ ಶೂದ್ರರಲ್ಲಿ ಮೂರು ವಿಧಗಳ ಮನುಷ್ಯರು ಇದ್ದಾರೆ. ಅವರ ಕುಲವನ್ನನುಸರಿಸಿ ಸಾಮಾಜಿಕ ಜೀವನವನ್ನನುಸರಿಸಿ ಮೂರು ವಿಧಗಳಾಗಿ ವಿಭಜಿಸಬಹುದು. ನಾನು ಶೂದ್ರನೇ ಆದರೂ ನನ್ನ ಕುಲದ ತಂಟೆಗೆ ನಾನು ಹೋಗುವುದಿಲ್ಲ. ಅವರು ಅವರ ಸಾಮಾಜಿಕ ಜೀವನಗಳನ್ನು ಅನುಸರಿಸಿ ಪ್ರಪಂಚಕ್ಕೆ ಹತ್ತಿರವಾಗಿ, ದೇವರಿಗೆ ದೂರವಾಗಿ ಇದ್ದಾರೆ. ಅವರನ್ನು ಬದಲಾಯಿಸುವ ಪ್ರಯತ್ನದಲ್ಲಿ ನಾವೇ ಬದಲಾಗುತ್ತೇವೆನ್ನುವ ಅನುಮಾನ ಬರುವುದರಿಂದ ಅವರ ತಂಟೆಗೆ ನಾವು ಹೋಗುವುದಿಲ್ಲ. ಅವರಿಗೆ ದೇವರು ತೀರ್ಪು ಮಾಡಿ ಇಟ್ಟಿದ್ದಾನೆ. ಆ ತೀರ್ಪು ಪ್ರಕಾರ ಇವರಿಗೆ, ಈ ಕುಲದವರಿಗೆ ಜ್ಞಾನ ತಿಳಿಯಬೇಕೆಂದರೆ ಬಹಳ ಕಷ್ಟ ಎಂದು ನಾನು ಹೇಳುತ್ತಿರುತ್ತೇನೆ. ನಾನು ಅದೇ ಕುಲದವನಾದರೂ ನಾನು ನಿಜವಾಗಿ ದ್ರಾವಿಡ ಬ್ರಾಹ್ಮಣನೇ ಎಂದು ಧೈರ್ಯವಾಗಿ ಹೇಳುತ್ತಿದ್ದೇನೆ.

**ಪ್ರಶ್ನೆ :–** ಭಾರತ ದೇಶ ಪೂರ್ವದ ಹಾಗೆ ಇಂದೂ ದೇಶವಾಗಿ ಇರಬೇಕೆಂದರೆ ಏನು ಮಾಡಬೇಕು?

**ಉತ್ತರ :–** ಆರ್ಯ ಸಂಪ್ರದಾಯಗಳು ಹೋಗಿ ದ್ರಾವಿಡ ಸಂಪ್ರದಾಯಗಳು ಮನುಷ್ಯರಲ್ಲಿ ಬಂದರೆ, ತಪ್ಪದೆ ಭಾರತದೇಶ ಪುನಃ ಇಂದೂದೇಶವಾಗಿ ಬದಲಾಗುತ್ತದೆ. ಇಲ್ಲದೆ ಹೋದರೆ ಈಗಿರುವ ಹಿಂದೂ ದೇಶವಾಗಿಯೇ ಇರುತ್ತದೆ.

**ಪ್ರಶ್ನೆ :–** ಕೊನೆಯದಾಗಿ ಒಂದು ಪ್ರಶ್ನೆ ಕೇಳುತ್ತಿದ್ದೇನೆ. ಸೃಷ್ಟ್ಯಾದಿಯಲ್ಲಿ ದೇವರು

ಸ್ಥಾಪಿಸಿದ ಜ್ಞಾನ ಪ್ರಜೆಗಳೊಳಗೆ ಸೇರಿ, ಪೂರ್ತಿ ದ್ರಾವಿಡ ಜ್ಞಾನ ಪ್ರಜೆಗಳೊಳಗೆ ಬಂದು, ಪ್ರಪಂಚ ದೇಶಗಳಲ್ಲಿ ಇಂತಹ ಇಂದೂ ದೇಶ ದೊಡ್ಡದು ಎಂದು ಪ್ರಪಂಚ ಪ್ರಜೆಗಳು ಎನ್ನುವ ಕಾಲ ಬರುತ್ತದೆನ್ನುತ್ತೀರಾ? ಅಥವಾ ಅದು ಒಂದು ಕನಸಿನಂತೆ ಉಳಿದುಹೋಗುತ್ತದಾ? ಇದಕ್ಕೆ ನೀವೇನನ್ನುತ್ತೀರಾ?

**ಉತ್ತರ :–** ನಿಮ್ಮ ಪ್ರಶ್ನೆ ಒಳ್ಳೆಯದೇ ಆಗಲಿ, ನಮಗೆ ನೀವು ಕೇಳಿರುವ ಪ್ರಶ್ನೆಯಲ್ಲಿ ಸ್ವಲ್ಪ ಲೋಪ ಕಾಣಿಸುತ್ತಿದೆ. ನೀವು ಪುನಃ ಇಂದೂಗಳಾಗಿ ಬದಲಾಗುತ್ತೀರಾ? ಎಂದು ಕೇಳಿರುವುದು ಸಂತೋಷವೇ, ಆದರೂ ಪ್ರಪಂಚ ಪ್ರಜೆಗಳ ದೃಷ್ಟಿಯಲ್ಲಿ ಇಂದೂದೇಶ ದೊಡ್ಡದು ಎಂದು ಹೆಸರು ಬರಬೇಕೆಂದು ಅಂದುಕೊಳ್ಳುವುದು ಸ್ವಲ್ಪ ಲೋಪವೇ ಆಗುತ್ತದೆ. ಪ್ರಪಂಚ ಪ್ರಜೆಗಳೆಲ್ಲರೂ ಅಜ್ಞಾನಿಗಳಾಗಿದ್ದರೆ ನಾವು ಮಾತ್ರ ಜ್ಞಾನಿಗಳಾಗಿ ಬದಲಾವಣೆಯಾಗಿ, ಅವರಿಂದ ಇಂದೂದೇಶದವರು ದೊಡ್ಡ ಜ್ಞಾನಿಗಳು ಎಂದು ಅನಿಸಿಕೊಳ್ಳುವುದು ಒಳ್ಳೆಯದಲ್ಲ. ಪ್ರಪಂಚ ಪ್ರಜೆಗಳು ಸಹ ನಮ್ಮೊಂದಿಗೆ ಎಲ್ಲರೂ ಜ್ಞಾನಿಗಳಾಗಿ ಬದಲಾದರೇ ನಮಗೆ ಸಂತೋಷವೇ ಆಗಲೀ, ನಾವು ಮಾತ್ರ ಬದಲಾಗುವುದು ನಮಗೆ ಸಂತೋಷವಲ್ಲ. ಗತ ಚರಿತ್ರೆಯಲ್ಲಿ ಒಂದು ಇಂದೂದೇಶದವರು ಮಾತ್ರ ಜ್ಞಾನಿಗಳಾಗಿ ಇದ್ದು, ಉಳಿದ ದೇಶದವರು ಜ್ಞಾನಿಗಳು ಅಲ್ಲದಿರುವುದರಿಂದ, ನಮ್ಮ ಜ್ಞಾನ ಅವರಿಗೆ ಹರಡಲಿಲ್ಲ ಆದರೆ, ಅವರ ಅಜ್ಞಾನ ನಮಗೆ ಹರಡಿದೆ. ಅದರಿಂದ ಇಂದೂಗಳು ಈದಿನ ಹುಡುಕಿದರೂ ಇಲ್ಲದಂತೆ ಹೋಗಿದ್ದಾರೆ. ಪುನಃ ಅಂತಹ ಪರಿಸ್ಥಿತಿ ಭವಿಷ್ಯತ್ತಿನಲ್ಲಿ ಬಾರದಂತಿರುವುದಕ್ಕೆ, ಪ್ರಪಂಚದಲ್ಲಿನ ಮನುಷ್ಯರೆಲ್ಲರೂ ಜ್ಞಾನಿಗಳಾಗಿ ಬದಲಾಗಬೇಕೆಂದು ನಾವು ಕೋರಿಕೊಳ್ಳುತ್ತಿದ್ದೇವೆ. ಎಲ್ಲರೂ ಜ್ಞಾನಿಗಳಾಗಿ ಬದಲಾದಾಗಲೇ ಭೂಮಿಮೇಲೆ ಎಂತಹ ಅಜ್ಞಾನವೂ ಇಲ್ಲದಂತೆ ಹೋಗುತ್ತದೆ.

**ಪ್ರಶ್ನೆ :–** ನಾನು ಹಾಗೆ ಕೇಳಿರುವುದಕ್ಕೆ ಕ್ಷಮಿಸಿ? ನಾನು ಕೇಳಿದ ಪ್ರಶ್ನೆಯಿಂದ ನಿಮ್ಮಲ್ಲಿನ ಉನ್ನತ ಭಾವ ನಮಗು ಮತ್ತು ಜನರೆಲ್ಲರಿಗೂ ತಿಳಿದುಹೋಯಿತು. ನೀವು ಅಂದುಕೊಂಡಹಾಗೆ ನಾವು ಸಹ ಪ್ರಪಂಚ ಪ್ರಜೆಗಳೆಲ್ಲರೂ

ಜ್ಞಾನಿಗಳಾಗಿಯೇ ಬದಲಾಗಬೇಕೆಂದು ಆಶಿಸುತ್ತಿದ್ದೇವೆ. ಹಾಗೆ ಪ್ರಪಂಚವೆಲ್ಲಾ ಜ್ಞಾನದಿಂದ ಪ್ರಕಾಶಿಸಬೇಕೆಂದರೆ, ಪ್ರಪಂಚ ಪ್ರಜೆಗಳಲ್ಲಿ ಒಂದೇ ಜ್ಞಾನ ಬರಬೇಕೆಂದರೆ ಯಾವ ಪ್ರಯತ್ನ ಮಾಡಬೇಕು? ಯಾರು ಪ್ರಯತ್ನ ಮಾಡಬೇಕು?

**ಉತ್ತರ :–** ಇದು ಅಸಲಾದ ಪ್ರಶ್ನೆ. ಈ ಪ್ರಶ್ನೆಗೆ ಸಂತೋಷವಾಗಿ ಉತ್ತರವನ್ನು ಹೇಳುತ್ತೇನೆ. ಈ ದಿನ ಭಾರತದೇಶದಲ್ಲಿ ಆರ್ಯ, ದ್ರಾವಿಡ ಎನ್ನುವ ಎರಡು ವರ್ಗದವರನ್ನು ಕುರಿತೆ ಅಲ್ಲದೆ ಪ್ರಪಂಚ ದೇಶಗಳಲ್ಲಿ ಎಷ್ಟೋ ಮತಗಳಾಗಿ ಇರುವ ಪ್ರಜೆಗಳು ಸಹ ಒಂದೇ ದಾರಿಗೆ ಬಂದು, ಒಂದೇ ಜ್ಞಾನವನ್ನು ತಿಳಿದುಕೊಂಡು, ಒಂದೇ ದೇವರನ್ನು ಆಶ್ರಯಿಸುವಹಾಗೆ ಮಾಡಬೇಕು. ಆ ವಿಧವಾಗಿ ಮಾಡಿದಾಗ ಒಂದು ಭಾರತದೇಶವೇ ಅಲ್ಲದೆ, ಪ್ರಪಂಚ ದೇಶಗಳೆಲ್ಲವೂ ಬದಲಾಗಿಹೋಗಬಲ್ಲವು.

**ಪ್ರಶ್ನೆ :–** ಪ್ರಪಂಚ ದೇಶಗಳಲ್ಲಿ ಒಂದು ಮತದವರು ಒಬ್ಬ ದೇವರನ್ನು ಪ್ರಾರ್ಥಿಸುವುದು, ಅವರ ಮತಕ್ಕೆ ಸಂಬಂಧಿಸಿದ ಬೋಧನೆಗಳನ್ನು ಕೇಳುವುದೂ, ಓದುವುದೂ ವಿನಃ ಇತರ ದೇವರನ್ನಾಗಲೀ, ಇತರ ಬೋಧನೆಗಳನ್ನಾಗಲೀ ಕೇಳುವುದೂ, ಓದುವುದೂ ಇಲ್ಲ. ನಮ್ಮದು ಹೊರತು ಪ್ರಪಂಚದಲ್ಲಿ ಯಾರದೂ ದೊಡ್ಡದಲ್ಲ. ನಮ್ಮದು ನಮಗೆ ದೊಡ್ಡದೇ ಆಗಿರುವುದರಿಂದ, ನಾವು ಇತರರ ಜ್ಞಾನವನ್ನು ಕೇಳುವುದಿಲ್ಲ, ನೋಡುವುದಿಲ್ಲ ಎನ್ನುವವರು ಸಹ ಇದ್ದಾರೆ. ಅಂತಹ ಮಂಡರಿಗೆ ನೀವು ಹೇಗೆ ಅಸಲಾದ ದೈವಜ್ಞಾನವನ್ನು ಹೇಳುತ್ತೀರಾ. ನೀವು ಹೇಳಿದರೂ ಅವರು ಕೇಳಿವುದಿಲ್ಲ ಅಲ್ಲವೆ!

**ಉತ್ತರ :–** ಎತ್ತು ಎಷ್ಟು ಮಂಡದಾದರೂ ಅದಕ್ಕೆ ಒಂದು ಕಚಗುಳಿ ಇರುತ್ತದೆನ್ನುವ ಸೂತ್ರ ಇದೆ ಅಲ್ಲವೆ! ಆ ಸೂತ್ರವನ್ನು ಅನುಸರಿಸಿ ಮುಂದಕ್ಕೆ ಹೋಗುತ್ತೇನೆ. ಮಂಡು ಎತ್ತು ಹೊಡೆದರೂ, ಬೈದರೂ ಬೇಗ ನಡೆಯದೆ ನಿದಾನವಾಗಿಯೆ ನಡೆಯುತ್ತಿರುತ್ತದೆ. ಬಂಡಿಯನ್ನು ಓಡಿಸುವವನು ಎಷ್ಟು ಅರಚಿದರೂ, ಎಷ್ಟು ಒದೆಗಳು ಹೊಡೆದರೂ ನನಗೆ ಅಲ್ಲ ಎನ್ನುವಹಾಗೆ ಕದಲದೇ, ಮೆದಲದೆ

ತನ್ನ ಇಷ್ಟದ ಪ್ರಕಾರವೇ ಹೋಗುತ್ತಿರುತ್ತದಾಗಲೀ, ಸ್ವಲ್ಪ ಕೂಡಾ ತನ್ನ ನಡಿಗೆಯಲ್ಲಿ ಬದಲಾವಣೆ ತಂದುಕೊಳ್ಳುವುದಿಲ್ಲ. ಅಂತಹ ಮಂಡು ಎತ್ತುಗಳನ್ನು ರೈತರು ನೋಡೇ ಇರುತ್ತಾರೆ. ಅಂತಹ ಮಂಡು ಎತ್ತಿನಲ್ಲಿ ಸಹ ಕದಲಿಕೆ ಬಂದು ಕೆಲಸ ಮಾಡುವಹಾಗೆ ಕೆಲವರು ಮಾಡುತ್ತಿರುವರು. ಅದು ಹೇಗೆಂದರೆ! ಎತ್ತು ಎಷ್ಟು ಮಂಡದಾದರೂ ಅದರ ಶರೀರದ ಮೇಲೆ ಎಲ್ಲೋ ಒಂದು ಕಡೆ ಕಚಗುಳಿ ತಪ್ಪದೆ ಇರುತ್ತದೆ. ಅದು ಎಲ್ಲಿದೆಯೋ ಮೊದಲೇ ಎತ್ತನ್ನು ತಾಕಿ ನೋಡಿಕೊಂಡ ರೈತ, ಇದಕ್ಕೆ ಬೀಗ ಇಲ್ಲಿದೆಯೆಂದು ಅಂದುಕೊಂಡು ಅವಸರ ಬಂದಾಗ ಅಲ್ಲಿ ಕೈಯನ್ನಿಟ್ಟರೆ, ಎತ್ತು ಅದಷ್ಟಕ್ಕದೆ ಚುರುಕಾಗಿ ನಡೆಯುತ್ತದೆ. ರೈತ ಅಲ್ಲಿ ಕೈಯಿ ಹಾಕುವುದರಿಂದ ಮಂಡು ಎತ್ತು ಸಹ ಕದಲುತ್ತದೆ. ಕಚಗುಳಿ ಎನ್ನುವುದು ಪಶುಗಳಿಗೆ ಅಲ್ಲ ಮನುಷ್ಯರಿಗೂ ಸಹ ಇರುತ್ತದೆಂದು ಎಲ್ಲರಿಗೂ ತಿಳಿದಿರುತ್ತದೆ. ಮನುಷ್ಯರಿಗೆ ಭುಜದ ಕೆಳಗೆ ಕಂಕುಳದಲ್ಲಾಗಲೀ, ಕೊರಳಿನ ಕೆಳಗಾಗಲೀ, ಅಂಗಾಲಿನಲ್ಲಾಗಲೀ, ಹೊಟ್ಟೆಯ ಮೇಲಾಗಲೀ, ಬೆನ್ನಿನ ಮೇಲಾಗಲೀ ಅನೇಕ ಕಡೆ ಕಚಗುಳಿ ಇರುತ್ತದೆ. ಪಶುಗಳಿಗಾಗಲೀ, ಬಂಡಿಯನ್ನು ಎಳೆಯುವ ಎತ್ತುಗಳಿಗಾಗಲೀ ಹಾಗೇ ಅನೇಕ ಜಾಗಗಳಲ್ಲಿ ಕಚಗುಳಿ ಇರುತ್ತದೆ. ಚರ್ಮದ ಕೆಳಗೆ ನರಗಳ ಕೂಡಲಿ ಸ್ಪರ್ಶಕ್ಕೆ ದೂರವಾಗಿ ಇರುತ್ತದೆ. ಏನಾದರೂ ಸ್ಪರ್ಶ ತಾಕಿದ ಕೂಡಲೆ ಅಲ್ಲಿ ಹುಟ್ಟಿರುವ ಚುರುಕುತನ ಶರೀರವೆಲ್ಲಾ ಹರಡಿ ಮನುಷ್ಯನಾಗಲೀ, ಪ್ರಾಣಿಯಾಗಲೀ ಹುಷಾರಾಗಿ ಬದಲಾಗುತ್ತದೆ. ಆದ್ದರಿಂದ ನಮ್ಮ ಬೋಧನೆಗಳಿಗೆ ನಾವು ಕದಲುವುದಿಲ್ಲ ಎನ್ನುವ ಮಂಡರಿಗೆ ಕಚಗುಳಿ ಸೂತ್ರವನ್ನು ಅನುಸರಿಸಿ ಅವರಲ್ಲಿ ಬದಲಾವಣೆ ಬರುವಹಾಗೆ ಮಾಡಿ, ಕೊನೆಗೆ ಅವರಿಗೂ ಸಹ ದೈವಜ್ಞಾನವನ್ನು ತಿಳಿಯುವಹಾಗೆ ಮಾಡುತ್ತೇವೆ.

**ಪ್ರಶ್ನೆ :–** ಆರ್ಯ ಸಮಾಜಗಳು ಈ ದಿನ ಚುರುಕಾಗಿ ಕೆಲಸ ಮಾಡುತ್ತಾ ಯಜ್ಞಗಳನ್ನು ಹೇಗೆ ಮಾಡಬೇಕು, ವೇದಗಳನ್ನು ಹೇಗೆ ಓದಬೇಕು ಎಂದು ಕಲಿಸುತ್ತಿದ್ದಾರೆ. ಅಷ್ಟೇ ಅಲ್ಲದೆ ತಿರುಮಲ ತಿರುಪತಿ ದೇವಸ್ಥಾನದವರು ಸ್ವಲ್ಪ ಹಣವನ್ನು ನಿಗಧಿಪಡಿಸಿ, ಆ ಹಣವನ್ನು ಖರ್ಚು ಮಾಡುವುದಕ್ಕೆ ಅನೇಕ

ಆರ್ಯ ಸಂಸ್ಕೃತಿ ಕಾರ್ಯಗಳನ್ನು ಮಾಡುತ್ತಿದ್ದಾರೆ. ವೇದಪಾಠಶಾಲೆಗಳನ್ನು ಇಟ್ಟು ಸಂಸ್ಕೃತವನ್ನು ಕಲಿಸುತ್ತಾ, ವೇದಗಳಲ್ಲಿ ಡಿಗ್ರೀಗಳನ್ನು ಕೊಡುತ್ತಿದ್ದಾರೆ. ಮುಖ್ಯವಾದ ದೇವಾಲಯಗಳಲ್ಲಿ ಆರ್ಯ ಸಂಪ್ರದಾಯವಾದ ವೇದಗಳನ್ನು ಓದದೆ ಪೂಜೆಗಳು ನಡೆಯುತ್ತಿಲ್ಲ. ಹಾಗೇ ಯಜ್ಞಗಳು ಮಾಡದೆ ಅರ್ಪಣೆಗಳು ನಡೆಯುತ್ತಿಲ್ಲ. ಗುಡಿಯಲ್ಲಿನ ದೇವರಿಗೆ ಏನು ಹೇಳಿದರೂ ಸಂಸ್ಕೃತದಲ್ಲೇ ಹೇಳಬೇಕು ಎನ್ನುವ ನಿಯಮವಿದೆ. ಸಂಸ್ಕೃತ ಇಲ್ಲದೆ ಗುಡಿಯಲ್ಲಿ ಪೂಜಾರಿ ಸಹ ಪೂಜೆ ಮಾಡುವುದಿಲ್ಲ. ಅಂತಹ ಪರಿಸ್ಥಿತಿ ದೇವಾಲಯಗಳ ಹತ್ತಿರ ಏರ್ಪಟ್ಟಿದೆ. ಈ ವಿಧವಾಗಿ ಎಲ್ಲಿ ನೋಡಿದರೂ ಅರ್ಯ ಸಂಸ್ಕೃತಿ ಹಬ್ಬಿಕೊಂಡಿರುವಾಗ, ಅದನ್ನು ಅಲ್ಲಗಳೆದು ನೀವು ದ್ರಾವಿಡ ಸಂಸ್ಕೃತಿಯನ್ನು ಹೇಗೆ ಹೊರಗೆ ತರುತ್ತೀರಾ?

**ಉತ್ತರ :-** ಈ ಮಧ್ಯೆಕಾಲದಲ್ಲಿ ಕ್ರೀ॥ಶ॥ 1881ರಲ್ಲಿ ದಕ್ಷಿಣ ಗುಜರಾತ್‌ನಲ್ಲಿ ಬ್ರಾಹ್ಮಣ ಕುಲದಲ್ಲಿ ಜನ್ಮಿಸಿದ ದಯಾನಂದ ಸರಸ್ವತಿ 1931ನೇ ವರ್ಷದಲ್ಲಿ ಆರ್ಯ ಸಮಾಜಗಳನ್ನು ಸ್ಥಾಪಿಸಿ ಯಜ್ಞಗಳನ್ನು ಮಾಡುವುದಕ್ಕೆ, ವೇದಗಳನ್ನು ಓದುವುದಕ್ಕೆ ತರಭೇತಿ ಹೊಂದುವಹಾಗೆ ಮಾಡುವುದೇ ಅಲ್ಲದೆ, ಪ್ರಸ್ತುತ ಕಾಲದಲ್ಲಿ ಆರ್ಯ ಸಾಂಪ್ರದಾಯಗಳು ವೃದ್ಧಿ ಹೊಂದುವಹಾಗೆ ದಯಾನಂದ ಸರಸ್ವತಿ ಬೀಜ ಹಾಕಿದ್ದಾನೆ. ದಯಾನಂದ ಸರಸ್ವತಿ ಪೂರ್ತಿ ಅರವತ್ತು ವರ್ಷಗಳು ಸಹ ಬದುಕಲಿಲ್ಲ. ಆತನ ಜೀವನವೆಲ್ಲಾ ತಾನು ಏನೋ ತಿಳಿದುಕೊಳ್ಳಬೇಕೆಂದು ದೇಶವೆಲ್ಲಾ ಕಾಲ್ನಡಿಗೆಯಲ್ಲಿ ತಿರುಗುತ್ತಾ ಬಂದಿದ್ದಾನೆ. ಕೊನೆಗೆ ತನ್ನ ಐವತ್ತನೇ ವರ್ಷದಲ್ಲಿ ಮುಂಬಾಯಿ ಸೇರಿ ಅಲ್ಲಿ ಸ್ವಲ್ಪ ಕಾಲವಿದ್ದು ಸತ್ತುಹೋಗಿದ್ದಾನೆ. ಮೇಲಕ್ಕೆ ಆರ್ಯ ಸಂಪ್ರದಾಯಗಳನ್ನು ಕುರಿತು ದೊಡ್ಡದಾಗಿ ಹೇಳುತ್ತಿದ್ದರೂ, ತನ್ನಲ್ಲಿ ಅಸಂತೃಪ್ತಿಯಾಗಿದ್ದೂ ತಾನು ತಿಳಿದುಕೊಳ್ಳಬೇಕಾಗಿರುವುದು ಏನೋ ಇದೆಯೆಂದು ತಪನೆಯಿಂದಿದ್ದನು. ಆತನು ಸತ್ತುಹೋದಾಗಲೂ ಸಹ ಅಸಂತೃಪ್ತಿಯಿಂದಲೇ ಸತ್ತುಹೋದಹಾಗೆ ತಿಳಿಯುತ್ತಿದೆ. ಈ ದಿನ ಸಹ ಎಷ್ಟೋ ಬ್ರಾಹ್ಮಣರು ದೇವರ ಗುಡಿಯಲ್ಲಿ ಪೂಜೆಗಳು ಮಾಡುತ್ತಿದ್ದರೂ, ಆ ಗುಡಿಯಲ್ಲಿನ

ಪ್ರತಿಮೆಗಳು ನಿಜವಾದ ದೇವರುಗಳು ಅಲ್ಲ ಎಂದು ಅಸಂತೃಪ್ತಿಯಿಂದಲೇ ಇದ್ದಾರೆ. ಅವರೇ ಅಲ್ಲದೆ ನಾವು ದ್ರಾವಿಡರಾಗಿ ಹುಟ್ಟಿ ಆರ್ಯರಾಗಿ ಏಕೆ ಬದಲಾಗಿದ್ದೇವೆಂದು ಚಿಂತಿಸುವ ಬ್ರಾಹ್ಮಣರು ಕೆಲವರು ಇದ್ದಾರೆ. ಅಂತಹವರನ್ನು ಎಲ್ಲರನ್ನೂ ಸಮೀಕರಿಸಿ ಅವರಿಂದಲೆ ದ್ರಾವಿಡ ಬ್ರಾಹ್ಮಣ ಸಂಘಗಳನ್ನು ತಯಾರು ಮಾಡಿ, ಬ್ರಾಹ್ಮಣರಿಂದಲೇ ದ್ರಾವಿಡ ಆಚಾರಗಳು, ದ್ರಾವಿಡ ಜ್ಞಾನ ದೊಡ್ಡದೆಂದು ಪ್ರಚಾರ ಮಾಡಿಸಬಲ್ಲೆವು. ಈಗಾಗಲೆ ಎಷ್ಟೋ ಬ್ರಾಹ್ಮಣರು ಆರ್ಯರ ಕಡೆಯಿಂದ ಬಂದು ದ್ರಾವಿಡರ ಕಡೆ ಹೋಗುವುದಕ್ಕೆ ತಕ್ಕಂತಹ ಜ್ಞಾನವನ್ನು ತಿಳಿದು ಕೊಳ್ಳುತ್ತಿದ್ದಾರೆ. ಕೆಲವರು ಬ್ರಾಹ್ಮಣರು "ಆರ್ಯ ಸಂಪ್ರದಾಯಗಳಿಂದ ನಮಗೆ ಬದುಕು ಇದೆ, ಆರ್ಯರಲ್ಲಿ ಇರುವ ಯಜ್ಞಗಳಿಂದ, ಮತ್ತೆ ಕೆಲವು ಕೆಲಸಗಳಿಂದ ಜೀವಿಸುತ್ತಿದ್ದೇವೆ. ಈಗ ಒಂದೇಬಾರಿ ಅವುಗಳನ್ನು ಬಿಟ್ಟರೇ ನಾವು ಹೇಗೆ ಬದುಕುತ್ತೇವೆ" ಎನ್ನುವ ಅನುಮಾನದಿಂದ ಇರುವವರು ಬಹಳ ಜನ ಇದ್ದಾರೆ.

ಈಗಾಗಲೆ ಎಲ್ಲ ಸಂಶಯಗಳಿಗು ಉತ್ತರಗಳು ತಿಳಿದುಕೊಂಡು ನಮ್ಮ ಪಕ್ಕಕ್ಕೆ ಬಂದು ತಾವು ದ್ರಾವಿಡ ಬ್ರಾಹ್ಮಣರಾಗಿ ತಯಾರಾದವರು ಎಷ್ಟೋ ಮಂದಿ ಇದ್ದಾರೆ. ಬದುಕುವುದಕ್ಕಾಗಿ ಸಮಸ್ಯೆಗಳಲ್ಲಿ ಸಿಲುಕಿಕೊಂಡವರಿಗೆ ನಾವು ಹೇಳುವುದೇನೆಂದರೆ! ನೀನು ಏನು ಮಾಡುತ್ತಿದ್ದೀಯೋ ಆ ಕೆಲಸವನ್ನು ಬಿಡಬೇಕೆಂದು ನಾವು ಹೇಳಲಿಲ್ಲ. ಒಂದುವೇಳೆ ಆರ್ಯ ಸಂಪ್ರದಾಯಗಳಲ್ಲಿನ ಯಜ್ಞಗಳು ಮಾಡುತ್ತಾ, ವೇದಮಂತ್ರಗಳು ಓದುತ್ತಾ ಜೀವನವನ್ನು ಕಳೆಯುತ್ತಿದ್ದರೂ ನಾವು ಅವುಗಳನ್ನು ಬಿಟ್ಟರೆ ಹೇಗೆ ಬದುಕಬಲ್ಲೆವು ಅನ್ನುವ ಸಂಶಯವನ್ನು ಬಿಟ್ಟುಹಾಕಿ. ಯಾರು ಹೇಗೆ ಬದುಕಬೇಕೋ ಮೊದಲೇ ನಿರ್ಣಯಿಸಲಾಗಿರುತ್ತದೆ. ನಮ್ಮ ಪ್ರಮೇಯದಿಂದ ನಾವು ಬದುಕುತ್ತಿದ್ದೇವೆಂದು ಕೊಳ್ಳುವುದು ತಪ್ಪು. ಆದರೂ ನಿಮಗೆ ಅರ್ಥವಾಗುವಹಾಗೆ ನಾವು ಹೇಳುವುದು ಏನೆಂದರೆ! ಯಜ್ಞಗಳೆನ್ನುವವು ಆರ್ಯಸಾಂಪ್ರದಾಯದಲ್ಲಿ ಭಾಗಗಳಾದರೂ, ಅವುಗಳನ್ನು ತಪ್ಪದೆ ಮಾಡಬೇಕಾಗಿ ಬಂದರೂ ಮಾಡು, ಹಾಗಾದರೂ ನೀನು ದ್ರಾವಿಡನೆಂದು ಅನಿಸಿಕೊಳ್ಳಬಹುದು. ಆರ್ಯರ ಜ್ಞಾನ ಎಲ್ಲವೂ ಹೊರಗಿನ

ಕಾರ್ಯಗಳ ಮೇಲೆ ಆಧಾರಬಿದ್ದಿರುತ್ತದೆ. ಅದೇ ದ್ರಾವಿಡ ಜ್ಞಾನ ಎಲ್ಲವೂ ಹೊರಗಿನ ಕೆಲಸಗಳ ಮೇಲೆ ಅಲ್ಲದೆ ಒಳಗಿನ ಭಾವಗಳ ಮೇಲೆ ಆಧಾರಬಿದ್ದು ಇರುತ್ತದೆ. ಆದ್ದರಿಂದ ನಾವು ಕೆಲಸಗಳನ್ನು ಖಂಡಿಸುವುದಿಲ್ಲ, ಆರ್ಯ ಭಾವಗಳನ್ನು ಖಂಡಿಸುತ್ತಿದ್ದೇವೆ. ಭಾವಗಳು ಬದಲಾದಾಗ ಕಾರ್ಯಗಳು ಅವಷ್ಟಕ್ಕವೇ ಬದಲಾಗುತ್ತವೆ. ಬದುಕುವುದರಲ್ಲೂ ಸಹ ಒಳ್ಳೆ ಬದಲಾವಣೆ ಬರಬಹುದು. ಆದ್ದರಿಂದ ಬದುಕುವುದಕ್ಕೋಸ್ಕರ ಯಾರೂ ಆಲೋಚಿಸಿಕೊಳ್ಳಬೇಕಾದ ಅವಶ್ಯಕತೆಯಿಲ್ಲ.

ಆರ್ಯ ಜ್ಞಾನದ ಪ್ರಕಾರ ಹೊರಗಿನ ಯಜ್ಞಗಳು ಮಾಡಿದರೂ, ಮಾಡಿಸಿದರೂ ಅವರ ದೃಷ್ಠಿಯಲ್ಲಿ ಮಾಡಿದವನು ಕೂಲಿಯವನಂತೆ ಇರುತ್ತಾನೆ. ಅದೇ ದ್ರಾವಿಡ ಜ್ಞಾನದ ಪ್ರಕಾರವಿರುವ ಜ್ಞಾನಯಜ್ಞವನ್ನು ಮಾಡಿ ತೋರಿಸು, ಆಗ ಅವರ ದೃಷ್ಠಿಯಲ್ಲಿ ಯಜ್ಞ ಮಾಡಿದವನು ಗುರು ಸಮಾನನಾಗಿ ಕಾಣಿಸಬಲ್ಲನು. ನೀನು ಯಜ್ಞ ಮಾಡುವುದರಿಂದ, ಮಾಡಿಸುವವನು ಇರದೆ ಎಲ್ಲರೂ ಮಾಡುವುದಕ್ಕೆ ಪ್ರಾರಂಭಮಾಡುತ್ತಾರೆ. ಹಾಗೆ ಮತ್ತೊಬ್ಬ ಮನುಷ್ಯನಲ್ಲಿ ದೊಡ್ಡ ಭಾವವನ್ನು ತಂದಿಡುವ ಭಗವದ್ಗೀತೆಯಲ್ಲಿರುವ ದ್ರಾವಿಡ ಯಜ್ಞವನ್ನು ಕುರಿತು ತಿಳಿಸಿದಷ್ಟು ಮಾತ್ರಕ್ಕೆ ಗೌರವ ಲಭಿಸುತ್ತದೆ. ಪೂಜ್ಯ ಭಾವ ಏರ್ಪಡುವುದೇ ಅಲ್ಲದೆ ಎಲ್ಲರ ಭಾವಗಳಲ್ಲಿಯೂ ಬದಲಾವಣೆ ಬರುತ್ತದೆ. ಆದ್ದರಿಂದ ಆರ್ಯ ಸಂಪ್ರದಾಯಗಳು ಹೊರಗಿನ ಕಾರ್ಯಗಳ ಮೇಲೆ ಆಧಾರಪಟ್ಟಿವೆಯೆಂದು, ದ್ರಾವಿಡ ಸಂಪ್ರದಾಯಗಳು ಒಳಗಿನ ಭಾವಗಳ ಮೇಲೆ ಆಧಾರಬಿದ್ದಿವೆಯೆಂದು ತಿಳಿಸುತ್ತಿದ್ದೇವೆ. ದ್ರಾವಿಡ ಜ್ಞಾನದ ಪ್ರಕಾರ ಒಳಗಿನ ಭಾವಗಳನ್ನನುಸರಿಸಿ ಕಾಣಿಸದ ಫಲವಿರುತ್ತದೆ. ಹಾಗೇ ಆರ್ಯ ಜ್ಞಾನದ ಪ್ರಕಾರ ಹೊರಗಿನ ಕಾರ್ಯಗಳನ್ನನುಸರಿಸಿ ಕಾಣಿಸುವ ಫಲಿತವಿರುತ್ತದೆ. ಕೊನೆಗೆ ಕಾಣಿಸುವ ಫಲಿತ, ಕಾಣಿಸದ ಫಲಿತದ ಮೇಲೆ ಆಧಾರಬಿದ್ದಿದೆ. ಆದ್ದರಿಂದ ಆರ್ಯಜ್ಞಾನಕ್ಕಿಂತ ದ್ರಾವಿಡ ಜ್ಞಾನ ದೊಡ್ಡದೆಂದು ಹೇಳಬಹುದು.

**ಪ್ರಶ್ನೆ :–** ದ್ರಾವಿಡ ಸಮಾಜವನ್ನು ಪುನರುದ್ಧರಿಸುವುದಕ್ಕೆ ಪ್ರಥಮವಾಗಿ ನೀವು ಮಾಡುವ ಕಾರ್ಯವೇನು?

**ಉತ್ತರ :–** ಶೂದ್ರರನ್ನು ಬ್ರಾಹ್ಮಣರಾಗಿ ಬದಲಾಯಿಸುವುದಕ್ಕೆ, ಶೂದ್ರರಿಗೆ ದ್ರಾವಿಡ ಜ್ಞಾನ ಬೋಧಿಸುವುದು ಮುಖ್ಯವಾದ ಪ್ರಾಥಮಿಕ ಕಾರ್ಯವಾದರೂ, ಆ ಕೆಲಸವನ್ನು ನಾನು ಮಾಡುವುದಿಲ್ಲ. ಆ ಕೆಲಸವನ್ನು ಇತರರಿಂದ ಮಾಡಿಸುವುದಕ್ಕೆ ತಕ್ಕ ವಿಧವಾಗಿ ಮಾಡುವುದೇ ನನ್ನ ಪ್ರಥಮ ಕರ್ತವ್ಯ. ಹಿರಿಯರು ಒಂದು ಗಾದೆಯನ್ನು ಹೇಳುತ್ತಿರುತ್ತಾರೆ. ಹೊಡೆದವನಿಂದಲೇ ಸಿಂಬಳ ತೆಗಿಸಿಕೊಂಡರೆ ಅಳುವ ಮಗುವಿಗೆ ಹಾಯಾಗಿ ಇರುತ್ತದಂತೆ. ಈ ಸೂತ್ರದ ಪ್ರಕಾರ ಯಾರಿಂದ ದ್ರಾವಿಡರು ತಮ್ಮ ಪ್ರಾಬಲ್ಯವನ್ನು ಕಳೆದುಕೊಂಡಿದ್ದಾರೋ, ಅವರೇ ತಮ್ಮನ್ನು ಪುನಃ ದ್ರಾವಿಡರಾಗಿ ಬದಲಾಯಿಸಿದರೆ ಚೆನ್ನಾಗಿರುತ್ತದೆಂದುಕೊಳ್ಳುತ್ತಿದ್ದೇನೆ. ಆದ್ದರಿಂದ ಈಗಿರುವ ಬ್ರಾಹ್ಮಣರಿಗೆ ನೀವು ಪೂರ್ವದಲ್ಲಿ ದ್ರಾವಿಡ ಜಾತಿಗೆ ಸೇರಿದವರೆಂದು ತಿಳಿಸಿ, ದ್ರಾವಿಡ ಬ್ರಾಹ್ಮಣನು ಎಷ್ಟು ದೊಡ್ಡವನೋ ತಿಳಿಸಿ, ಆರ್ಯ ಬ್ರಾಹ್ಮಣನಾಗಿ ಇರಬೇಡವೆಂದು, ಪುನಃ ಪೂರ್ವ ಚರಿತ್ರೆ ಪ್ರಕಾರ ದ್ರಾವಿಡ ಬ್ರಾಹ್ಮಣನಾಗಿ ಬದಲಾಗು ಎಂದು ತಿಳಿಸಿ, ಹಾಗೆ ಬದಲಾಗುವುದಕ್ಕೆ ಅವರಿಗೆ ಬೇಕಾದ "ದ್ರಾವಿಡ" ಜ್ಞಾನವನ್ನು (ಆತ್ಮಜ್ಞಾನವನ್ನು) ತಿಳಿಸಿ ಮೊದಲು ಬ್ರಾಹ್ಮಣರಾದವರಿಗೆ ಅವರ ಚರಿತ್ರೆ ತಿಳಿಸಿ, ಪುನಃ ಪೂರ್ವದ ಬ್ರಾಹ್ಮಣನಾಗಿ ಬದಲಾಯಿಸಿದರೆ, ದ್ರಾವಿಡ ಬ್ರಾಹ್ಮಣನಾಗಿ ಬದಲಾದವನು ತಮ್ಮ ಚರಿತ್ರೆ ದೊಡ್ಡದೆಂದು ತಿಳಿದು, ತನ್ನ ದ್ರಾವಿಡ ಜಾತಿಯನ್ನು ತಾನೇ ಉದ್ಧರಿಸಿಕೊಳ್ಳುವುದಕ್ಕೆ ಪ್ರಾರಂಭಮಾಡುತ್ತಾನೆ. ಆ ವಿಧವಾಗಿ ಬ್ರಾಹ್ಮಣರಾದವರೇ ಶೂದ್ರರಾಗಿ ಇರುವವರಲ್ಲಿನ ಕ್ಷುದ್ರತ್ವವನ್ನು ತೆಗೆದುಹಾಕಿ ಪವಿತ್ರರಾಗಿ, ಆತ್ಮಜ್ಞಾನಿಗಳಾಗಿ, ದ್ರಾವಿಡರನ್ನಾಗಿ ಬದಲಾಯಿಸ ಬಲ್ಲರು. ಆಗ ನಾನೊಬ್ಬನೇ ಮಾಡಬೇಕೆಂದು ಕೊಂಡ ಕೆಲಸವನ್ನು ಸಾವಿರ ಮಂದಿ ಬ್ರಾಹ್ಮಣರು ಮಾಡಿ ಪುನಃ ಕೃತಯುಗದಲ್ಲಿನ ಸಮಾಜವನ್ನು ನೆಲೆಗೊಳಿಸುತ್ತಾರೆ. ಆಗ ಕುಲಗಳೇ ಅಲ್ಲ, ಯಾವ ಮತವೂ ಸಹ ಭೂಮಿಮೇಲೆ ಇರುವುದಿಲ್ಲ. ಯಾರು ಯಾವ

ಮತದಲ್ಲಿದ್ದರೂ ಪ್ರಪಂಚವೆಲ್ಲಾ ಏಕಕುಲವಾಗಿ ಬದಲಾಗಬಲ್ಲದು. ಎಲ್ಲರೂ ದೇವರ ವಾರಸರೆಂದು ಹೇಳಿಕೊಳ್ಳುತ್ತಾರೆ. ದೇವರು ಯಾರೋ, ತಾವು ಯಾರೋ ಎಲ್ಲರಿಗೂ ಒಂದು ಅಂದಾಜು ಬಂದಿರುವುದರಿಂದ, ವಾಸ್ತವ ತಿಳಿದ ಮನುಷ್ಯರೆಲ್ಲರೂ ಗತದಲ್ಲಿ ತಮ್ಮ ಮತಗಳು ಬೇರೆಯಾಗಿದ್ದರೂ, ಈಗ ಮಾತ್ರ ನಾವು ಎಲ್ಲರೂ ಒಂದೇ ದೇವರ ವಾರಸರು, ದೇವರ ಆಸ್ತಿಯಾದ ದೈವಜ್ಞಾನದಲ್ಲಿ ಎಲ್ಲರೂ ಸಮಾನ ಭಾಗಸ್ವಾಮಿಗಳು ಎಂದು ಹೇಳಿಕೊಳ್ಳುತ್ತಾರೆ.

**ಪ್ರಶ್ನೆ :–** ನೀವು ಏನೂ ಅಂದುಕೊಳ್ಳದಿದ್ದರೆ ಒಂದು ಪ್ರಶ್ನೆ ಕೇಳುತ್ತೇನೆ. ಅದಕ್ಕೆ ನೇರವಾಗಿ ಉತ್ತರವನ್ನು ಹೇಳಿ. ಈಗ ನೀವು ಹೇಳಿರುವುದೆಲ್ಲಾ ಊಹಾಜನಿತ ಕಾರ್ಯವಾಗುತ್ತದಾಗಲೀ, ಆಚರಣಯೋಗ್ಯ ಕಾರ್ಯವೆಂದು ನಾನು ಅಂದು ಕೊಳ್ಳುತ್ತಿಲ್ಲ. ನನ್ನ ಮಾತು ತಪ್ಪಾದರೇ ಕ್ಷಮಿಸಿರಿ.

**ಉತ್ತರ :–** ಯಾವ ಕಾರ್ಯವಾದರೂ ಮೊದಲು ತನ್ನ ಒಳಗಿನ ಆತ್ಮ ತಿಳಿಸುವ ಊಹೆಯಿಂದಲೇ ಪ್ರಾರಂಭವಾಗುತ್ತದೆ. ಆದರೇ ಕೆಲವು ಕೆಲಸಗಳು ನಡೆಯುತ್ತವೆ, ಕೆಲವು ಕೆಲಸಗಳು ನಡೆಯುವುದಿಲ್ಲ. ನಡೆಯದ ಕಾರ್ಯಗಳನ್ನು ಕೆಲವರು ಊಹಾಜನಿತ ಕಾರ್ಯಗಳೇ, ಆಚರಣೆ ಯೋಗ್ಯವಲ್ಲದ ಕಾರ್ಯಗಳು ಎಂದು ಅನ್ನುತ್ತಿರುತ್ತಾರೆ. ಊಹೆಗೆ ಬಂದಿರುವ ಕೆಲವು ಕಾರ್ಯಗಳು ನಡೆಯಬಹುದು, ನಡೆಯದೇ ಹೋಗಬಹುದು. ಅಷ್ಟು ಮಾತ್ರಕ್ಕೆ ಎಲ್ಲಾ ಕಾರ್ಯಗಳನ್ನು ಆಚರಣಯೋಗ್ಯವಲ್ಲದ ಕಾರ್ಯಗಳು ಎಂದು ಅನ್ನಬಾರದು. ಮೇಲಕ್ಕೆ ಗೊಂಬೆಗಳ ಹಾಗೆ ಮನುಷ್ಯರು ಕಾಣಿಸಿದರೂ, ಒಳಗೆ ನಿರ್ಣಯಿಸಿ ಆಡಿಸುವವನು ಪ್ರತ್ಯೇಕವಾಗಿ ಇದ್ದಾನಾದ್ದರಿಂದ, ಇದು ಆಚರಣಯೋಗ್ಯವಲ್ಲದ ಕೆಲಸ ಎಂದು ಯಾರೂ ಹೇಳುವುದಕ್ಕೆ ಸಾಧ್ಯವಿಲ್ಲ. ನಾನು ಇಲ್ಲಿಯವರೆಗು ಹೇಳಿದ ದ್ರಾವಿಡ ಪುನರುದ್ಧರಣೆ ದೈವಜ್ಞಾನದಿಂದ ಮುಡಿಬಿದ್ದಿದೆ. ಆದ್ದರಿಂದ ನಾವು ಮಾಡಬೇಕಾದ ಕೆಲಸವಿಲ್ಲ. ಅಂದುಕೊಂಡರೆ ಆತ್ಮವೇ ಮಾಡುತ್ತದೆ. ನಡೆಯುವ ಪ್ರತಿ ಕೆಲಸವನ್ನು ಆತ್ಮ ಮಾಡುತ್ತಿದ್ದರೂ, ಮಾಡಿಸುತ್ತಿದ್ದರೂ ಆತ್ಮಜ್ಞಾನ ತಿಳಿಯದ ಮನುಷ್ಯರಿಗೆ

ತಾವೇ ಮಾಡಿದಂತಿರುತ್ತದೆ. ಆದ್ದರಿಂದ ಯಾರು ಮಾಡುತ್ತಿದ್ದಾರೆ ಅನ್ನುವುದು ಹೊರ ನೋಟಕ್ಕೆ ಯಾರಿಗೂ ಅರ್ಥವಾಗುವುದಿಲ್ಲ. ಆದರೇ ಇಲ್ಲಿ ನಾನು ಮಾಡಿದ್ದೇನೆ ಅನ್ನುವುದು ಮುಖ್ಯವಲ್ಲ ಆದರೆ, ಏನು ನಡೆದಿದೆ, ಏನು ನಡೆಯುತ್ತಿದೆ ಅನ್ನುವುದೇ ಮುಖ್ಯ. ಈಗ ಆರ್ಯರಲ್ಲಿ ಸೇರಿಹೋದ ಬ್ರಾಹ್ಮಣರು ದ್ರಾವಿಡ ಬ್ರಾಹ್ಮಣರಾಗಿ ಮೊದಲು ರೂಪಾಂತರ ಹೊಂದುತ್ತಾರೆಂದು, ನಂತರ ಅದೇ ಬ್ರಾಹ್ಮಣರೇ ಎಲ್ಲ ಕುಲದವರನ್ನೂ, ಎಲ್ಲ ಮತದವರನ್ನು ಒಂದೇ ಹಾದಿಗೆ ತರಬಲ್ಲರೆಂದು ಅಂದುಕೊಂಡಿದ್ದೇವೆ.

ಬ್ರಾಹ್ಮಣನು ಎಂದರೆ ದೊಡ್ಡವನೆಂದು ಅಥವಾ ಬ್ರಹ್ಮಜ್ಞಾನ ತಿಳಿದವನೆಂದೂ ಅರ್ಥವಿದೆ. ಏನಾದರೂ ತಿಳಿಯದವನು ತಿಳಿದುಕೊಳ್ಳ ಬೇಕೆಂದರೆ, ತಿಳಿದವನ ಹತ್ತಿರದಿಂದಲೇ ತಿಳಿದುಕೊಳ್ಳಬೇಕು. ಹಾಗೇ ದೊಡ್ಡವನು ಅಥವಾ ದೊಡ್ಡ ಜ್ಞಾನವಿರುವವನು ಎಂದು ಅರ್ಥವಿರುವ ಬ್ರಾಹ್ಮಣನ ಹತ್ತಿರದಿಂದಲೇ ಏನಾದರೂ ತಿಳಿಯಬೇಕು. ಆದ್ದರಿಂದ ಪದ್ಧತಿ ಪ್ರಕಾರ ಮೊದಲು ಬ್ರಾಹ್ಮಣನಾದವನನ್ನು ಅಸಲಾದ ಬ್ರಹ್ಮಜ್ಞಾನ ಬ್ರಾಹ್ಮಣನಾಗಿ (ದ್ರಾವಿಡ ಬ್ರಾಹ್ಮಣನಾಗಿ) ಮಾಡಿದರೆ, ಆ ಬ್ರಾಹ್ಮಣನು ಉಳಿದ ಮೂರು ಆತ್ಮಗಳ ಜ್ಞಾನವಿಲ್ಲದವರನ್ನು ಜೀವಾತ್ಮ, ಆತ್ಮ, ಪರಮಾತ್ಮ ಅನ್ನುವ ಮೂರು ಆತ್ಮ ಗಳೊಂದರ ಜ್ಞಾನವನ್ನು ತಿಳಿಸಿ ಉಳಿದ ಶೂದ್ರರೆಲ್ಲರನ್ನೂ ಬ್ರಾಹ್ಮಣರಾಗಿ ಬದಲಾಯಿಸಬಲ್ಲನು. ತಿಳಿದವನು ತಿಳಿಯದವರನ್ನು ತಿಳಿದವರನ್ನಾಗಿ ಮಾಡ ಬಲ್ಲನು ಎನ್ನುವ ಸೂತ್ರದ ಪ್ರಕಾರ ಬ್ರಾಹ್ಮಣನಿಂದಲೇ ಉಳಿದವರನ್ನು ಬ್ರಾಹ್ಮಣ ರಾಗಿ ಬದಲಾಯಿಸಬಲ್ಲೆನೆಂದು ಅಂದುಕೊಳ್ಳುತ್ತಿದ್ದೇನೆ. ಇದು ನಡೆಯುವ ಕೆಲಸವಾದ್ದರಿಂದ ನಡೆದೇ ನಡೆಯುತ್ತದೆ.

**ಪ್ರಶ್ನೆ :–** ಬ್ರಾಹ್ಮಣನಿಂದ ಉಳಿದವರನ್ನು ಬ್ರಾಹ್ಮಣರಾಗಿ ಮಾಡಿಸುತ್ತೇನೆಂದು, ಆ ಕೆಲಸವನ್ನು ನಾನು ಮಾಡುವುದಿಲ್ಲವೆಂದು ಹೇಳಿದ್ದೀರ. ಆದರೇ ಮೊದಲು ಬ್ರಾಹ್ಮಣರಾದವರನ್ನು ನಿಜವಾದ ದ್ರಾವಿಡ ಬ್ರಾಹ್ಮಣರಾಗಿ ತಯಾರು ಮಾಡುತ್ತೇ

ನೆಂದು ಹೇಳಿದ್ದೀರ. ಬ್ರಾಹ್ಮಣ ಎಂದರೆ ದೊಡ್ಡಯೆಂದು ಹೇಳಿ ತಿಳಿದವನೆಂದು ಹೇಳಿ, ಸೂತ್ರದ ಪ್ರಕಾರ ಏನಾದರೂ ಬ್ರಾಹ್ಮಣನಿಂದಲೇ ಮಾಡಿಸುತ್ತೇನೆಂದು ಹೇಳಿ, ಪ್ರಸ್ತುತ ಶೂದ್ರರ ಕುಲದಲ್ಲಿರುವ ನೀವು ಮೊದಲು ಬ್ರಾಹ್ಮಣನನ್ನು ನಿಜವಾದ ಬ್ರಾಹ್ಮಣನಾಗಿ ನಾನೇ ಬದಲಾಯಿಸುತ್ತೇನೆಂದು ಅಂದಿದ್ದೀರ. ಆಗ ಬ್ರಾಹ್ಮಣನೇ ತಿಳಿಸಬೇಕು ಎನ್ನುವ ಸೂತ್ರವನ್ನು ನೀವು ಪಾಲಿಸಲಿಲ್ಲವಲ್ಲ!

**ಉತ್ತರ :–** ತಿಳಿದವನು ತಿಳಿಯದವರಿಗೆ ಹೇಳಬಲ್ಲನು ಎಂದೂ, ದೊಡ್ಡವನಾದ ವನು ಚಿಕ್ಕವನಾದವನಿಗೆ ಹೇಳಬಲ್ಲನೆಂದು, ಬ್ರಾಹ್ಮಣನೇ ಉಳಿದವರನ್ನು ಬ್ರಾಹ್ಮಣರಾಗಿ ಬದಲಾಯಿಸಬಲ್ಲನೆಂದು ಹೇಳಿರುವುದು ವಾಸ್ತವವೇ. ನಾನು ಪ್ರತಿಯೊಂದನ್ನು ಸೂತ್ರದ ಪ್ರಕಾರವೇ ಮಾಡುತ್ತಿದ್ದೇನೆ. ನಿಮಗೆ ನಾನು ಶೂದ್ರನಾದರೂ ನಾನು ಎಂದಿಗೂ ದ್ರಾವಿಡ ಬ್ರಾಹ್ಮಣನೇ. ಪ್ರಪಂಚದಲ್ಲಿ ಶೂದ್ರರ ಕುಲದಲ್ಲಿ ಹುಟ್ಟಿದರೂ ನಾನು ಚರಿತ್ರೆ ಮರೆಯದವನು, ಆದ್ದರಿಂದ ನಾನು ನಿಜವಾದ ಬ್ರಾಹ್ಮಣನು. ಆದ್ದರಿಂದ ಕಾರ್ಯವನ್ನು ಮೊದಲು ನಾನೇ ಪ್ರಾರಂಭಿಸಿ, ನಂತರ ಉಳಿದವರಿಂದ ಮಾಡಿಸುತ್ತಿರುತ್ತೇನೆ. ನಾನು ಮೊದಲಿಗೇ ನಿಜವಾದ ಬ್ರಾಹ್ಮಣನೆ ಆದ್ದರಿಂದ ನಾನೇ ಪ್ರಾರಂಭಿಸುತ್ತಿದ್ದೇನೆ.

**ಪ್ರಶ್ನೆ :–** ನೀವು ಪ್ರತಿ ದೈವ ಜ್ಞಾನ ವಿಷಯವನ್ನು ಎಲ್ಲರಿಗು ತಿಳಿಯುವಹಾಗೆ ಮಾಡಬೇಕೆಂದು, ಯಾವುದು ಮುಚ್ಚಿಡಬಾರದೆಂದು ಹೇಳುತ್ತಿದ್ದೀರಾ. ಈಗಲೂ ಸಹ ಎಲ್ಲ ವಿಷಯಗಳನ್ನು ಮುಚ್ಚಿಡದೇ ಹೇಳುತ್ತಲೇ ಇದ್ದೀರಾ. ಇದಕ್ಕೂ ಮೊದಲು ನಾವು ಇತರ ಮತಸ್ಥರಿಗೆ ಅವರ ಜ್ಞಾನವನ್ನು ಹೊರತು ಇತರರ ಜ್ಞಾನವನ್ನು ಕೇಳುವುದಿಲ್ಲ ಎನ್ನುವ ಅಜ್ಞಾನದಲ್ಲಿರುವ ಮಂಡು (ಮೊರಟು) ಮನುಷ್ಯರಿಗೆ ನೀವು ಜ್ಞಾನವನ್ನು ಹೇಗೆ ಹೇಳಿದರೂ ಕಿವಿಯೊಳಗೆ ಏರಿಸಿಕೊಳ್ಳದವರಿಗೆ, ನೀವು ಹೇಗೆ ಜ್ಞಾನವನ್ನು ಹೇಳುತ್ತೀರೆಂದು ಕೇಳಿದಾಗ! ನೀವು ಕಚಗುಳಿ ಸೂತ್ರವನ್ನು ಉಪಯೋಗಿಸಿ ಹೇಳುತ್ತೇನೆ ಅಂದಿದ್ದೀರ. ಆದರೇ ಕಚಗುಳಿ ಸೂತ್ರವನ್ನು ಇತರ ಮತದವರ ಬಗ್ಗೆ, ನಾವು ಹಿಡಿದುಕೊಂಡ

ಮೊಲಕ್ಕೆ ಮೂರೇ ಕಾಲುಗಳಿವೆ ಎಂದು ಹೇಳುವ ಮಂಡುವಾದಿಗಳ ಹತ್ತಿರ ಕಚಗುಳಿ ಸೂತ್ರವನ್ನು ಹೇಗೆ ಉಪಯೋಗಿಸುತ್ತೀರಾ? ಅಸಲು ಕಚಗುಳಿ ಸೂತ್ರವೆಂದರೇ ಏನು? ಸ್ವಲ್ಪ ವಿವರವಾಗಿ, ನಮಗೆ ಅರ್ಥವಾಗುವಹಾಗೆ ಹೇಳೆಂದು ಕೋರುತ್ತಿದ್ದೇನೆ.

**ಉತ್ತರ :–** ಕಚಗುಳಿ ಅನ್ನುವುದು ಶರೀರದಲ್ಲಿ ಎಲ್ಲೋ ಪರಿಮಿತವಾದ ಸ್ಥಳಗಳಲ್ಲಿ ಇರುತ್ತದೆ. ಆ ಸ್ಥಳಗಳಲ್ಲಿ ಸ್ಪರ್ಶ ತಾಕಿದರೆ ಮನುಷ್ಯನಲ್ಲಿ ಕದಲಿಕೆ, ಚುರುಕುತನ ಬರುವುದು ವಾಸ್ತವವೇ. ಹಾಗೇ ಮನುಷ್ಯ ಯಾವುದರಲ್ಲಿ ಒಪ್ಪಿಕೊಳ್ಳದಿದ್ದರೂ ಕೆಲವು ವಿಷಯಗಳಲ್ಲಿ ತಪ್ಪದೆ ಒಪ್ಪಿಕೊಳ್ಳುತ್ತಾನೆ. ಒಬ್ಬ ಗಂಡಸನ ಹತ್ತಿರಕ್ಕೆ ಹೋಗಿ ನೀನು ಹೆಂಗಸಲ್ಲ ಅಂದರೆ ಆ ಮಾತು ನಿಜವೇ ಎನ್ನುತ್ತಾನಾಗಲೀ, ನಿನ್ನ ಮಾತು ಸುಳ್ಳು ನಾನು ಹೆಂಗಸು ಎಂದು ಅನ್ನುವುದಿಲ್ಲ. ಅದೇ ವಿಧವಾಗಿ ನಾನು ಒಳ್ಳೆಯವನೆನ್ನುವ ಅಭಿಪ್ರಾಯ ಎಲ್ಲರಲ್ಲೂ ಇರುತ್ತದೆ. ಅಂತಹವನನ್ನು ನೋಡಿ ನಿನ್ನಲ್ಲಿ ಕೆಟ್ಟತನ ಎನ್ನುವುದು ಇಲ್ಲವೇ ಇಲ್ಲ ಅಂದರೆ, ನಿಜ ಹೇಳಿದ್ದೀಯೆಂದು ಹೇಳಿದವನನ್ನು ಹೊಗಳುತ್ತಾನೆ. ಈ ವಿಧವಾಗಿ ಯಾವ ವಿಷಯದಲ್ಲಿ ಒಪ್ಪಿಕೊಳ್ಳದವನು ಕೆಲವು ವಿಷಯಗಳಲ್ಲಿ ಮಾತ್ರ ಪೂರ್ತಿಯಾಗಿ ಒಪ್ಪಿಕೊಳ್ಳುತ್ತಾನೆ. ಎಂತಹವನಾದರೂ ಕಚಗುಳಿಗೆ ನಕ್ಕಹಾಗೆ, ಎಂತಹವನಾದರೂ ಕೆಲವು ವಿಷಯಗಳಲ್ಲಿ ಮೌನ ಬಿಟ್ಟು ತನ್ನ ಉದ್ದೇಶವನ್ನು ತಿಳಿಸುತ್ತಾನೆ. ಅದೇ ವಿಧವಾಗಿಯೇ ಯಾವ ಮತದವನಾದರೂ, ತನ್ನ ಮತವನ್ನು ಬಿಟ್ಟು ಪಕ್ಕದ ಮತದ್ದೆಲ್ಲಾ ತಪ್ಪೇಯೆಂದು ಹೇಳುವವನಾದರೂ, ಸಾಮಾನ್ಯವಾಗಿರುವ ಕೆಲವು ವಾಕ್ಯಗಳಿಗೆ ಒಪ್ಪಿಕೊಂಡು ಅದು ನಿಜವೇಯೆಂದು ಹೇಳುತ್ತಾನೆ. ಒಬ್ಬ ಹಿಂದೂ ಮತ್ತೊಬ್ಬ ಮುಸ್ಲೀಮ್ ಹತ್ತಿರ ತನ್ನ ದೇವತೆಗಳಾದ ವಿಷ್ಣು, ಈಶ್ವರರನ್ನು ಕುರಿತು ಹೇಳಿದರೆ, ಮುಸ್ಲೀಮ್ ಇದೆಲ್ಲವೂ ಅಸತ್ಯ, ಇವನು ತಪ್ಪಾಗಿ ತಿಳಿದು, ದೇವರನ್ನು ಬಿಟ್ಟು ಅನ್ಯದೇವತೆಗಳನ್ನು ಹಿಡಿದುಕೊಂಡಿದ್ದಾನೆ. ಇವರದು ಜ್ಞಾನವೇ ಅಲ್ಲ ಎಂದು ಅಂದುಕೊಳ್ಳುವನು. ಹಾಗೆ ದೇವತೆಗಳನ್ನು ಕುರಿತು ಹೇಳದೆ, ನಮ್ಮ ಇಬ್ಬರ ಶರೀರದಲ್ಲಿನ ಅವಯವಗಳು ಒಂದೇ ವಿಧವಾಗಿ ಕೆಲಸಮಾಡುತ್ತಿವೆ

ಎಂದು ಅಂದರೆ, ಅದನ್ನು ಆ ಮುಸ್ಲೀಮ್ ತಪ್ಪದೆ ಒಪ್ಪಿಕೊಳ್ಳುವನು. ನಾವು ಇಬ್ಬರೂ ಹೊರಗೆ ಇರುವ ಒಂದೇ ಗಾಳಿಯನ್ನು ಶ್ವಾಸವಾಗಿ ಹೀರುತ್ತಿದ್ದೇವೆ ಅಂದರೆ ಅದನ್ನು ಆ ಮುಸ್ಲೀಮ್ ಯಾವ ಮಾತ್ರ ಇಲ್ಲ ಎನ್ನುವುದಿಲ್ಲ ಮೇಲಾಗಿ ನಿಜವೇ ಅಲ್ಲವೆ! ಎಂದು ಅನ್ನುತ್ತಾನೆ. ಹಾಗೇ ನಿನ್ನನ್ನು ಹುಟ್ಟಿಸಿದ ದೇವರು, ನನ್ನನ್ನು ಹುಟ್ಟಿಸಿದ ದೇವರು ಇಬ್ಬರಲ್ಲ ಒಬ್ಬನೇ ಅಂದರೆ, ಮುಸ್ಲೀಮ್ ಸಂತೋಷಪಟ್ಟು ಸರಿಯಾದ ಮಾತು ಹೇಳಿದ್ದೀಯೆಂದು ಹೊಗಳುತ್ತಾನೆ. ಎಂದೋ ಒಂದು ದಿನ ಪ್ರತಿ ಮನುಷ್ಯನಿಗೂ ಸಾವು ಇರುತ್ತದೆಂದು ಹೇಳಿದರೆ ಅದನ್ನು ಸಹ ಸತ್ಯವೆಂದು ಒಪ್ಪಿಕೊಳ್ಳುತ್ತಾನೆ. ಮೊದಲು ವಿಷ್ಣು, ಈಶ್ವರನು ಎಂದು ಹೇಳಿದ ಮಾತುಗಳನ್ನು ಯಾವ ಮಾತ್ರ ಒಪ್ಪಿಕೊಳ್ಳದವನು, ನಂತರ ಮಾತನಾಡಿದ ಮಾತುಗಳೆಲ್ಲವನ್ನೂ ಒಪ್ಪಿಕೊಳ್ಳುವುದೇ ಅಲ್ಲದೆ, ಸರಿಯಾದ ಮಾತುಗಳು ಹೇಳಿದ್ದೀಯೆಂದು ಹೊಗಳುವುದು ಸಹ ನಡೆದಿದೆ.

ಅದೇ ವಿಧವಾಗಿ ಮನುಷ್ಯ ಶರೀರದಲ್ಲಿನ ಮನಸ್ಸನ್ನು ಕುರಿತು, ಬುದ್ಧಿಯನ್ನು ಕುರಿತು, ಕೆಟ್ಟ ಗುಣಗಳನ್ನು ಕುರಿತು, ಒಳ್ಳೆಯ ಗುಣಗಳನ್ನು ಕುರಿತು, ಅವು ನಮ್ಮ ಶರೀರದಲ್ಲಿ ಹೇಗೆ ಕೆಲಸ ಮಾಡುತ್ತಿರುವುದು, ಆ ಕೆಲಸಗಳಿಂದ ಫಲಿತ ಬರುವ ವಿಧಾನವನ್ನು ಹೇಗಿರುವುದು ಹೇಳಿದರೆ, ಅಲ್ಲಿಯವರೆಗು ತನಗೆ ತಿಳಿಯದ ಮನಸ್ಸನ್ನು ಕುರಿತು, ಬುದ್ಧಿಯನ್ನು ಕುರಿತು ಹೇಳಿದ ವಿಷಯಗಳು ತಿಳಿದಿವೆಯೆಂದು ಸಂತೋಷಪಡುತ್ತಾನೆ. ನಂತರ ಭಗವದ್ಗೀತೆಯಲ್ಲಿ ದೇವರು ಹೇಳಿದ ವಿಷಯಗಳು ಸಹ ಖುರ್‌ಆನ್ ಗ್ರಂಥದಲ್ಲಿ ಸಹ ಇವೆಯೆಂದು, ಅವುಗಳನ್ನು ಕುರಿತು ಹೇಳಿದರೆ ಅದು ತಮ್ಮ ಖುರ್‌ಆನ್ ಗ್ರಂಥವೊಂದರ ಜ್ಞಾನವೇ ಆಗಿರುವುದರಿಂದ ಹೇಳುವವನನ್ನು ಗೌರವವಾಗಿ ನೋಡುವುದು ಆರಂಭಿಸುತ್ತಾನೆ. ಯಾವಾಗಾದರೇ ಜ್ಞಾನ ಹೇಳುವ ಮನುಷ್ಯನ ಮೇಲೆ ಗೌರವಭಾವ ಬಂದಾಗ, ಆತನು ಹೇಳಿರುವುದೆಲ್ಲಾ ಸತ್ಯವೇ ಆಗಿರುತ್ತದೆಂದು ಅಂದುಕೊಳ್ಳುತ್ತಾನೆ. ಮೊದಲು ನಾವು ನಿನ್ನ ಮಾತುಗಳು ಕೇಳುವುದಿಲ್ಲ ಅಂದ ಮನುಷ್ಯನೇ ಆತನು ಯಾವ ಮತಸ್ಥನೇ ಆಗಲೀ,

ಶರೀರದಲ್ಲಿನ ಜ್ಞಾನ ತಪ್ಪದೆ ಆತನನ್ನು ಅಕರ್ಷಿತನಾಗಿ ಮಾಡುತ್ತದೆ. ಮುಸ್ಲೀಮ್‌ರ ಖುರ್‌ಆನ್ ಗ್ರಂಥದಲ್ಲಾಗಲೀ, ಕ್ರೈಸ್ತವರ ಬೈಬಿಲ್‌ನಲ್ಲಾಗಲೀ, ಹಿಂದೂಗಳ ಭಗವದ್ಗೀತೆಯಲ್ಲಾಗಲೀ, ಹೊರಗಿನ ವಿಷಯಗಳು ಹೇಳದೆ ಮೂರು ಗ್ರಂಥಗಳಲ್ಲಿ ಒಬ್ಬನೇ ದೇವರ ವಿಧಾನದಿಂದ, ಒಂದೇ ಜ್ಞಾನವನ್ನು ಬೋಧಿಸುವುದನ್ನು ನೋಡಿದವರು, ತಮ್ಮ ಜ್ಞಾನ ಇತರ ಮತ ಗ್ರಂಥಗಳಲ್ಲಿ ಇರುವುದನ್ನು ನೋಡಿ ಸಂತೋಷಿಸುವರು. ತಮ್ಮ ವಾಕ್ಯಗಳನ್ನು ನೋಡಿದ ನಂತರ ನಮ್ಮ ಮತದಲ್ಲಿ ಇರುವುದೇ ಇತರ ಮತಗಳಲ್ಲಿ ಸಹ ಹೇಳಲಾಗಿದೆಯೆಂದು ತಿಳಿದು, ಇತರ ಮತಗಳಲ್ಲಿನ ವಾಕ್ಯಗಳನ್ನು ನೋಡಿದರೂ, ಅದು ನನ್ನ ಮತದಲ್ಲಿನ ಜ್ಞಾನದಿಂದಲೇ ಇದೆಯೆಂದು ಅಂದುಕೊಳ್ಳುವುದಕ್ಕೆ ಪ್ರಾರಂಭಿಸುವನು. ಈ ವಿಧವಾಗಿ ಸ್ವಲ್ಪ ಕಾಲಕ್ಕೆ ಆತನಲ್ಲಿ ಯಾವ ಮಾತ್ರ ಅವರು ಬೇರೆ, ನಾವು ಬೇರೆ ಎನ್ನುವ ಭಾವ ಇಲ್ಲದಂತೆ ಹೋಗುತ್ತದೆ. ಎಲ್ಲಾ ಒಂದೇ ಎನ್ನುವ ಭಾವ ಬರುತ್ತದೆ. ನೋಡಿದ್ದೀರಲ್ಲವೆ! ಮೊದಲು ಹಿಂದೂ ಹೇಳುವ ಪ್ರತಿ ಮಾತನ್ನು ವ್ಯತಿರೇಖಿಸುವವನು, ಸ್ವಲ್ಪ ಕಾಲಕ್ಕೆ ಅದೇ ಹಿಂದೂ ಹೇಳಿದ ಜ್ಞಾನವನ್ನು, ಮಾತುಗಳನ್ನು ಪೂರ್ತಿ ಸತ್ಯವೆಂದು ತಿಳಿದಿದ್ದಾನೆ. ಮೊದಲು ನಾನು ನಿಮ್ಮ ಜ್ಞಾನವನ್ನು ಕೇಳುವುದಿಲ್ಲ ಎಂದು ಹೇಳಿದವನೇ ಪುನಃ ಇದು ಸತ್ಯವಾದ ದೈವಜ್ಞಾನವೆಂದು ಹೇಳುತ್ತಿದ್ದಾನೆ. ಈ ವಿಧವಾಗಿ ಮೊದಲು ಕೇಳುವವನ ಅಭಿರುಚಿಯನ್ನು ಗುರುತಿಸಿ, ಅದರ ಪ್ರಕಾರವೇ ಮಾತನಾಡುವುದನ್ನು ಕಚಗುಳಿ ಜ್ಞಾನ ಎಂದು ಹೇಳಬಹುದು. ಈ ಸೂತ್ರವನ್ನು ಅನುಸರಿಸಿ ಎಂಥವನಿದರೂ ಎಂತಹ ಅಜ್ಞಾನವಿರುವವನಿಗಾದರೂ ಸುಲಭವಾಗಿ ಹೇಳಬಹುದು. ಈ ಪದ್ಧತಿ ಪ್ರಕಾರವೇ ನಾವು ಆರ್ಯರನ್ನು ದ್ರಾವಿಡರಾಗಿ ಬದಲಾಯಿಸಬೇಕೆಂದು ಅಂದುಕೊಂಡಿದ್ದೇವೆ.

**ಪ್ರಶ್ನೆ :–** ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರರೆನ್ನುವ ನಾಲ್ಕು ಜಾತಿಗಳಾಗಿ ಮನುಷ್ಯರಿದ್ದಾರೆಂದು ಹೇಳಿ, ಅದರಲ್ಲಿ ಕೊನೆಯವರಾದ ಶೂದ್ರರನ್ನು ಮಾತ್ರ ಅನೇಕ ಕುಲಗಳಾಗಿ ವಿಭಜಿಸಿದ್ದಾರೆ. ವೈಶ್ಯ, ಕ್ಷತ್ರಿಯ ಎನ್ನುವ ಎರಡು ಜಾತಿಗಳನ್ನು ವಿಭಜಿಸಲಿಲ್ಲ, ಏಕೆ ಹಾಗೆ ಮಾಡಿದ್ದಾರೆ?

**ಉತ್ತರ :–** ಆರ್ಯರು ತ್ರೇತಾಯುಗ ಪ್ರಾರಂಭದಲ್ಲೇ ಇಂದೂದೇಶಕ್ಕೆ ಬಾರದ ಮುನ್ನ, ಅವರಲ್ಲಿ ಮೂರು ಅಥವಾ ನಾಲ್ಕು ವರ್ಗಗಳು ಏರ್ಪಟ್ಟಿದ್ದವು. ಕುಲಗಳ ಬುನಾದಿ ಆರ್ಯರಲ್ಲಿ ಮೊದಲು ಏಷ್ಯಾ ಖಂಡದಲ್ಲಿ ಇರುತ್ತಿತ್ತು. ಆದರೆ ಆರ್ಯರು ಇಂದೂದೇಶಕ್ಕೆ ಬಂದ ನಂತರ ದ್ರಾವಿಡರನ್ನು ನೋಡಿ, ಅವರ ಕುಲರಹಿತ ಸಮಾಜವನ್ನು ನೋಡಿ, ಸಹಿಸದೆ ತಮ್ಮನ್ನು ಮಾತ್ರ ಮೊದಲು ಬ್ರಾಹ್ಮಣರಾಗಿ ಹೇಳಿಕೊಳ್ಳುತ್ತಾ, ಇಂದೂಗಳಲ್ಲಿನವರಲ್ಲಿ ಆರ್ಯರಿಗೆ ಅನುಕೂಲವಾದವರನ್ನು ವೈಶ್ಯ, ಕ್ಷತ್ರಿಯ ಕುಲಗಳಾಗಿ ವಿಭಜಿಸಿದ್ದಾರೆ. ಆರ್ಯರು ಒಂದು ಕುಲದವರು ಆದಾಗ, ಎರಡನೆ ಕುಲದವರು ವೈಶ್ಯರು, ಮೂರನೆಯವರು ಕ್ಷತ್ರಿಯರು. ಮೂರು ಕುಲಗಳಿಗೆ ಮೂರು ಹೆಸರುಗಳನ್ನು ಇಟ್ಟುಕೊಂಡ ನಂತರ ಇಂದೂ ದೇಶದಲ್ಲಿನ ಉಳಿದ ದ್ರಾವಿಡರೆಲ್ಲರನ್ನೂ ಶೂದ್ರರಾಗಿ ಮಾಡಿದ್ದಾರೆ. ಆಗಲೇ ಬ್ರಾಹ್ಮಣ ಮಾದಿಗದವರು ಅನ್ನುವ ಎರಡು ಭಾಗಗಳಾಗಿ ಇರುವವರನ್ನು ಹಾಗೇ ಇರಿಸಿ ಶೂದ್ರರಲ್ಲೇ ಅಂಟಬಾರದವರಾಗಿ ಪಂಚಮರೆನ್ನುವ ಐದನೇ ಜಾತಿಯನ್ನು ಸಹ ತಯಾರು ಮಾಡಿದ್ದಾರೆ. ಈ ವಿಧವಾಗಿ ಲೆಕ್ಕಿಸಿದರೆ ಒಟ್ಟು ಐದು ಜಾತಿಗಳಾಗಿ ಪ್ರಜೆಗಳನ್ನು ವಿಭಜಿಸುವುದು ನಡೆದಿದೆ. ಅದರಲ್ಲಿ ಬ್ರಾಹ್ಮಣ ಎನ್ನುವವರು ಆರ್ಯರಿಗೆ ಸಂಬಂಧಿಸಿದವರೆಂದು, ಉಳಿದ ವೈಶ್ಯ, ಕ್ಷತ್ರಿಯ, ಶೂದ್ರ, ಪಂಚಮ ಎನ್ನುವ ನಾಲ್ಕು ದ್ರಾವಿಡರಿಗೆ ಸಂಬಂಧಿಸಿರುವವೆಂದು ಪ್ರಚಾರ ಮಾಡಿದ್ದಾರೆ. ಆದರೇ ಏಷ್ಯಾದಿಂದ ಬಂದಿರುವವರೆಲ್ಲರನ್ನೂ ಆರ್ಯರೆಂದು ಹೇಳಿಕೊಂಡು, ಇಂದೂ ದೇಶದಲ್ಲಿ ಆರ್ಯರಿಗೆ ಅನುಕೂಲವಾಗಿ ಇರುವವರನ್ನು ಮಾತ್ರ ವೈಶ್ಯ, ಕ್ಷತ್ರಿಯ ಎನ್ನುವ ಎರಡು ಹೆಸರುಗಳಿಂದ ಹೇಳಿದ್ದಾರೆ. ಅನುಕೂಲವಾಗಿ ಇಲ್ಲದವರೆಲ್ಲರನ್ನೂ ಶೂದ್ರರಾಗಿಯೂ, ಪಂಚಮರಾಗಿಯೂ ಹೇಳುವುದು ನಡೆದಿದೆ.

ಆರ್ಯರು ಕುಲವಿಭಜನೆ ಸಮಯದಲ್ಲಿ ಎಷ್ಟೋ ಮುಂದಾಲೋಚನೆಯಿಂದ ವ್ಯವಹರಿಸುತ್ತಾ, ದ್ರಾವಿಡರಲ್ಲೇ ತಮಗೆ ಅನುಕೂಲವಾದವರನ್ನು ವೈಶ್ಯ, ಕ್ಷತ್ರಿಯ ಎಂದು ಎರಡು ವಿಧಗಳಾಗಿ ಹೇಳಿ, ಅನುಕೂಲ ಇಲ್ಲದವರನ್ನು

ಶೂದ್ರ, ಪಂಚಮ ಎಂದು ಎರಡು ವಿಧಗಳಾಗಿ ಚಿತ್ರಿಸಿ ಹೇಳಿದ್ದಾರೆ. ಇದನ್ನನುಸರಿಸಿ ಇಂದೂ ದೇಶದಲ್ಲಿನ ದ್ರಾವಿಡರನ್ನು ಆರ್ಯರು ನಾಲ್ಕು ವಿಧದವರಾಗಿ ವಿಭಜಿಸಿ, ತಾವು ಮಾತ್ರ ಪಕ್ಕದಲ್ಲಿ ಆರ್ಯರಾಗೇ ಇದ್ದಾರೆ. ಆದರೇ ಅನುಕೂಲವಾಗಿರುವ ವೈಶ್ಯರನ್ನು, ಕ್ಷತ್ರಿಯರನ್ನು ತಮ್ಮವರೆಂದು ಹೇಳಿಕೊಳ್ಳುತ್ತಾ, ವೈಶ್ಯರನ್ನು ಆರ್ಯ ವೈಶ್ಯರೆಂದೂ, ಕ್ಷತ್ರಿಯರನ್ನು ಆರ್ಯ ಕ್ಷತ್ರಿಯರೆಂದು ಹೇಳುವುದು ನಡೆದಿದೆ. ನಡೆಯಬೇಕಾಗಿರುವ ಕಾಲದಲ್ಲಿ ದ್ರಾವಿಡರು ತಮಗೆ ಅನುಕೂಲವಾಗಿ ಇರುವಹಾಗೆ, ವೈಶ್ಯ, ಕ್ಷತ್ರಿಯ ಎರಡು ಕುಲದವರನ್ನು ತಮ್ಮ ಹೆಸರಿಂದ ಕರೆಯುವಹಾಗೆ ಪ್ರಯೋಗ ಮಾಡಿದ್ದಾರೆ. ಆದರೆ ಅದರಲ್ಲಿ ಆರ್ಯವೈಶ್ಯ ಎನ್ನುವಮಾತು ಶಾಶ್ವತವಾಗಿ ನಿಂತುಹೋಗಿದೆ. ಎರಡನೆಯದಾದ ಆರ್ಯ ಕ್ಷತ್ರಿಯ ಎನ್ನುವ ಮಾತು ಶಾಶ್ವತವಾಗಿ ನಿಲ್ಲದೇ ಹೋಗಿದೆ. ಕೊನೆಗೆ ಕ್ಷತ್ರಿಯ ಎನ್ನುವ ಹೆಸರು ಮಾತ್ರ ಉಳಿದುಕೊಂಡಿತು. ಆರ್ಯಕ್ಷತ್ರಿಯ ಎನ್ನುವ ಹೆಸರು ನಿಲ್ಲಲಾರದೆ ಕ್ಷತ್ರಿಯ ಎನ್ನುವ ಪದ ಮಾತ್ರ ಉಳಿದುಹೋಯಿತು. ಆದರೂ ಕ್ಷತ್ರಿಯರು ಸಹ ಎರಡು ವರ್ಗಗಳಾಗಿ ಕಲಿಯುಗದಲ್ಲಿ ಬೇರೆಯಾಗಿದ್ದಾರೆ. ಅವರಲ್ಲಿ ಸೂರ್ಯವಂಶದವರೆಂದು, ಚಂದ್ರವಂಶದವರೆಂದು ತ್ರೇತಾಯುಗದಲ್ಲೇ ಬೇರೆಯಾಗುವುದು ನಡೆದಿದೆ.

ಅಂದಿನಿಂದ ಚಂದ್ರವಂಶ ರಾಜರು, ಸೂರ್ಯವಂಶ ರಾಜರು ಎನ್ನುವ ಹೆಸರನ್ನು ಕೇಳುತ್ತಿದ್ದೇವಾಗಲೀ, ಎಲ್ಲೂ ಸಹ ಆರ್ಯ ಕ್ಷತ್ರಿಯರನ್ನುವ ಮಾತನ್ನು ಕೇಳಲಿಲ್ಲ. ಆರ್ಯ ಕ್ಷತ್ರಿಯರೆಂದು ಆರ್ಯರಿಟ್ಟಿರುವ ಹೆಸರು ಚಿರಕಾಲ ನಿಲ್ಲದೆ ಹೋಯಿತು. ಕ್ಷತ್ರಿಯರು ಎಂದರೆ ಕ್ಷಾತ್ರವಿರುವವರು ಎಂದು ಅರ್ಥ. ಕ್ಷಾತ್ರ ಎಂದರೆ ಪೌರುಷ ಎಂದು ಒಂದು ಅರ್ಥ. ಭೂಮಿ ಅನ್ನುವ ಒಂದು ಅರ್ಥ ಬರುತ್ತದೆ. ಈ ಎರಡೂ ಇರುವವರು ರಾಜರು ಎಂದು ತಿಳಿಯುತ್ತಿದೆ. ಪೌರುಷ ಅಂದರೆ ಗಂಡುತನ ಅಥವಾ ಪುರುಷತ್ವ ಎಂದು ಅರ್ಥ. ಪುರುಷತ್ವವನ್ನು ಅನುಸರಿಸಿ ಹೆಚ್ಚಿನ ವಿವಾಹಗಳು ಇರುವವರು ರಾಜರೇ ಇದ್ದರು. ಹಾಗೇ ಭೂಮಿಯನ್ನು ಆಕ್ರಮಿಸಿಕೊಂಡು ಹೆಚ್ಚಿನ ಭೂಮಿ ಮೇಲೆ ಅಧಿಕಾರವಿರುವವರೂ

ಸಹ ರಾಜರೇ ಆಗಿರುವುದರಿಂದ ಕ್ಷತ್ರಿಯರನ್ನು ರಾಜರಾಗಿ ಹೇಳುವುದು ನಡೆದಿದೆ. ಅಂತಹ ರಾಜರ ಹತ್ತಿರ ಆರ್ಯರು ರಾಜಗುರುಗಳಾಗಿ ಇದ್ದೂ, ರಾಜರಿಗೆ ಅನೇಕ ಉಪಾಯಗಳನ್ನು, ಸಲಹೆಗಳನ್ನು ಹೇಳುತ್ತಾ, ರಾಜಸ್ಥಾನದಲ್ಲಿ ಒಳ್ಳೆ ಉನ್ನತಸ್ಥಾನದಲ್ಲಿ ಇರುತ್ತಿದ್ದರು. ಆರ್ಯರು ತಮಗೆ ಅನುಕೂಲವಾಗಿ ತಯಾರು ಮಾಡಿಕೊಂಡ ವೈಶ್ಯ, ಕ್ಷತ್ರಿಯರಲ್ಲಿ ಕ್ಷತ್ರಿಯರು ರಾಜರಾಗಿದ್ದೂ ಉನ್ನತ ಸ್ಥಿತಿಯಲ್ಲಿ ಭೂಮಿಮೇಲೆ ನಿವಾಸಿಸುತ್ತಿರುವಾಗ! ವೈಶ್ಯರು ಸಹ ವ್ಯಾಪಾರವೃತ್ತಿಯನ್ನು ಹೊಂದಿ ರಾಜರ ಹಾಗೆ ಶ್ರಮ ಇಲ್ಲದ ಜೀವನವನ್ನು ಕಳೆಯುತ್ತಿದ್ದರು. ಆರ್ಯರು ಹೆಸರು ಇಟ್ಟಿರುವ ವೈಶ್ಯ, ಕ್ಷತ್ರಿಯರೆನ್ನುವ ಎರಡು ಜಾತಿಗಳು ಭೂಮಿಮೇಲೆ ಸುಖಜೀವನವನ್ನು ಸಾಗಿಸುತ್ತಿರುವಾಗ, ಉಳಿದ ಎರಡು ಜಾತಿಗಳಾದ ಶೂದ್ರರು, ಪಂಚಮರು ಎನ್ನುವವರು ಶ್ರಮದಿಂದ ಕೂಡಿಕೊಂಡ ಕೆಲಸಗಳು ಮಾಡುತ್ತಾ ಜೀವಿಸುತ್ತಿದ್ದರು.

ಶೂದ್ರರು ಎನ್ನುವ ಮಾತನ್ನು ಮಾತನಾಡುತ್ತಿದ್ದರೂ ಅದರ ಅಸಲು ಹೆಸರು ಅದು ಅಲ್ಲ. ಕ್ಷುದ್ರಗಳನ್ನು ಮಾಡುವವರು ಕ್ಷೂದ್ರರು ಎಂದು ಅನ್ನುತ್ತಿದ್ದರು. ಕ್ಷುದ್ರ ಎಂದರೆ ನೀಚ ಎಂದು ಅರ್ಥ. ನೀಚವಾದ ಕೆಲಸಗಳು ಮಾಡುವವರು ನೀಚರು ಎಂದೂ, ಅವರನ್ನೇ ಕ್ಷೂದ್ರರು ಎಂದೂ ಅನ್ನುತ್ತಿದ್ದರು. ಕ್ಷೂದ್ರರು ಎಂದು ಕರೆಯುವುದರಲ್ಲಿ ಸ್ವಲ್ಪ ಬದಲಾವಣೆ ಬಂದು ಅದೇ ಪದವೇ ಕೊನೆಗೆ ಶೂದ್ರರು ಎಂದು ಕರೆಯಲಾಗುತ್ತಿದೆ. ಕೆಲವರು ಬಾಯಿ ತಿರುಗದೆ ಶೂದ್ರರು ಎಂದು ಹೇಳಿದರೂ ಶೂದ್ರರು ಎನ್ನುವವರು ಕ್ಷುದ್ರವಾದವರೆನ್ನುವ (ನೀಚ ವಾದವರೆನ್ನುವ) ಭಾವದಿಂದಲೇ ಇದ್ದಾರೆ. ಆದರೇ ಶೂದ್ರರು ಎನ್ನುವ ಪದವೊಂದರ ಅರ್ಥ ಕ್ಷೂದ್ರರು ಎನ್ನುವ ಪದಕ್ಕೆ ಪೂರ್ತಿ ವಿರುದ್ಧವಾಗಿ ಇದೆ. ಅದುಹೇಗೆಂದರೆ! ಶುದ್ಧ ಅಂದರೆ ಪವಿತ್ರ ಎಂದು ಅರ್ಥವನ್ನು ಕೊಡುತ್ತದೆ. ಅದರ ಪ್ರಕಾರ ಶುದ್ಧರು ಎಂದರೆ ಪವಿತ್ರರೆಂದೂ, ಶೂದ್ರರು ಎಂದರೆ ಪವಿತ್ರ ಕೆಲಸಗಳು ಮಾಡುವವರೆಂದು ಹೇಳಬಹುದು. ಆರ್ಯರು ಶೂದ್ರರನ್ನು ನೀಚರಾದವರಾಗಿ ಹೇಳುವುದಕ್ಕೆ ಕ್ಷೂದ್ರರು ಎಂದು ಹೇಳಿದರೂ, ಅದೇ ಪದ

ಕಾಲಕ್ರಮದಲ್ಲಿ ಶೂದ್ರರಾಗಿ ಬದಲಾಗಿ ಹೋಗಿದೆ. ಆದರೂ ಶೂದ್ರರು ಎನ್ನುವ ಪದವನ್ನು ನಾವು ಈ ದಿನ ಬಳಸುತ್ತಿದ್ದರೂ, ಅದನ್ನು ಯಾವ ಅರ್ಥದಿಂದ ಬಳಸುತ್ತಿದ್ದೇವೋ, ತಿಳಿಯದ ಸ್ಥಿತಿಯಲ್ಲಿ ಇದ್ದೇವೆ. ಆದರೆ ಎಲ್ಲರ ದೃಷ್ಟಿಯಲ್ಲಿ ಬ್ರಾಹ್ಮಣರು, ಶೂದ್ರರನ್ನು ದೂರವಾಗಿ ಇಟ್ಟು ಅಂಟದೆ ಇರುವುದರಿಂದ, ಶೂದ್ರರನ್ನು ಕಡಿಮೆಯವರನ್ನಾಗಿ ಅಂದುಕೊಳ್ಳುತ್ತಿದ್ದಾರೆ. ಕುಲವಿಪಕ್ಷದಿಂದ ಬ್ರಾಹ್ಮಣರು ದೊಡ್ಡವರೆಂದು ಶೂದ್ರರು ನೀಚರೆಂದು ಅಂದುಕೊಳ್ಳುವುದು ನಡೆಯುತ್ತಿದೆ.

ವೈಶ್ಯರು ವ್ಯಾಪಾರವನ್ನು ಮಾಡುತ್ತಾ, ಕ್ಷತ್ರಿಯರು ರಾಜ್ಯವನ್ನು ಆಳುತ್ತಾ ಉನ್ನತ ಸ್ಥಿತಿಯಲ್ಲಿ ಇರುವಾಗ ಅವರಿಬ್ಬರಿಗೂ ನಾವು ಹಿರಿಯರು, ಗುರುಗಳು ಎಂದು ಆರ್ಯರು ಹೇಳಿಕೊಳ್ಳುತ್ತಾ, ಅವರಮೇಲೆ ಹಿರೆತನ ಚಲಾಯಿಸುತ್ತಾ, ಅವರಿಗೆ ಸಲಹೆಗಳು ಹೇಳುತ್ತಾ ಹಾಯಾಗಿ ಜೀವಿಸುತ್ತಿದ್ದರು. ಶೂದ್ರರನ್ನು, ಪಂಚಮರನ್ನು ಪಕ್ಕಕ್ಕಿಟ್ಟು ಅವರನ್ನು ಪೂರ್ತಿ ಕಡಿಮೆಯವರಂತೆ ನೋಡುತ್ತಾ ವೈಶ್ಯ, ಕ್ಷತ್ರಿಯರನ್ನು ಮಾತ್ರ ಒಂದು ವಿಧವಾಗಿ ಗೌರವ ಭಾವದಿಂದ ನೋಡುತ್ತಾ, ಅವರಿಗೆ ಆರ್ಯವೈಶ್ಯ, ಆರ್ಯ ಕ್ಷತ್ರಿಯ ಎನ್ನುವ ಹೆಸರುಗಳನ್ನು ಸೇರಿಸಿದ್ದರೂ ಕ್ಷತ್ರಿಯರು ಆರ್ಯ ಎನ್ನುವ ಹೆಸರನ್ನು ಹೇಳಿಕೊಳ್ಳದೆ ಕೇವಲ ಕ್ಷತ್ರಿಯರೆಂದು ಹೇಳಿಕೊಳ್ಳುತ್ತಿದ್ದರು. ಕ್ಷತ್ರಿಯರನ್ನು ನೋಡಿದ ವೈಶ್ಯರು ತಾವೂ ಸಹ ಆರ್ಯ ಎನ್ನುವ ಪದವನ್ನು ತೆಗೆದುಹಾಕಿ ಕೇವಲ ವೈಶ್ಯ ಎನ್ನುವ ಶಬ್ಧದಿಂದಲೇ ಹೇಳುವಹಾಗೆ ಮಾತನಾಡಿಕೊಂಡು, ಅಂದಿನಿಂದ ಹಾಗೇ ಮಾಡುತ್ತಿದ್ದರು. ತಮ್ಮನ್ನು ವೈಶ್ಯರಾಗಿ ಹೇಳಿಕೊಳ್ಳುತ್ತಾ ಆರ್ಯವೈಶ್ಯ ಎನ್ನುವ ಪದವನ್ನು ಪಕ್ಕದಲ್ಲಿಟ್ಟಿದ್ದಾರೆ. ಕ್ಷತ್ರಿಯರು, ತಾವು ಇಟ್ಟಿರುವ ಆರ್ಯ ಪದವನ್ನು ಬಿಟ್ಟಾಗ ಅದನ್ನು ಕುರಿತು ಆರ್ಯರು ದೊಡ್ಡದಾಗಿ ತಲೆ ಕೆಡಿಸಿಕೊಳ್ಳಲಿಲ್ಲ. ಆದರೇ ಕ್ಷತ್ರಿಯರಹಾಗೆ ವೈಶ್ಯರು ಸಹ ತಮ್ಮ ಹೆಸರನ್ನು ಪಕ್ಕದಲ್ಲಿಟ್ಟು ಹೇಳಿಕೊಳ್ಳುವುದು ಆರ್ಯರಿಗೆ ಸರಿಹೋಗಲಿಲ್ಲ. ಹಾಗೆ ವೈಶ್ಯರು ತಮ್ಮ ಹೆಸರನ್ನು ಹೇಳಿಕೊಳ್ಳುವುದನ್ನು ತಮಗೆ ಅಗೌರವವಾಗಿ ಭಾವಿಸಿ, ಹೇಗಾದರೂ ವೈಶ್ಯರಿಂದ ತಮ್ಮ

ಹೆಸರನ್ನು ಹೇಳಿಸಿಕೊಳ್ಳಬೇಕೆಂದುಕೊಂಡಿದ್ದಾರೆ. ಹೊಸ ಪಥಕವನ್ನು ಹಾಕುವುದರಲ್ಲಿ ನಿಪುಣರಾದವರು ಆರ್ಯರು ಆದ್ದರಿಂದ, ಆಗ ತಮ್ಮ ಪಥಕದ ಪ್ರಕಾರ ಶೂದ್ರರಲ್ಲಿ ಒಂದು ಹೊಸ ಕುಲವನ್ನು ಸೃಷ್ಠಿಸಿದ್ದಾರೆ. ವಸ್ತುಗಳನ್ನು ಮಾರಿಕೊಳ್ಳುವ ವೃತ್ತಿಯಲ್ಲಿ ಬದುಕುವವರು ವೈಶ್ಯರೆಂದೂ, ಶರೀರವನ್ನು ಮಾರಿಕೊಳ್ಳುವ ವೃತ್ತಿ ಇರುವವರು ವೇಶ್ಯರೆಂದೂ ಹೊಸ ಕುಲವನ್ನು ಸೃಷ್ಠಿಸಿದ್ದಾರೆ. ವೇಶ್ಯರನ್ನುವ ಹೊಸ ಹೆಸರು ಬರುವುದರಿಂದ ವೈಶ್ಯರು, ವೇಶ್ಯರು ಎನ್ನುವ ಎರಡು ಹತ್ತಿರ ಶಬ್ಧದಿಂದಿರುವ ಹೆಸರುಗಳು ಬರುವುದು ನಡೆದಿದೆ.

ಈ ವಿಧವಾಗಿ ಶೂದ್ರರಲ್ಲಿ ವೇಶ್ಯರು ಎನ್ನುವ ಕುಲ ಮತ್ತೊಂದು ಇದೆಯೆಂದು ತಿಳಿದಾಗ ಅದರಿಂದ ವೈಶ್ಯರಿಗೆ ಒಂದು ಸಮಸ್ಯೆ ಬಂದಿತು. ಅಂತಹ ಸಮಸ್ಯೆ ಬರಬೇಕೆನ್ನುವ ಉದ್ದೇಶದಿಂದಲೇ ಆರ್ಯರು ವೇಶ್ಯ ಕುಲವನ್ನು ತಯಾರು ಮಾಡಿದಹಾಗೆ ಅರ್ಥವಾಗುತ್ತಿದೆ. ಜನರು ಮಾತನಾಡುವಾಗ ವೈಶ್ಯರು ಎಂದು ಹೇಳುವಕಡೆ ಬಾಯಿ ತಿರುಗದೆ ವೇಶ್ಯರು ಎಂದು ಹೇಳುವುದು, ವೇಶ್ಯರು ಎಂದು ಹೇಳುವಕಡೆ ವೈಶ್ಯರು ಎಂದು ಹೇಳುವುದು ನಡೆದಿದೆ. ಆದರೆ ವೈಶ್ಯರು ಅನ್ನುವ ಪದವನ್ನು ಬಹಳ ಜನರು ವೇಶ್ಯರು ಎಂದು ಹೇಳುವುದರಿಂದ ವೈಶ್ಯರಿಗೆ ಅದು ಅಗೌರವವಾಗಿ, ಅವಮಾನವಾಗಿ ಕಾಣಿಸತೊಡಗಿತು. ಹಾಗಿರುವಾಗ ವೈಶ್ಯರು ಎಲ್ಲರೂ ಸೇರಿ ತಮ್ಮನ್ನು ಆರ್ಯ ವೈಶ್ಯರಾಗಿ ಹೇಳಿಕೊಳ್ಳುವುದು ಒಳ್ಳೆಯದು ಅಂದುಕೊಂಡಿದ್ದಾರೆ. ತಮ್ಮ ವೈಶ್ಯ ಶಬ್ಧಕ್ಕೆ ಮೊದಲು ಆರ್ಯಶಬ್ಧವಿದ್ದರೆ ಮಾತನಾಡುವವರು ಹೇಗೆ ಮಾತ ನಾಡಿದರೂ ಇವರು ಇಂತಹ ವೈಶ್ಯರೆಂದು ಅರ್ಥ ಆಗುತ್ತದೆಂದು, ಹಾಗೆ ಆರ್ಯ ಶಬ್ಧ ಇಲ್ಲದೇ ಹೋದರೇ ಸ್ವಲ್ಪ ಕಾಲಕ್ಕೆ ತಮ್ಮ ವೈಶ್ಯರ ಸ್ಥಾನದಲ್ಲಿ ವೇಶ್ಯರ ಶಬ್ಧ ನಿಂತುಹೋಗಬಹುದೆಂದು, ಆಗ ತಾವೂ ಸಹ ಶೂದ್ರರಾಗಿ ಲೆಕ್ಕಿಸಲ್ಪಡುತ್ತೇವೆಂದು, ಹಾಗೆ ಆಗದಿರುವುದಕ್ಕೆ ಆರ್ಯ ವೈಶ್ಯರೆಂದು ಹೇಳಿಕೊಳ್ಳುವುದು ಒಳ್ಳೆಯದೆಂದು ಅಂದುಕೊಂಡಿದ್ದಾರೆ. ಅಂದಿನಿಂದ ತಮ್ಮನ್ನು ವೇಶ್ಯ ಕುಲದಿಂದ ರಕ್ಷಿಸಿಕೊಳ್ಳುವುದಕ್ಕೆ ಆರ್ಯವೈಶ್ಯರು ಎಂದು ಹೇಳಿಕೊಳ್ಳುವುದು

ಪ್ರಾರಂಭಿಸಿದ್ದಾರೆ. ಅಂದಿನಿಂದ ಭಾರತದೇಶದಲ್ಲಿ ಆರ್ಯವೈಶ್ಯರೆಂದು ಹೆಸರು ಬರುವುದು ನಡೆದಿದೆ.

ಆದರೆ ವೈಶ್ಯರಲ್ಲಿ ಕೆಲವರು ಆರ್ಯರಿಗಿಂತ ಬುದ್ಧಿವಂತರು ಇದ್ದಾರೆ. ಆರ್ಯರ ಬುದ್ಧಿ ಹೊರಗೆ ಕೆಲಸಮಾಡಿದರೆ, ವೈಶ್ಯರಲ್ಲಿ ಒಳಗು ಹೊರಗು ಎರಡು ವಿಧಗಳಾಗಿ ಬುದ್ಧಿ ಕೆಲಸಮಾಡುವವರು ಅಲ್ಲಲ್ಲಿ ಇರುತ್ತಿದ್ದರು. ಆರ್ಯರು ನಾವು ಬುದ್ಧಿವಂತರು ಎಂದು ಎಲ್ಲರಿಗೂ ತಿಳಿಯುವಹಾಗೆ ಪ್ರವರ್ತಿಸಿದರೂ, ವೈಶ್ಯರಲ್ಲಿಯೂ ಸಹ ಕೆಲವರು ಆರ್ಯರೊಂದಿಗಾಗಲೀ, ಆರ್ಯರಿಗಿಂತ ಹೆಚ್ಚಿನ ಬುದ್ಧಿ ಇರುವವರಾಗಲಿ ಇರುತ್ತಿದ್ದರು. ಆರ್ಯರಿಗಿಂತ ಹೆಚ್ಚಿನ ಬುದ್ಧಿ ಇರುವವರು ಆ ದಿನ ವೈಶ್ಯರಲ್ಲಿ ಇರುವುದರಿಂದ, ಆರ್ಯರು ತಮ್ಮ ಮೇಲೆ ಪಥಕದ ಪ್ರಕಾರ ಆರ್ಯ ಎನ್ನುವ ಪದವನ್ನು ಸೇರಿಸಿದ್ದಾರೆಂದು ಅರ್ಥ ಮಾಡಿಕೊಂಡಿದ್ದಾರೆ. ಈಗ ಆರ್ಯ ಎನ್ನುವ ಪದವನ್ನು ತೆಗೆದುಹಾಕಿದರೆ ತಾವು ವೇಶ್ಯ ಎನ್ನುವ ಶಬ್ಧದಿಂದ ಕರೆಯಲ್ಪಡುತ್ತೀವೆಂದು ಅರ್ಥ ಮಾಡಿಕೊಂಡು ಏನೂ ಮಾಡಲಾಗದೆ ಆರ್ಯ ಎನ್ನುವ ಪದವನ್ನು ಬಿಡಿಸಿಕೊಳ್ಳಲಾಗದೆ ಕೊನೆಗೆ ಆರ್ಯ ವೈಶ್ಯರಾಗಿಯೇ ಉಳಿದುಹೋಗಿದ್ದಾರೆ. ಅಂದಿನಿಂದ ಇಲ್ಲಿಯವರೆಗು ತಮ್ಮನ್ನು ಆರ್ಯವೈಶ್ಯರೆಂದು ಹೇಳಿಕೊಳ್ಳುತ್ತಿರುವರು. ಎಲ್ಲಿಯಾದರೂ ಬೋರ್ಡುಗಳಲ್ಲಾಗಲೀ, ಪ್ರಕಟಣೆಗಳಲ್ಲಾಗಲೀ ತಮ್ಮ ಕುಲ ಸಂಘ ಹೆಸರನ್ನು ಬರೆಯುವಾಗ ಆರ್ಯವೈಶ್ಯ ಸಂಘ ಎಂದು ಬರೆಯುತ್ತಿರುವರು. ತಮ್ಮ ಹಿಂದೆ ಬರುವ ತಮ್ಮ ಮಕ್ಕಳಿಗೂ ಸಹ ತಮ್ಮನ್ನು ಎಲ್ಲಿ ಬರೆದುಕೊಂಡರೂ ಆರ್ಯವೈಶ್ಯ ಎನ್ನುವ ಹೆಸರಿಂದಲೇ ಬರೆಯಬೇಕೆಂದು ಹೇಳುವುದು ಸಹ ಇದೆ. ಇದೆಲ್ಲವೂ ತ್ರೇತಾಯುಗದಲ್ಲಿಯೇ ನಡೆದ ತತಂಗ ಆಗಿರುವುದರಿಂದ, ಬಹಳ ಜನ ವೈಶ್ಯರಿಗೆ ತಮ್ಮ ಚರಿತ್ರೆ ಪೂರ್ತಿ ತಿಳಿಯದಂತೆ ಹೋಗಿದೆ. ಆದರೂ ಪೂರ್ವ ಆರ್ಯರು ಮಾಡಿದ ಕುತಂತ್ರಕ್ಕೆ ಸಾಕ್ಷಿಯಾಗಿ ಆರ್ಯವೈಶ್ಯ ಎನ್ನುವ ಶಬ್ಧ ಇಂದಿಗೂ ಉಳಿದಿದೆ. ಚರಿತ್ರೆ ತಿಳಿಯದಂತೆ ಹೋದರೂ, ಪ್ರಸ್ತುತವಿರುವ ಸಾಕ್ಷಿವೊಂದರ ಆಧಾರದಿಂದಲೇ ನಡೆದ ವಿಷಯ ಪ್ರತ್ಯಕ್ಷವಾಗಿ ಅರ್ಥವಾಗುತ್ತಿದೆ.

ಇಂದಿನ ವೈಶ್ಯರು ಸಹ ಕೃತಯುಗದಲ್ಲಿರುವ ದ್ರಾವಿಡರೇ ಆಗಿರುವುದರಿಂದ ಆರ್ಯರು ಅವರ ಅಸೂಯ ಬುದ್ಧಿಯಿಂದ ಯಾರನ್ನೂ ಬಿಡದೆ ಅಸೂಯೆಯನ್ನು ಎಲ್ಲರ ಮೇಲೆ ಪ್ರಯೋಗಿಸಿದ್ದಾರೆ. ಅಂತಹ ಪ್ರಯೋಗವೇ ಆರ್ಯವೈಶ್ಯ ಎನ್ನುವುದು. ಪೂರ್ವ ಆರ್ಯರು ಮಾಡಿದ ಮೋಸ ಇಂದಿನ ವೈಶ್ಯರಿಗೆ ತಿಳಿಯದಂತೆ ಹೋಗಿರಬಹುದು. ಕಾಲಗಮನದಲ್ಲಿ ಅವರು ಮರೆತುಹೋಗಿರಬಹುದು. ಆದರೇ ಪೂರ್ವವಿರುವ ವೈಶ್ಯರಲ್ಲಿನ ಕೆಲವರು ಆರ್ಯರಿಗಿಂತ ಮೀರಿದ ಮೇಧಾವಿಗಳಾಗಿರುವುದರಿಂದ, ಆರ್ಯರು ಮಾಡಿದ ಮೋಸವನ್ನು ಗ್ರಹಿಸಿದವರಾಗಿ, ಆರ್ಯ ಎನ್ನುವ ಪದವನ್ನು ಬಿಡಿಸಿಕೊಳ್ಳದ ಸ್ಥಿತಿಯಲ್ಲಿ ಇದ್ದು, ಆರ್ಯರು ತಮಗೆ ಮಾಡಿದ ಮೋಸಕ್ಕೆ ತಾವು ಬದುಲು ಏನು ಮಾಡಬೇಕೆಂದು ಆಲೋಚಿಸಿದ್ದಾರೆ. ತಮ್ಮಲ್ಲಿ ತಾವು ಸಮಾವೇಶಗಳು ಇಟ್ಟುಕೊಂಡು, ಆರ್ಯರನ್ನು ಮೀರಿದವರಾಗಿ ಸಮಾಜದಲ್ಲಿ ಕಾಣಿಸಬೇಕೆಂದರೆ ಏನು ಮಾಡಬೇಕೆಂದು ತರ್ಕಿಸಿ ನೋಡಿಕೊಂಡಿದ್ದಾರೆ. ಕೊನೆಗೆ ವೈಶ್ಯರಲ್ಲಿನ ಮೇಧಾವಿಗಳ ಸೂಚನೆಗಳ ಮೇರೆಗೆ ತಮ್ಮನ್ನು ಆರ್ಯರಿಗಿಂತ ದೊಡ್ಡದಾಗಿ ಕಾಣಿಸುವಹಾಗೆ, ಸಮಾಜದಲ್ಲಿ ಎಲ್ಲರಿಗೂ ತಾವು ಆರ್ಯರಿಗಿಂತ ಶ್ರೇಷ್ಠವಾದವರೆನ್ನುವ ಹಾಗೆ ಅರ್ಥವಾಗುವುದಕ್ಕೆ ತಮ್ಮ ಹೆಸರಿನ ಕೊನೆಯಲ್ಲಿ ಶ್ರೇಷ್ಠಿ ಎನ್ನುವ ಬಿರುದನ್ನು ತಗಲಿಸಿಕೊಳ್ಳಬೇಕೆಂದುಕೊಂಡಿದ್ದಾರೆ. ಅಷ್ಟೇ ಅಲ್ಲದೆ ಪ್ರಪಂಚ ಜ್ಞಾನದಲ್ಲೂ, ಪರಮಾತ್ಮ ಜ್ಞಾನದಲ್ಲೂ, ಪ್ರಪಂಚ ಮನುಜರಲ್ಲೂ ಎಲ್ಲರಿಗಿಂತ ಶ್ರೇಷ್ಟತೆ ತಮ್ಮ ಹತ್ತಿರ ಇದೆಯೆನ್ನುವ ಸೂಚನೆ ಮೇರೆಗೆ ತಮ್ಮನ್ನು ಶ್ರೇಷ್ಠಿ ಎನ್ನುವ ಶಬ್ಧದಿಂದ ಎಲ್ಲರೂ ಕರೆಯುವಹಾಗೆ, ಎಲ್ಲರೂ ಮಾತನಾಡುವ ಹಾಗೆ ಹೆಸರಿನ ಕೊನೆಯಲ್ಲಿ ಶ್ರೇಷ್ಠಿ ಎನ್ನುವ ಎರಡು ಅಕ್ಷರಗಳನ್ನು ಬರೆದುಕೊಳ್ಳುವುದು ನಡೆದಿದೆ. ಶ್ರೇಷ್ಠಿ ಎನ್ನುವುದು ಪ್ರಪಂಚ ಶ್ರೇಷ್ಠತೆಯನ್ನು, ಜ್ಞಾನ ಶ್ರೇಷ್ಠತೆಯನ್ನು ಕುರಿತು ತಿಳಿಸುವುದಾಗಿ ಇದ್ದರೂ ಪರಮಾತ್ಮ ಜ್ಞಾನದಲ್ಲಿ ಸಹ ನಾವು ಪ್ರತ್ಯೇಕವಾಗಿ ಯಾರಿಗೂ ಕಡಿಮೆ ಇಲ್ಲ ಎನ್ನುವಹಾಗೆ, ತಮ್ಮವರಲ್ಲಿ ಯಾರು ಪರಮಾತ್ಮ ಜ್ಞಾನವನ್ನು ತಿಳಿದಿರುತ್ತಾರೋ ಅವರ ಹೆಸರಿನ ಕೊನೆಯಲ್ಲಿ

ಗುಪ್ತ ಎನ್ನುವ ಪದವನ್ನು ಸೇರಿಸಿ ಬರೆದುಕೊಳ್ಳಬೇಕೆಂದು ನಿರ್ಣಯಿಸಿ ಕೊಂಡಿದ್ದಾರೆ. ಗುಪ್ತ ಎಂದರೆ ರಹಸ್ಯ ಎಂದು ಅರ್ಥ. ಪ್ರಪಂಚದಲ್ಲಿ ಅತ್ಯಂತ ರಹಸ್ಯವಾಗಿರುವುದು ದೈವಜ್ಞಾನ ಒಂದೇ ಇದೆ. ಆದ್ದರಿಂದ ಭಗವದ್ಗೀತೆಯಲ್ಲಿ ಭಗವಂತನು ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ 1,2, ಶ್ಲೋಕಗಳಲ್ಲಿ ತನ್ನ ಜ್ಞಾನವನ್ನು ರಾಜಗುಹ್ಯ ಎಂದೂ, ಗುಹ್ಯತಮಂ ಎಂದೂ ವರ್ಣಿಸಿ ಹೇಳಿದ್ದಾನೆ. ಸಂಸ್ಕೃತ ಭಾಷೆಯಲ್ಲಿ ಗುಹ್ಯ ಎಂದರೂ, ತೆಲುಗು ಭಾಷೆಯಲ್ಲಿ ಗುಪ್ತ ಎಂದರೂ ಎರಡೂ ಒಂದೇ ಅರ್ಥವನ್ನು ಕೊಡುತ್ತವೆ. ದೇವರ ಜ್ಞಾನ ಗುಹ್ಯವಾಗಿ ಇದೆಯೆಂದು ಗೀತೆಯಲ್ಲಿ ಹೇಳಿದ್ದಾರೆ. ಯಾರಿಗೂ ತಿಳಿಯದ ರಹಸ್ಯವಾಗಿ ದೇವರ ಜ್ಞಾನ ಇದೆಯೆನ್ನುವ ಅರ್ಥದಿಂದ ಆ ಮಾತನ್ನು ಹೇಳಿದ್ದಾರೆ. ರಹಸ್ಯವಾದ ದೇವರ ಜ್ಞಾನವನ್ನು ಯಾರಾದರೆ ತಿಳಿಯುತ್ತಾನೋ ಅವನು ರಹಸ್ಯ ತಿಳಿದವನೆಂದು, ಅವನನ್ನು ಗುಪ್ತ ಎಂದು ಅನ್ನಬಹುದು. ಗುಪ್ತವನ್ನು ತಿಳಿದವನು ಗುಪ್ತನು ಎಂದು ಹೇಳುತ್ತಾ, ವೈಶ್ಯರಲ್ಲಿ ದೈವಜ್ಞಾನವನ್ನು ತಿಳಿದವರನ್ನು ಪ್ರತ್ಯೇಕವಾಗಿ ಗುಪ್ತ ಎಂದು ಬರೆಯುವಹಾಗೆ ಮಾಡಿದ್ದಾರೆ. ಆದ್ದರಿಂದ ಪ್ರಪಂಚ ಜ್ಞಾನ, ಪರಮಾತ್ಮ ಜ್ಞಾನ ಎರಡೂ ಇರುವವನನ್ನು ಶ್ರೇಷ್ಠಿ ಎಂದೂ, ದೈವಜ್ಞಾನ ಒಂದೇ ಇರುವವನನ್ನು ಗುಪ್ತ ಎಂದು ಅನ್ನುವುದು ನಡೆದಿದೆ. ತ್ರೇತಾಯುಗದಲ್ಲೇ ವೈಶ್ಯರಲ್ಲಿ ಅಲ್ಲಿಯವರೆಗು ಇಲ್ಲದ ಶ್ರೇಷ್ಠಿ, ಗುಪ್ತ ಎನ್ನುವ ಪದಗಳು ಹೆಸರಿನ ಕೊನೆಯಲ್ಲಿ ಬರುವುದು ನಡೆದಿದೆ. ಈ ದಿನ ವೈಶ್ಯರಾಗಿ ಇರುವವರಿಗೆ ಬಹುಶಾ ತಮ್ಮ ಹೆಸರಿನ ಹಿಂದೆ ಇರುವ ಶ್ರೇಷ್ಠಿ, ಗುಪ್ತ ಎನ್ನುವ ಗುರುತುಗಳೊಂದರ ವಿಶಿಷ್ಠ ಅರ್ಥ ತಿಳಿದಿದೆಯೋ, ಇಲ್ಲವೋ ನಮಗೆ ತಿಳಿಯದು. ದ್ರಾವಿಡರು ಎಲ್ಲರೂ ತಮ್ಮ ಚರಿತ್ರೆಯನ್ನು ಪೂರ್ತಿಯಾಗಿ ಮರೆತುಹೋಗಿದ್ದಾರೆಂದು ಒಂದು ಸಂದರ್ಭದಲ್ಲಿ ಹೇಳಿಕೊಂಡಿದ್ದೇವೆ. ಅದರ ಪ್ರಕಾರ ಪೂರ್ವದಲ್ಲಿರುವ ವೈಶ್ಯ ಮೇಧಾವಿಗಳು ಏರ್ಪಡಿಸಿದ ವಿಧಾನ ಈ ದಿನ ತಿಳಿಯದಂತೆ ಹೋಗಿದೆಯೆಂದೆ ಹೇಳಬಹುದು. ಆದರೇ ಆದಿನ ವೈಶ್ಯ ಮೇಧಾವಿಗಳು ಮಾಡಿದ ನಿರ್ಣಯಗಳಿಗೆ ಸಾಕ್ಷಿಯಾಗಿ ವೈಶ್ಯರ ಹೆಸರಿನ ಹಿಂದೆ ಶ್ರೇಷ್ಠಿ, ಗುಪ್ತ ಎನ್ನುವ ಬಿರುದುಗಳು ಇಂದಿಗೂ ಉಳಿದಿವೆ.

ಈ ದಿನ ಪ್ರಸ್ತುತ ಕಾಲದಲ್ಲಿ ಕೆಲವರು ತಮ್ಮ ಚರಿತ್ರೆಯನ್ನು ತಾವೇ ಮರೆತುಹೋಗಿರುವುದರಿಂದ, ವೈಶ್ಯರಾದವರು ಕೆಲವರು ತಮ್ಮ ಹೆಸರಿನ ಕೊನೆಯಲ್ಲಿ ಶ್ರೇಷ್ಠಿ ಎಂದಾಗಲೀ, ಗುಪ್ತ ಎಂದಾಗಲೀ ಇಟ್ಟುಕೊಳ್ಳುತ್ತಿಲ್ಲ. ಆದರೇ ಇಂದಿಗೂ ತಮ್ಮನ್ನು ಆರ್ಯವೈಶ್ಯರೆಂದು ಹೇಳಿಕೊಳ್ಳುವುದು, ಬರೆದುಕೊಳ್ಳುವುದು ಮಾಡುತ್ತಿದ್ದಾರೆ. ಪೂರ್ವದಲ್ಲಿ ವೈಶ್ಯರಾದವರು ಆರ್ಯರಿಗಿಂತ ದೊಡ್ಡ ವರಾದ್ದರಿಂದ, ಅವರನ್ನು ಮೀರಿದ ಹೆಸರು ಇಟ್ಟುಕೊಳ್ಳುತ್ತಾ ಪ್ರಪಂಚ, ಪರಮಾತ್ಮ ಜ್ಞಾನದಲ್ಲಿ ದೊಡ್ಡವರಾಗಿರುವುದರಿಂದ ಶ್ರೇಷ್ಠಿ ಎಂದೂ, ಪರಮಾತ್ಮ ಜ್ಞಾನದಲ್ಲಿ ಮಾತ್ರ ದೊಡ್ಡವರಾದರೆ ಗುಪ್ತ ಎಂದೂ ಹೆಸರಿನ ಕೊನೆಯಲ್ಲಿ ಇಟ್ಟುಕೊಳ್ಳುತ್ತಿದ್ದರು. ವೈಶ್ಯರು ಪ್ರಪಂಚ ರಂಗಗಳಲ್ಲಾಗಲೀ, ಪರಮಾತ್ಮ ಜ್ಞಾನದಲ್ಲಾಗಲೀ ಆದಿನ ಎಲ್ಲರನ್ನು ಮೀರಿದವರಾಗಿ ಇರುತ್ತಿದ್ದರು. ಎರಡು ವಿಧಗಳ ಜ್ಞಾನಿಗಳೇ ಆಗಿರುತ್ತಿದ್ದರು. ಅದರಲ್ಲಿ ಬಹಳ ಜನ ಪ್ರಪಂಚ ಜ್ಞಾನವನ್ನು ಹೆಚ್ಚಾಗಿ ತಿಳಿದಿರುವವರಿರುವಾಗ, ವೈಶ್ಯರಲ್ಲಿ ಹೆಚ್ಚಿನ ಜನರು ಶ್ರೇಷ್ಠರು ಇರುತ್ತಿದ್ದರು. ಪರಮಾತ್ಮ ಜ್ಞಾನದಲ್ಲಿ ಕಡಿಮೆ ಜನ ಜ್ಞಾನಿಗಳು ಇರುವುದರಿಂದ, ಗುಪ್ತ ಎನ್ನುವವರು ಕಡಿಮೆಯಾಗಿ ಇರುತ್ತಿದ್ದರು. ಸಮಾಜದಲ್ಲಿ ಶ್ರೇಷ್ಠರು ಹೆಚ್ಚಾಗಿ ಗುಪ್ತರು ಕಡಿಮೆಯಾಗಿ ಇರುವುದು ಆದಿನ ಎಲ್ಲರಿಗೂ ತಿಳಿದ ವಿಷಯವೇ. ಕಾಲಕ್ರಮದಲ್ಲಿ ಶ್ರೇಷ್ಠಿಗೂ, ಗುಪ್ತಗು ಅರ್ಥ, ಭಾವ ತಿಳಿಯದಂತೆ ಹೋಗಿರುವು ದರಿಂದ ವೈಶ್ಯ ಕುಲದಲ್ಲಿ ಶ್ರೇಷ್ಠಿ, ಗುಪ್ತ ಎನ್ನುವ ಪದಗಳು ವಂಶ ಪಾರಂಪರ್ಯವಾಗಿ ಬರುವ ನಾಮಧೇಯ ಗಳೆಂದುಕೊಂಡಿದ್ದಾರೆ. ಆದ್ದರಿಂದ ಈ ದಿನ ವೈಶ್ಯರಲ್ಲಿ ಪ್ರಪಂಚ ಮೇಧಾವಿಗಳು ಅಲ್ಲದಿದ್ದರು ಅವರನ್ನು ಶ್ರೇಷ್ಠಿ ಎಂದು ಕರೆಯುವುದು ನಡೆಯುತ್ತಿದೆ. ತಂದೆ ಶ್ರೇಷ್ಠಿ ಆದರೇ ಮಗನು ಸಹ ಶ್ರೇಷ್ಠಿಯೇ ಆಗುತ್ತಾನಲ್ಲವೆ ಎಂದು, ತಂದೆ ಗುಪ್ತ ಆದರೆ ಮಗನೂ ಸಹ ಗುಪ್ತ ಎಂದೇ ಕರೆಯಿಸಿಕೊಂಡಿದ್ದಾರೆ. ಶ್ರೇಷ್ಠಿ, ಗುಪ್ತ ಎನ್ನುವ ಪದಗಳು ವಂಶಪಾರಂಪರ್ಯವಾಗಿ ಬರುವವು ಅಲ್ಲವೆಂದು, ಬಹಳ ಜನರಿಗೆ ತಿಳಿಯದು. ಶ್ರೇಷ್ಠಿ, ಗುಪ್ತ ಹಿಂದೆ ಇಷ್ಟು ರಹಸ್ಯವಿದೆಯೆಂದು, ಈ ಎರಡು ಹೆಸರುಗಳು

ಆರ್ಯರಿಗೆ ಬುದ್ಧಿ ಹೇಳುವುದಕ್ಕೆ ವೈಶ್ಯ ಮೇಧಾವಿಗಳು ನಿರ್ಣಯಿಸಿದ ಪದಗಳೆಂದು ಬಹಳ ಜನರಿಗಾಗಲೀ, ಒಟ್ಟು ಎಲ್ಲರಿಗೂ ಆಗಲೀ ತಿಳಿಯದಂತೆ ಹೋಗಿದೆಯೆಂದು ಅಂದುಕೊಳ್ಳುತ್ತಿದ್ದೇನೆ.

ಆರ್ಯರಾದವರು ಈ ದಿನ ಸಹ ಆರ್ಯ ಸಮಾಜಗಳನ್ನು ಏರ್ಪಡಿಸಿಕೊಂಡು ಮತ ಆಚಾರ ವ್ಯವಹಾರಗಳು ಹಾಳಾಗದಂತೆ ಇರುವಹಾಗೆ ಇಂದಿಗೂ ಇದ್ದರೂ, ಈಗಲೂ ಉತ್ತರ ದೇಶದಲ್ಲಿ ನಾವು ಆರ್ಯರು ಎನ್ನುವ ಜ್ಞಾಪಕದಿಂದ ಬಹಳ ಜನ ಆರ್ಯರು ಇದ್ದರೂ, ವೈಶ್ಯರ ಕುಲದಲ್ಲಿರುವ ಆರ್ಯವೈಶ್ಯ ಎನ್ನುವ ಪದವನ್ನೇ ನೋಡುತ್ತಿದ್ದಾರಾಗಲೀ, ಅವರ ದೃಷ್ಠಿಗೆ ಶ್ರೇಷ್ಠಿ, ಗುಪ್ತ ಪದಗಳು ಬರಲಿಲ್ಲ. ಆ ಎರಡು ಪದಗಳನ್ನು ಕುರಿತು ಅವರು ತಿಳಿದುಕೊಂಡರೂ, ಅವರಿಗೆ ಅವು ಅರ್ಥವೂ ಸಹ ಆಗುವುದಿಲ್ಲ. ಶ್ರೇಷ್ಠರಿಗಿಂತ ಗುಪ್ತರು ದೊಡ್ಡವರು ಎನ್ನುವ ವಿಷಯವೂ ಸಹ ಅವರಿಗೆ ತಿಳಿಯದು. ಅವರಿಗೆ ತಿಳಿಯದೆ ಹೋಗಿರುವುದೇ ಅಲ್ಲದೆ ಕೆಲವರು ವೈಶ್ಯರು ತಾವು ಪ್ರಪಂಚ ಜ್ಞಾನಿಗಳೂ ಅಲ್ಲ, ಪರಮಾತ್ಮ ಜ್ಞಾನಿಗಳೂ ಅಲ್ಲ ಎನ್ನುವಹಾಗೆ ಅವರ ಹೆಸರಿನ ಕೊನೆಯಲ್ಲಿ ಯಾವ ಗುರುತನ್ನೂ ಇಟ್ಟುಕೊಂಡಿಲ್ಲ. ಶ್ರೇಷ್ಠಿ ಎಂದಾಗಲೀ, ಗುಪ್ತ ಎಂದಾಗಲೀ ಹೆಸರಿನ ಕೊನೆಯಲ್ಲಿ ಇಲ್ಲದೆ ಬಹಳ ಜನ ಇದ್ದಾರೆ. ತಮ್ಮ ಹಿರಿಯರು ಆರ್ಯರು ಮಾಡಿದ ಕುತಂತ್ರದ ಕೆಲಸಕ್ಕೆ ಶ್ರೇಷ್ಠಿ, ಗುಪ್ತ ಎನ್ನುವ ಪದಗಳನ್ನು ಇಟ್ಟರೆ, ಅವರ ಮಾತನ್ನು ಅಲ್ಲವೆಂದು ವೈಶ್ಯರು ಶ್ರೇಷ್ಠಿ ಎಂದಾಗಲೀ, ಗುಪ್ತ ಎಂದಾಗಲೀ ಇಟ್ಟುಕೊಳ್ಳದೇ ಹೋಗುವುದು ದೊಡ್ಡ ತಪ್ಪು. ದೈವಜ್ಞಾನ ತಿಳಿಯದವರು ಗುಪ್ತ ಎಂದು ಹೆಸರಿನ ಕೊನೆಯಲ್ಲಿ ಇಟ್ಟುಕೊಳ್ಳದಿರುವುದೇ ಒಳ್ಳೆಯದು. ಆದರೇ ಶ್ರೇಷ್ಟಿ ಎಂದು ಇಟ್ಟುಕೊಳ್ಳುವುದು ಒಳ್ಳೆಯದು. ಯಾವ ವೈಶ್ಯನಿಗಾದರೂ ಸ್ವಲ್ಪಕ್ಕೆ ಸ್ವಲ್ಪ ಪ್ರಪಂಚ ಜ್ಞಾನ ಇರುವುದರಿಂದ ವೈಶ್ಯರನ್ನು ಶ್ರೇಷ್ಠಿಯೆಂದು ಕರೆಯುವುದು ಒಳ್ಳೆಯದು.

ವೈಶ್ಯರು ಕ್ಷತ್ರಿಯರಿಗಿಂತ ಮುಂದಿನ ಸಾಲಿನಲ್ಲಿ ಇರುವವರಾಗಿ, ಆರ್ಯರಿಂದಲೆ ತಾವು ಶ್ರೇಷ್ಠರೆಂದು ಅನಿಸಿಕೊಳ್ಳುವಹಾಗೆ ಶ್ರೇಷ್ಠಿ, ಗುಪ್ತ ಎಂದು ಕರೆಸಿಕೊಳ್ಳುವುದಕ್ಕೆ ಅವರ ಹೆಸರುಗಳ ಕೊನೆಯಲ್ಲಿ ಹಾಗೆ ಇಟ್ಟುಕೊಂಡರೂ, ಆರ್ಯರು ಅವುಗಳನ್ನು ದೊಡ್ಡದಾಗಿ ಇಟ್ಟುಕೊಳ್ಳದೆ, ಆರ್ಯವೈಶ್ಯರೆಂದು ವೈಶ್ಯರು ಹೇಳಿಕೊಳ್ಳುವಹಾಗೆ ಮಾಡಿದ್ದಾರೆ. ಆರ್ಯರ ಪಥಕ ಒಂದು ಕಡೆ ಕೆಲಸ ಮಾಡಿ ಇಂದಿಗೂ ಆರ್ಯವೈಶ್ಯರೆಂದು ಹೇಳಿಕೊಳ್ಳುವ ವೈಶ್ಯರಿದ್ದರೂ, ಅವರ ಹೆಸರಿನ ಕೊನೆಯಲ್ಲಿರುವ ಗುರುತುಗಳು ಆರ್ಯರು ಮಾಡಿದ ಮೋಸಗಳಿಗೆ ಎದುರು ತಿರುಗುವಂತೆ ಇರುವ ಸಾಕ್ಷಿಗಳ ಹಾಗೆ ಕಾಣಿಸುತ್ತಿವೆ. ಪೂರ್ವದಲ್ಲಿ ವೈಶ್ಯರು ಎನ್ನುವವರು ಒಂದು ಕಡೆ ಪ್ರಪಂಚ ವಿಷಯಗಳಲ್ಲಿ ಮೇಧಾವಿಗಳಾಗಿ, ಮತ್ತೊಂದು ಕಡೆ ಪರಮಾತ್ಮ ವಿಷಯದಲ್ಲಿ ಸಂಪೂರ್ಣ ಜ್ಞಾನಿಗಳಾಗಿ ಇದ್ದಾರೆನ್ನುವುದಕ್ಕೆ ಗುರುತಾಗಿ ಶ್ರೇಷ್ಠಿ, ಗುಪ್ತ ಎಂದು ಹೇಳಿಕೊಂಡರೂ, ಈ ದಿನ ಸಹ ಪೂರ್ವದ ಹಾಗೆ ವೈಶ್ಯರು ಎಲ್ಲ ರಂಗಗಳಲ್ಲಿಯೂ ಅವರ ಪ್ರತಿಭೆಯನ್ನು ತೋರಿಸುತ್ತಿದ್ದಾರೆ. ಪಂಚಾಂಗಗಳನ್ನು ಬರೆಯುವುದರಲ್ಲೂ, ಜ್ಯೋತಿಷ್ಯವನ್ನು ಹೇಳುವುದರಲ್ಲೂ ಎಲ್ಲರಿಗಿಂತ ಮುಂದೆ ಇದ್ದು ನಾವು ಯಾರಿಗೂ ಹಿಂದೆ ಇಲ್ಲ ಎಂದು ನಿರೂಪಿಸಿಕೊಳ್ಳುತ್ತಿದ್ದಾರೆ. ರಾಜಕೀಯ ರಂಗದಲ್ಲಾಗಲಿ, ಭಕ್ತಿ ಭಾವರಂಗಗಳಲ್ಲಾಗಲಿ, ಉಳಿದ ಎಲ್ಲ ರಂಗಗಳಲ್ಲಿ ವೈಶ್ಯರು ಎಲ್ಲರಿಗಿಂತ ಮುಂದೆ ಇಂದಿಗೂ ಇದ್ದಾರೆ.

ನಾನು ನನ್ನ ಸ್ವಂತ ಅನುಭವದಲ್ಲಿ ಇಂದಿನ ಕಾಲದಲ್ಲಿರುವ ಕುಲಗಳೆಲ್ಲವನ್ನೂ ಗಮನಿಸಿದ್ದೇನೆ. ಒಂದೊಂದು ಕುಲ ಒಂದೊಂದು ವಿಧವಾಗಿ ತಮ್ಮ ಹಾವ ಭಾವಗಳನ್ನು ಪ್ರದರ್ಶಿಸುತ್ತಿದೆ. ರೆಡ್ಡಿ ಕುಲವನ್ನು ನೋಡಿದ್ದೇನೆ. ಕಮ್ಮ ಕುಲವನ್ನು ನೋಡಿದ್ದೇನೆ. ನಾನು ಹುಟ್ಟಿದ್ದು ಕಮ್ಮಕುಲದಲ್ಲಿಯೇ, ಆದ್ದರಿಂದ ನಾನು ಅದನ್ನು ನೋಡದಿದ್ದರೂ ಅದೇ ನನಗೆ ಚೆನ್ನಾಗಿ ಕಾಣಿಸಿದೆ. ದೈವಜ್ಞಾನ ವಾಸನೆಯೂ ಸಹ ಈ ಕುಲಕ್ಕೆ ಸರಿಹೋಗುವುದಿಲ್ಲವೆಂದು ತಿಳಿಯಿತು. ಹಾಗೆಂದು ಭಕ್ತಿ ಭಾವಗಳು ಇಲ್ಲವೆಂದು ನಾನು ಹೇಳುತ್ತಿಲ್ಲ. ಆತ್ಮಜ್ಞಾನ ಎಂದರೆ ಏನೋ

ಅವರಿಗೆ ತಿಳಿಯದು, ಸರಿಹೋಗದು ಎಂದು ಹೇಳುತ್ತಿದ್ದೇನೆ. ಬದುಕುವುದರ ಮೇಲೆ ದೃಷ್ಠಿಯೆ ಹೊರತು ಎರಡನೆ ನೋಟವೇ ಇರುವುದಿಲ್ಲವೆಂದು ಅರ್ಥವಾಯಿತು. ರೆಡ್ಡಿಗರ ವಿಷಯಕ್ಕೆ ಬಂದರೆ ಜ್ಞಾನ ವಿಷಯಗಳಲ್ಲಿ ಸ್ವಲ್ಪ ಪರವಾಗಿಲ್ಲವೆನಿಸಿತು. ಹಣ ಸಂಪಾದನೆ ಇದ್ದು, ಖರ್ಚು ಮಾಡುವುದು ಎರಡೂ ಸಮಾನವಾಗಿ ಇದ್ದರೂ, ದೌರ್ಜನ್ಯವಿದ್ದರೂ, ಸ್ವಲ್ಪ ಪಾಪಭೀತಿ ಇದೆ. ದೇವತಾ ಭಕ್ತಿ ಇದ್ದರೂ ಅಷ್ಟಕ್ಕೆ ನಿಲ್ಲದೆ ಆತ್ಮ ಜ್ಞಾನವು ಸಹ ಇದೆ. ಸಮಾಜದಲ್ಲಿ ಆರ್ಥಿಕವಾಗಿ, ರಾಜಕೀಯವಾಗಿ, ಭೂಸ್ವಾಮಿಗಳಾಗಿ, ವ್ಯಾಪಾರಿಗಳಾಗಿ ಉಳಿದ ಕೆಲವು ವಿಷಯಗಳಲ್ಲಿ ಸಮಾನವಾಗಿ ಮುಂದಕ್ಕೆ ಹೋಗುವವರಾಗಿ ಕಮ್ಮ, ರೆಡ್ಡಿ ಸಾಮಾಜಿಕ ವರ್ಗದವರೇ ಹೆಚ್ಚಾಗಿ ಇದ್ದಾರೆ. ಆದ್ದರಿಂದ ದೈವಜ್ಞಾನದ ಬಗ್ಗೆ, ಆತ್ಮಜ್ಞಾನದ ಬಗ್ಗೆ ಈ ಎರಡು ಕುಲಗಳಲ್ಲಿ ಏನು ವ್ಯತ್ಯಾಸ ಇದೆಯೋ ನಾನು ಗಮನಿಸಿ ಹೇಳುತ್ತಿದ್ದೇನೆ. ಪೂರ್ವದಲ್ಲಿ ದ್ರಾವಿಡರಾಗಿ ಇರುವವರೇ ಈದಿನ ಕಮ್ಮ, ರೆಡ್ಡಿಗರ ಕುಲಗಳಾಗಿ ಸಹ ವಿಭಜಿಸಲ್ಪಟ್ಟಿದ್ದಾರೆ. ಸುಮಾರು ಸಮಾನ ಸಾಮಾಜಿಕ ಪ್ರತಿಷ್ಠೆಗಳಿರುವ ಈ ಎರಡು ಕುಲಗಳನ್ನು ನೋಡುವುದಾದರೆ, ಸುಮಾರು ಇಂದಿನ ದ್ರಾವಿಡರು ಹೇಗೆ ಇದ್ದಾರೋ ತಿಳಿಯಬಹುದೆಂದು ಹೇಳುತ್ತಿದ್ದೇನೆ.

ಎರಡು ಕುಲಗಳು ಒಂದೇ ದ್ರಾವಿಡ ಜಾತಿಯಿಂದ ಬಂದಿರುವವೇ. ಆದ್ದರಿಂದ ಈ ಎರಡು ಕುಲಗಳನ್ನು ಕುರಿತು ಸ್ವಲ್ಪ ಮಾತನಾಡಬೇಕಾಗಿ ಬಂದಿದೆ. ಕಮ್ಮ, ರೆಡ್ಡಿ ಎರಡು ಕುಲದವರಲ್ಲಿ ಕುಲ ಎನ್ನುವ ಪ್ರಭಾವ ಸಹ ಸ್ವಲ್ಪ ಇದೆಯೆಂದು ಕೆಲವು ನಿರೂಪಣೆಗಳು ನಾನು ನೋಡಿ ತಿಳಿದಿದ್ದೇನೆ. ಒಂದು ಕುಲ ಎಂದರೆ ಸ್ವಲ್ಪ ಪ್ರತ್ಯೇಕ ಭಾವವಿರುತ್ತದೆಂದು, ಹಾಗೆ ಆ ಕುಲ ಅಭ್ಯಾಸವಾಗಿರುತ್ತದೆಂದು ಅರ್ಥ ಮಾಡಿಕೊಂಡಿದ್ದೇವೆ. ಕುಲಗಳು ನಾವು ಏರ್ಪಡಿಸಿಕೊಂಡಿರುವವೇ ಆದರೂ ಅವುಗಳಲ್ಲಿನ ಹುದ್ದೆ, ಯೋಗ್ಯತೆಗಳನ್ನು ಸಹ ನಾವೇ ಏರ್ಪಡಿಸಿಕೊಂಡಿದ್ದೇವೆಂದು ಹೇಳಬಹುದು. ಕೆಲವರು ಕುಲದಲ್ಲಿ ಏನಿದೆ ಗುಣದಲ್ಲಿಯೆ ಇದೆ ಅಲ್ಲವೆ! ಅನ್ನುತ್ತಿರುತ್ತಾರೆ. ನಾವು ಸಹ ಅದೇ

ಹೇಳುತ್ತಾ ಒಂದೊಂದು ಕುಲ ಒಂದೊಂದು ಭಾವಕ್ಕೆ ಅಭ್ಯಾಸವಾಗಿದೆ ಎಂದು ಅನ್ನುತ್ತಿದ್ದೇವೆ. ಆರ್ಯರು, ದ್ರಾವಿಡರು ಎಲ್ಲರೂ ಮನುಷ್ಯರೇ ಆದರೂ ನಾವು ದೊಡ್ಡವರು ಎನ್ನುವ ಭಾವ ಆರ್ಯರಲ್ಲಿ ಒಳಗೊಂಡಿದೆ. ಹಾಗೇ ಎಷ್ಟೋ ಕುಲಗಳಲ್ಲಿ ಎಷ್ಟೋ ಭಾವಗಳು ತುಂಬಿಕೊಂಡಿವೆ. ಒಂದು ಕುಲದಲ್ಲಿ ಒಂದು ಭಾವವಿದ್ದು ಆ ಕುಲವನ್ನು ದ್ರಾವಿಡ ಭಾವದಿಂದ ದೂರ ಮಾಡುತ್ತಿದೆ. ಆದ್ದರಿಂದ ನನ್ನ ಹತ್ತಿರಕ್ಕೆ ಬಂದ ಹೊಸಬರನ್ನು ನಿನ್ನ ಕುಲ ಯಾವುದು ಎಂದು ಮೊದಲು ಕೇಳುತ್ತೇನೆ. ಅವರಿರುವ ಕುಲಗಳನ್ನನುಸರಿಸಿ ಅವನಲ್ಲಿ ಸಹಜವಾಗಿ ಯಾವ ಭಾವವಿರುತ್ತದೊ ಅಂದಾಜು ಹಾಕಿಕೊಳ್ಳುತ್ತೇವೆ. ಆಗ ಆತನನ್ನು ಆತನ ಸಹಜ ಭಾವದಿಂದ ತೊಲಗಿಸಿ ದ್ರಾವಿಡ ಭಾವಕ್ಕೆ ಹತ್ತಿರವಾಗುವಹಾಗೆ ಮಾಡುವುದಕ್ಕೆ ಪ್ರಯತ್ನಿಸುತ್ತೇನೆ. ನಮಗೆ ಎಲ್ಲ ಕುಲಗಳು ಸಮಾನವೇ ಆದರೂ, ಅವುಗಳಲ್ಲಿನ ಭಾವಗಳು ಸಮಾನವಲ್ಲ ಎಂದು ತಿಳಿದಿದೆ. ಉದಾಹರಣೆಗೆ ಎರಡು ಸಮಾನ ಕುಲಗಳಾಗಿರುವ ರೆಡ್ಡಿ ಕಮ್ಮ ಕುಲಗಳಲ್ಲಿನ ಭಾವಗಳು ಆತ್ಮಜ್ಞಾನದ ಬಗ್ಗೆ ಹೇಗಿವೆಯೋ ತಿಳಿದುಕೊಳ್ಳುವುದಕ್ಕೆ ಒಂದೇ ಡಾಕ್ಟರ್ ವೃತ್ತಿ ಮಾಡುವ ಒಬ್ಬ ರೆಡ್ಡಿ ಡಾಕ್ಟರ್ ಹತ್ತಿರಕ್ಕೆ, ಒಬ್ಬ ಕಮ್ಮ ಡಾಕ್ಟರು ಹತ್ತಿರಕ್ಕೆ ನಾನು ಹೋಗಿ ಭೇಟಿ ಮಾಡುವುದು ನಡೆಯಿತು. ಆ ಇಬ್ಬರು ಡಾಕ್ಟರ್‌ಗಳಿಗು ನಾನು ಕಮ್ಮ ಕುಲಸ್ಥನೆಂದು ತಿಳಿದಿತ್ತು. ಒಬ್ಬ ಆಧ್ಯಾತ್ಮಿಕ ತಜ್ಞನೆಂದು ತಿಳಿದಿದೆಯಾಗಲೀ, ಆಧ್ಯಾತ್ಮಿಕದಲ್ಲಿ ನಾನು ಎಷ್ಟು ದೊಡ್ಡವನೆನ್ನುವ ವಿಷಯ ಮಾತ್ರ ಅವರಿಗೆ ತಿಳಿಯದು. ಇಬ್ಬರಿಗೂ ತಿಳಿದಿರುವುದರಲ್ಲಿ ಜ್ಞಾನವನ್ನು ಹೇಳುತ್ತಾನೆ. ಪುಸ್ತಕಗಳನ್ನು ಬರೆಯುತ್ತಾನೆ ಎಂದು ಮಾತ್ರ ತಿಳಿದಿತ್ತು. ಮೊದಲು ಹೈದರಾಬಾದ್‌ನಲ್ಲಿ ಕಮ್ಮಕುಲಸ್ಥನಾಗಿರುವ ದಂತದ ಡಾಕ್ಟರ್ ಹತ್ತಿರಕ್ಕೆ ದಂತ ಸಮಸ್ಯೆಯಿಂದ ಹೋಗಬೇಕಾಯಿತು. ನಾನು ಅಲ್ಲಿಗೆ ಹೋದ ಕೂಡಲೇ ಆತನು "ಲೋಕದಲ್ಲಿ ಎಲ್ಲರೂ ಸೋಂಬೇರಿಗಳಾಗಿ ತಯಾರಾಗುತ್ತಿದ್ದಾರೆ ಹೀಗಾದರೆ ದೇಶ ಹೇಗೆ ಮುಂದುವರಿಯುತ್ತದೆ?" ಎಂದು ಅಸಂದರ್ಭವಾಗಿ ಮಾತನಾಡಿದ್ದಾನೆ. ಆತನು ಯಾರನ್ನೋ ಕುರಿತು ಮಾತನಾಡಿದ ಹಾಗೆ ಮಾತನಾಡಿದರೂ, ಆತನು ಮಾತನಾಡುವುದು ನನ್ನನ್ನು ಕುರಿತೇ ಎಂದು

ನನಗೆ ಅರ್ಥವಾಗಿದೆ. ದೇವರು ದೆವ್ವ ಅಂದುಕೊಳ್ಳುತ್ತಾ ಮಾತುಗಳನ್ನು ಹೇಳುತ್ತಾ ಪ್ರಜೆಗಳ ಮೇಲೆ ಬಿದ್ದು ಹಣವನ್ನು ಸಂಪಾದಿಸಿಕೊಳ್ಳುತ್ತಾ, ಬದುಕು ಬಾಳ್ವೆ ಇಲ್ಲದವರು ತಯಾರಾಗಿದ್ದಾರೆಂದು ನನ್ನನ್ನು ಪರೋಕ್ಷವಾಗಿ ಅಂದಂತೆ ನನಗೆ ಅರ್ಥವಾಯಿತು. ನಂತರ ಆತನು ನೂರು ರೂಪಾಯಿಗಳ ಚಿಕಿತ್ಸೆಗೆ ಇಲ್ಲದಿರುವವು, ಆಗದಿರುವವು ಹೇಳಿ ಎರಡು ಸಾವಿರ ಕಸಿದಿದ್ದಾನೆ. ನಾನು ಒಂದು ಕಾಲದಲ್ಲಿ ಡಾಕ್ಟರೇ ಆದ್ದರಿಂದ ಅಲ್ಲಿ ಎಷ್ಟು ಚಿಕಿತ್ಸೆ ಅವಶ್ಯ ಎನ್ನುವುದು ನನಗೆ ಚೆನ್ನಾಗಿ ತಿಳಿದಿದೆ. ಆ ಡಾಕ್ಟರಿಗೆ ಹಣ ಸಂಪಾದಿಸುವುದೇ ಧ್ಯೇಯವಾಗಿ ಇರುವುದರಿಂದ, ಆತನು ಅಕ್ರಮವಾಗಿ ಹಣ ಕಸಿದಿದ್ದಾನೆಂದು ತಿಳಿಯಿತು. ಹಣ ಕಸಿದರೂ ಫರವಾಗಿಲ್ಲ, ಅದು ಆತನ ಸ್ವಭಾವ ಅಂದುಕೊಳ್ಳೋಣ. ಅದೂ ಅಲ್ಲದೆ ಜ್ಞಾನಿಗಳೆಲ್ಲರನ್ನೂ ಸೋಂಬೇರಿಗಳನ್ನು ಮಾಡಿ ಮಾತನಾಡುವುದು ಮತ್ತಷ್ಟು ವಿಚಿತ್ರವಾಗಿದೆ. ಮೊದಲಿನಿಂದ ಎಷ್ಟೋ ಜನ ಕಮ್ಮಕುಲದವರನ್ನು ನೋಡಿ ಅವರ ಹತ್ತಿರ ಜ್ಞಾನಕ್ಕಾಗಲೀ, ಜ್ಞಾನಿಗಳಿಗಾಗಲೀ ಯಾವ ಬೆಲೆ ಇರುವುದಿಲ್ಲವೆಂದು ಗ್ರಹಿಸಿದ್ದೇವೆ. ಅದರಲ್ಲಿ ಕೊನೆಯ ಡಾಕ್ಟರ್ ವಿಷಯವನ್ನು ನಿಮಗೆ ಹೇಳಿದ್ದೇನೆ ಅಂದುಕೊಳ್ಳಿ.

ನಂತರ ಸ್ವಲ್ಪ ಕಾಲಕ್ಕೆ ಅನಂತಪುರದಲ್ಲಿ ರೆಡ್ಡಿ ಕುಲಸ್ಥನಾದ ಒಬ್ಬ ಡಾಕ್ಟರ್ ಹತ್ತಿರಕ್ಕೆ ಹೋಗಿದ್ದೇನೆ. ಆತನಿಗೂ ಸಹ ನಾನು ಕಮ್ಮ ಕುಲಸ್ಥನೆಂದು ಗೊತ್ತು, ಆಧ್ಯಾತ್ಮಿಕತಜ್ಞನೆಂದೂ ಗೊತ್ತು. ನಾನು ಡಾಕ್ಟರ್‌ರವರ ಹತ್ತಿರಕ್ಕೆ ಹೋದ ಕೂಡಲೇ ಆತನು ಎದ್ದು ನಿಂತುಕೊಂಡು ಗೌರವವಾಗಿ ಮಾತನಾಡುವುದು ನಡೆಯಿತು. ಕೆಲವು ಆರೋಗ್ಯ ಪರೀಕ್ಷೆಗಳ ಹತ್ತಿರಕ್ಕೆ ತಾನೇ ಬಂದು ಸ್ವತಹವಾಗಿ ಪರೀಕ್ಷಿಸಿ ನೋಡಿ, ಅವುಗಳ ಫಲಿತಗಳನ್ನು ಕೂಡಲೇ ಬರೆದು ಕೊಡುವುದು ನಡೆಯಿತು. ಅನಂತಪುರದಲ್ಲಿನ ಡಾಕ್ಟರ್‌ರವರು ಒಂದು ರೂಪಾಯಿ ಸಹ ತೆಗೆದುಕೊಳ್ಳದೆ ಉಚಿತವಾಗಿ ನೋಡಿದ್ದಾರೆ. ನನ್ನಲ್ಲಿನ ಆಧ್ಯಾತ್ಮಿಕವನ್ನು ಗೌರವಿಸಿ ಮಾತನಾಡಿದ್ದಾರೆ. ಅದೇ ಹೈದರಾಬಾದ್‌ನಲ್ಲಿ ಡಾಕ್ಟರ್ ಕನಿಷ್ಠ ಗೌರವವನ್ನು

ಕೊಡದೇ ಹೋದರೂ ಜ್ಞಾನಿಗಳನ್ನು ಸೋಂಬೇರಿಗಳೆಂದು ಮಾತನಾಡುವುದು ನಡೆದಿದೆ. ಹಣ ವಿಪರೀತವಾಗಿ ಕಸಿಯುವುದು ನಡೆದಿದೆ. ಇಬ್ಬರೂ ಡಾಕ್ಟರ್‌ಗಳೆ, ಇಬ್ಬರ ಹತ್ತಿರಕ್ಕೆ ಹೋಗಿರುವುದು ನಾನು ಒಬ್ಬನೇ. ಆದರೇ ಒಬ್ಬರು ರೆಡ್ಡಿ, ಒಬ್ಬರು ಕಮ್ಮ ಆಗಿರುವುದರಿಂದ ಕಮ್ಮ ಕುಲಸ್ಥನು ತನ್ನ ಕುಲ ಸಹಜತ್ವವನ್ನು ತೋರಿಸಿದ್ದಾನೆ. ಹಾಗೇ ರೆಡ್ಡಿ ಕುಲಸ್ಥನು ಸಹ ತನ್ನ ಸ್ವಭಾವವನ್ನು ತೋರಿಸಿದ್ದಾನೆ. ಒಂದು ಕುಲದ ವ್ಯತ್ಯಾಸದಿಂದ ಭಾವಗಳು ಎಷ್ಟು ವ್ಯತ್ಯಾಸ ಇವೆಯೋ ಚೆನ್ನಾಗಿ ಅರ್ಥವಾಗಿ ಹೋಗುತ್ತಿದೆ. ಈ ವಿಧವಾಗಿ ನನಗಿರುವ 64 ವರ್ಷಗಳ ವಯಸ್ಸಿನಲ್ಲಿ ಎಷ್ಟೋ ಜನರನ್ನು ನೋಡಿ ಗ್ರಹಿಸಿ ಕೊನೆಗೆ ಬಂದಿರುವ ನಿರ್ಣಯವನ್ನು ತಿಳಿಸುತ್ತಿದ್ದೇನೆ. ಕುಲಗಳಲ್ಲಿ ಭಾವಗಳು ಇರುತ್ತವೆಂದು ನನಗೆ ಚೆನ್ನಾಗಿ ಅರ್ಥವಾಯಿತು.

ಈ ವಿಧವಾಗಿ ನನಗೆ ಹತ್ತಿರವಿರುವ ಎಷ್ಟೋ ಕುಲಗಳನ್ನೂ ಅವುಗಳ ಭಾವಗಳನ್ನೂ ನೋಡಿದ್ದೇನೆ. ಅಂತಹ ಅನುಭವದಿಂದ ಕುಲಗಳ ಪ್ರಸ್ತಾವ ನೆಯೇ ಇಲ್ಲದಂತೆ ಹೋದರೆ ಸಮಾಜ ಎಷ್ಟೋ ಚೆನ್ನಾಗಿರುತ್ತದೆಂದು ಅಂದುಕೊಂಡಿದ್ದೇನೆ. ಅಂತಹ ಕುಲನಿರ್ಮೂಲನೆ ಕಾರ್ಯವನ್ನು ನಾವು ಯಾವಾಗಲೋ ಪ್ರಾರಂಭಿಸಿದ್ದೇವೆ. ಆತ್ಮಜ್ಞಾನಕ್ಕೆ ಬೆಲೆ ಕೊಡದ ಕುಲಗಳಿಗೆ ದೂರವಾಗಿದ್ದೂ ಅವರನ್ನು ಜ್ಞಾನಿಗಳಾಗಿ ಬದಲಾಯಿಸಿ ಹತ್ತಿರ ಮಾಡಿ ಕೊಳ್ಳುತ್ತಿದ್ದೇವೆ. ಎಲ್ಲರನ್ನೂ ಒಂದೇ ದೈವ ಭಾವದೊಳಗೆ ತಂದು, ಅಸಲಾದ ದ್ರಾವಿಡ ರಾಜ್ಯವನ್ನು ಸ್ಥಾಪಿಸಬೇಕೆಂದು ಅಂದುಕೊಂಡಿದ್ದೇವೆ. ಅದು ಒಂದು ದೊಡ್ಡ ಕಾರ್ಯ, ನಮ್ಮದಾ ಚಿಕ್ಕ ಜೀವನ. ಈಗಾಗಲೆ 64 ವರ್ಷಗಳ ಕಾಲ ಕಳೆದುಹೋಗಿದೆ. ಕಳೆಯಬೇಕಾಗಿರುವುದು ಬಹಳ ಕಡಿಮೆ ಕಾಲವಿದೆ. ಇಷ್ಟು ಚಿಕ್ಕ ಕಾಲದಲ್ಲಿ ಅಷ್ಟು ದೊಡ್ಡ ಕಾರ್ಯ ನೆರವೇರುತ್ತದಾ? ಎಂದು ಪ್ರಶ್ನೆ ಬಂದರೂ ಅದಕ್ಕೆ ಸಮಾಧಾನ "ಪ್ರಾರಂಭಿಸಬೇಕಾಗಿರುವುದು ನಾವು ಮುಗಿಸುವುದು ಬೇರೊಬ್ಬರು" ಎನ್ನುವ ಸೂತ್ರದ ಪ್ರಕಾರ ಪ್ರಾರಂಭಿಸಬೇಕಾದ ಜವಾಬ್ದಾರಿ ನನಗಿದೆ. ಆದ್ದರಿಂದ ಒಳ್ಳೆಯ ಕಾರ್ಯಕ್ಕಾಗಿ ಪ್ರಯತ್ನವನ್ನು

ಪ್ರಾರಂಭಿಸಿದ್ದೇವೆ ಅಷ್ಟೇ. "ಕಣ್ಣಿಗೆ ಕಾಣಿಸುವವನು ಪ್ರಾರಂಭಿಸಿದರೇ ಕಾಣಿಸದವನು ಮುಗಿಸುತ್ತಾನೆ" ಎಂದು ನಾನು ಹೇಳುತ್ತಿದ್ದೇನೆ.

ಒಬ್ಬ ಆರ್ಯರು ದ್ರಾವಿಡರನ್ನು ಬೇರೆ ಮಾಡುವುದರಿಂದ ಲೋಕದಲ್ಲಿ ಎಷ್ಟೋ ಕುಲಗಳು ಬಂದಿವೆ. ಕುಲಗಳನ್ನು ಸೇರಿಸಿದರೆ ಪುನಃ ದ್ರಾವಿಡರು ಬರುತ್ತಾರೆ. ದ್ರಾವಿಡರು ಬಂದರೆ, ಮೂರು ಆತ್ಮಗಳ ದ್ರಾವಿಡ ಜ್ಞಾನ ಬರುತ್ತದೆ. ಮೂವರು ಪುರುಷರ ಜ್ಞಾನ ಬಂದರೆ ಪುನಃ ಕೃತಯುಗದಲ್ಲಿನ ಇಂದೂಗಳು ಬರುತ್ತಾರೆ. ಭಾರತದೇಶ ಪೂರ್ತಿ ಇಂದೂದೇಶವಾಗಿ ಬದಲಾವಣೆ ಹೊಂದುತ್ತದೆ. ಪ್ರತಿ ವ್ಯಕ್ತಿಯಲ್ಲೂ ಜ್ಞಾನಶಕ್ತಿ ಇರುತ್ತದೆ. ಈ ದಿನ ಯಾವ ಶಕ್ತಿ ಇಲ್ಲದ ಸಾಧಾರಣ ಜೀವನ ಕಳೆಯುವುದಕ್ಕಿಂತ ದೈವಶಕ್ತಿಯಿಂದ ತುಂಬಿರುವ ಜೀವನ ಕಳೆಯುವುದು ಮುಖ್ಯ. ಆದ್ದರಿಂದ ಪ್ರತಿ ಮನುಷ್ಯ ಪ್ರಸ್ತುತವಿರುವ ತನ್ನ ಕುಲ, ಮತಗಳನ್ನು ಪಕ್ಕಕ್ಕಿಟ್ಟು, ನಾನು ಮನುಷ್ಯನು ಎಂದು ತಿಳಿದು, ಮನುಷ್ಯನಿಗಿರಬೇಕಾದ ಪ್ರಾಥಮಿಕ ಲಕ್ಷಣಗಳಾವುವೋ ಮೊದಲು ತಿಳಿದುಕೊಳ್ಳುವುದಕ್ಕೆ ಪ್ರಯತ್ನಿಸಬೇಕು. ಪ್ರಾಥಮಿಕವಾಗಿ ಮನುಷ್ಯನಿಗೂ ಮನುಷ್ಯನಿಗೂ ಯಾವ ವ್ಯತ್ಯಾಸವಿಲ್ಲ. ಒಬ್ಬ ಮನುಷ್ಯನಲ್ಲಿರುವ ಮನಸ್ಸು, ಬುದ್ಧಿ, ಚಿತ್ತ, ಅಹಂ ಎಲ್ಲಾ ಸಮಾನವಾಗಿರುವುದೇ ಅಲ್ಲದೆ ಅದರಲ್ಲಿನ ಜೀವಾತ್ಮನು ಸಹ ಎಲ್ಲರಲ್ಲಿ ಸಮಾನವಾಗಿಯೇ ಇದ್ದಾನೆ. ಶರೀರದ ಒಳಗೆ ಒಬ್ಬ ಮನುಷ್ಯನಿಗೆ ಏನಿವೆಯೋ ಅವೇ ಮತ್ತೊಂದು ಮನುಷ್ಯನಿಗೂ ಸಹ ಇವೆ. ಮನುಷ್ಯನಿಗೂ ಮನುಷ್ಯನಿಗೂ ಯಾವ ವ್ಯತ್ಯಾಸ ಇಲ್ಲವೆಂದು ಪ್ರಾಥಮಿಕ ಜ್ಞಾನದಿಂದ ತಿಳಿದುಹೋಗುತ್ತಿದೆ. ಮನುಷ್ಯನಿಗೂ ಮನುಷ್ಯನಿಗೂ ಒಳಗೆ ಯಾವ ವ್ಯತ್ಯಾಸ ಇಲ್ಲದಿರುವಾಗ ಹೊರಗೆ ಮಾತ್ರ ಏಕೆ ಇಷ್ಟು ವ್ಯತ್ಯಾಸ ಇದೆಯೆಂದು ಆಲೋಚಿಸಿದರೆ, ಮನುಷ್ಯ ತನ್ನ ಹಿಂದೆ ತಂದುಕೊಂಡ ಕರ್ಮಮೂಟೆಗಳ ವ್ಯತ್ಯಾಸ ಹೊರತು ಮತ್ತೊಂದು ಇಲ್ಲವೆಂದು ತಿಳಿಯುತ್ತಿದೆ. ಕರ್ಮ ಎನ್ನುವ ಮೂಟೆ ಭಾರಗಳು ಬೇರೆ ಬೇರೆಯಾಗಿ ಇರುವುದರಿಂದ ಎಲ್ಲರೂ ಸಕ್ರಮವಾಗಿ ನಡೆಯಲಾರದೆ ಭಾರ ಹೆಚ್ಚಾಗಿರುವವನು ನಡೆಯುವ ನಡಿಗೆ ಬೇರೆಯೆನ್ನುವಹಾಗೆ ಮನುಷ್ಯ ಜೀವನಗಳು ಸಹ

ಬೇರೆಯಾಗಿವೆ. ಭಾರ ಕಡಿಮೆ ಇರುವವನು ಸುಲಭವಾಗಿ, ವೇಗವಾಗಿ ನಡೆದರೆ, ಭಾರ ಹೆಚ್ಚಾಗಿ ಇರುವವನು ಕಷ್ಟವಾಗಿ ನಿದಾನವಾಗಿ ನಡೆಯುವಹಾಗೆ ಸಮಾಜದಲ್ಲಿ ಅವರವರ ಕರ್ಮಗಳನ್ನನುಸರಿಸಿ ಅವರವರ ನಡವಳಿಕೆಗಳು ಏರ್ಪಟ್ಟಿವೆ. ಅವೇ ಕುಲಗಳಾಗಿ, ಮತಗಳಾಗಿ ಇದ್ದು ನಡೆಸುತ್ತಿವೆ. ಆದ್ದರಿಂದ ಕರ್ಮಗಳು ಹೋದರೆ ಮನುಷ್ಯರಲ್ಲಿ ಕುಲ ಮತ ವ್ಯತ್ಯಾಸಗಳು ಇಲ್ಲದಂತೆ ಹೋಗುತ್ತವೆ. ಕರ್ಮಗಳು ಹೋಗಬೇಕೆಂದರೆ ಪುನಃ ದ್ರಾವಿಡ ಜ್ಞಾನವೆನ್ನುವ ತ್ರೈತ ಸಿದ್ಧಾಂತ ಜ್ಞಾನವನ್ನು ತಿಳಿಯಬೇಕು. ಯಾವಾಗ ಮೂರು ಆತ್ಮಗಳ ದ್ರಾವಿಡ ಜ್ಞಾನವನ್ನು ತಿಳಿಯುವರೋ, ಆಗ ಪ್ರತಿಯೊಬ್ಬರು ಕರ್ಮ ಬಂಧದಿಂದ ಹೊರಬೀಳಬಲ್ಲರು. ಕರ್ಮಬಂಧದಿಂದ ಯಾವಾಗ ಹೊರಬೀಳುತ್ತಾರೋ ಆಗ ದೇವರು ತಿಳಿಯುತ್ತಾನೆ. ಆಗಲೇ ದೇವರೊಳಗೆ ಐಕ್ಯವಾಗಿ ಹೋಗಬಲ್ಲರು ಆದ್ದರಿಂದ ನನ್ನ ಮಾತು ಕೇಳಿ ನಿನ್ನ ಕುಲವನ್ನು, ನಿನ್ನ ಮತವನ್ನು ಪಕ್ಕಕ್ಕಿಟ್ಟು ಪ್ರಾಥಮಿಕ ಜ್ಞಾನವನ್ನನುಸರಿಸಿ ನೀನು ಯಾರೋ ನೀನೇ ನೋಡಿಕೋ! ಅಥವಾ ತಿಳಿದುಕೋ!! ಇದಕ್ಕಿಂತ ಹೆಚ್ಚಾಗಿ ಹೇಳುವುದಕ್ಕೆ ಏನೂ ಇಲ್ಲ.

**ಸಮಾಪ್ತಿ**



**ಅಸತ್ಯವನ್ನು ಸಾವಿರ ಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರ ಜನ ಅಲ್ಲ ಎಂದರೂ ಅದು ಅಸತ್ಯವಲ್ಲ.**



# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ**
} ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ,
ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಇಂದೂ ಜ್ಞಾನವೇದಿಕೆ




**ಇಂದೂ ಜ್ಞಾನವೇದಿಕೆ (I.G.V)**

**(Regd.No.: 168/2004)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

www. thraithashakam.org

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಪ್ರಬೋಧ ಸೇವಾ ಸಮಿತಿ




## ಪ್ರಬೋಧ ಸೇವಾ ಸಮಿತಿ (P.S.S.)

(Regd.No.: 304/1991)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

***www. thraithashakam.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ (D.S.S)**

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ-509381

e-mail id : info@dravidashreshtisangham.org

***www.dravidashreshtisangham.org***

# ದ್ರಾವಿಡ ಬ್ರಾಹ್ಮಣ




ಮಾನವಾಕಾರದಲ್ಲಿರುವ ಭಾರತದೇಶ

**www.thraithashakam.org**